# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...




**ಚಿತ್ರಗಳು** : ವಿ. ಗೋಪಾಲ್, ಕಮಲಂ ಅರಸು, ಶ್ರೀಹರಿ, ತನು, ಪ್ರತೀಕ್ ಸಿನ್ಹಾ, ರವಿ ಹೆಗ್ಗಡಿ, ರಾಂಚಂದ್ರ ಕೊಪ್ಪಲು, ವಿ. ಆರ್. ಸಿ. ಶೇಖರ್, ಗೋಪಿ

**ಮುಖಪುಟ** : ಉತ್ತರಾಖಂಡದಲ್ಲಿ ಪ್ರವಾಹದ ಒಂದು ನೋಟ

**ವಿನ್ಯಾಸ** : ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ** : ಜಿ. ವಿ. ತೇಜೋವತಿ


## ಈ ತಿಂಗಳು

ಉತ್ತರಾಖಂಡದಲ್ಲಿ ಪ್ರಕೃತಿವಿಕೋಪವು ಹೃದಯವಿದ್ರಾವಕ ದುರಂತವನ್ನು ನಮ್ಮ ದೇಶದ ಮುಂದಿಟ್ಟಿದೆ. ಅದೆಷ್ಟು ಜೀವಹಾನಿ, ಅಸ್ತವ್ಯಸ್ತತೆ, ಆತಂಕ ಉಂಟಾಗಿದೆ ಎಂಬುದನ್ನು ಪದಗಳಲ್ಲಿ ಹಿಡಿದಿಡಲು ಸಾಧ್ಯವಿಲ್ಲ. ಎಷ್ಟೇ ಸಾಂತ್ವನ ಹೇಳುತ್ತೇವೆ ಎಂದರೂ ಅದು ಅಲ್ಪವೆನಿಸುತ್ತದೆ. ಈ ಹಾನಿಯಲ್ಲಿ ಸಾವು-ನೋವುಗಳಿಗೆ ಈಡಾದವರ ಕುಟುಂಬಗಳಿಗೆ 'ಹೊಸತು' ತನ್ನ ಮರುಕ ವ್ಯಕ್ತಪಡಿಸುತ್ತದೆ. ಈಗಿನ ಹಾನಿಗೆ ಪ್ರಕೃತಿ ಮಾತ್ರವೇ ಕಾರಣವಲ್ಲ. ಮನುಷ್ಯನ ಸ್ವಯಂಕೃತಾಪರಾಧವೂ ಇದಕ್ಕೆ ದೊಡ್ಡ ಕಾರಣವೆಂಬುದು ನಿರಾಕರಿಸಲಾಗದ ಸತ್ಯ. ದೇಶದಲ್ಲಿ ಯೋಜನೆಗಳನ್ನು ಹಮ್ಮಿಕೊಳ್ಳುವಾಗ ಪ್ರಕೃತಿಯನ್ನು ತಾತ್ಸಾರದಿಂದ ನಡೆಸಿಕೊಳ್ಳುವುದು ಇಂತಹ ಅನಾಹುತಗಳಿಗೆ ಕಾರಣವಾಗುತ್ತದೆ. ಕಾಡುಗಳನ್ನು ಕಡಿದು ಖನಿಜ ಹೊರತೆಗೆಯಲು ವಿದೇಶಿ ಕಂಪನಿಗಳನ್ನು ಆಹ್ವಾನಿಸುತ್ತಿರುವ ದೇಶವು ಇದನ್ನು ಈಗ ತುರ್ತಾಗಿ ಗಮನಿಸಬೇಕು. ಉತ್ತರಾಖಂಡ ಮತ್ತು ಹಿಮಾಚಲ ಪ್ರದೇಶದ ಎಲ್ಲ ಬಂಧುಗಳಿಗೆ ಮತ್ತು ದೇಶದ ಎಲ್ಲ ಭಾಗಗಳಿಂದಲೂ ಈ ಪ್ರದೇಶಗಳಿಗೆ ಪ್ರವಾಸಕ್ಕೆ ಹೋಗಿದ್ದು ಅಪಾರ ಕಷ್ಟ-ನಷ್ಟ ಅನುಭವಿಸಿದವರಿಗೆಲ್ಲಾ 'ಹೊಸತು' ತನ್ನ ಸಾಂತ್ವನ ವ್ಯಕ್ತಪಡಿಸುತ್ತದೆ.

**– ಸಂಪಾದಕ**



ಶ್ರೀರಂಗಪಟ್ಟಣದಲ್ಲಿ ಒಂದು ಹೊಸ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವುದಾಗಿ ಕೇಂದ್ರದ ಒಬ್ಬ ಸಚಿವರು ಆಗಾಗ್ಗೆ ಘೋಷಿಸುತ್ತಿರುತ್ತಾರೆ. ೨೦೧೪ರ ಲೋಕಸಭಾ ಚುನಾವಣೆ ಮುಗಿಯುವವರೆಗೂ ಆ ಸಚಿವ ತನ್ನ ಬಾಯಿಗೆ ಬೀಗ ಜಡಿಯುವುದಿಲ್ಲ. ಮೊದಲು ಅದು ಅಲ್ಪಸಂಖ್ಯಾತರ ವಿ.ವಿ. ಆಗಿರುತ್ತದೆಂದು ಹೇಳುತ್ತಿದ್ದ ಸಚಿವರು ಈಗ ಅದು ಕೇಂದ್ರೀಯ ವಿ.ವಿ. ಆಗುತ್ತದೆ ಎಂಬಂತೆ ಆಲಾಪ ಮಾಡುತ್ತಿದ್ದಾರೆ. ವಿಶ್ವವಿದ್ಯಾನಿಲಯದ ಸ್ಥಾಪನೆಯ ವಿಷಯವನ್ನು ಸರ್ವಾಂಗೀಣವಾಗಿ ಚರ್ಚಿಸಿಯೇ ಇಲ್ಲ. ಟಿಪ್ಪುಸುಲ್ತಾನನ ಹೆಸರಿನಲ್ಲಿ ವಿ.ವಿ. ಸ್ಥಾಪನೆಗೊಳ್ಳುತ್ತದೆಂಬ ಹೇಳಿಕೆಯು ಭಾವನೆಗಳನ್ನು ಕೆರಳಿಸಿ ಬಿಟ್ಟಿದ್ದರಿಂದ ಮೂಲಭೂತ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿಲ್ಲ. ಟಿಪ್ಪುವಿನ ಹೆಸರು ಕೇಳಿದರೆ ಮೈಗೆ ಪೆಟ್ರೋಲ್ ಸುರಿದುಕೊಂಡು ಜ್ವಾಲೆ ಎಬ್ಬಿಸಿಕೊಳ್ಳುವ ಕನ್ನಡ ಸಂಶೋಧಕರೊಬ್ಬರು 'ಟಿಪ್ಪು ಒಬ್ಬ ದ್ರೋಹಿ' ಎಂದು ಕನಲುತ್ತಾರೆ ಮತ್ತು ಅದಕ್ಕೆ ಇತರರು ತೀವ್ರ ಪ್ರತಿಕ್ರಿಯೆಗಳನ್ನು ನೀಡಹೋಗುತ್ತಾರೆ. ಹೀಗಾಗಿ, ಟಿಪ್ಪುವಿನ ಬಗ್ಗೆ ಅಚಾರಿತ್ರಿಕ ಸಂ'ಶೋಧನೆಯು ಚರ್ಚೆಯ ಕೇಂದ್ರವಾಗಿಬಿಟ್ಟು, ವಿ.ವಿ. ನಿಜಕ್ಕೂ ಶ್ರೀರಂಗಪಟ್ಟಣದಲ್ಲಿ ಸ್ಥಾಪನೆಗೊಳ್ಳಬೇಕೆ ಎಂಬ ಅಂಶ ಕೈಬಿಟ್ಟುಹೋಗಿದೆ. ಹಾಗೆ ವಿ.ವಿ. ಬೇಕೇಬೇಕೆಂಬ ಶೈಕ್ಷಣಿಕ ಸನ್ನಿವೇಶವಿದ್ದರೆ ಅದಕ್ಕೆ ಯಾರ ಹೆಸರೂ ಇಡದೆ ಸುಮ್ಮನೆ ಕಾವೇರಿ ವಿ.ವಿ. ಎನ್ನಬಹುದು, ಇಲ್ಲವೆ ಹದಿಮೂರನೆಯ ಕರ್ನಾಟಕ ವಿ.ವಿ. ಎನ್ನಬಹುದು. ಟಿಪ್ಪು ಎಂದರೆ ಎದೆ ಬಡಿದುಕೊಳ್ಳುವವರ ಆರೋಗ್ಯಕ್ಕಾಗಿ ಟಿಪ್ಪುವಿನ ಹೆಸರನ್ನಿಡುವುದು ಸಹ ಉಚಿತ; ಅಥವಾ ಬುದ್ಧಿಭ್ರಮಣೆ ಮಾಡಿಕೊಂಡು ಬೌದ್ಧಿಕವಾಗಿ ಕಮರಿಹೋಗುತ್ತಾರೆಂಬ ಕನಿಕರದಿಂದ "ರಂಗನಾಥ ವಿ.ವಿ." ಎಂದು ಕರೆದರೂ ಅನಾಹುತವಿಲ್ಲ. ಈಗಾಗಲೇ ಹೇಗೂ ವೆಂಕಟೇಶ್ವರ, ಅಮೃತಾನಂದಮಯೀ ವಿಶ್ವವಿದ್ಯಾನಿಲಯಗಳಿವೆ. ರಂಗನಾಥನಿಗೂ ಒಂದು ಇರಲಿ ಬಿಡಿ, ಆಮೇಲೆ ಮಂಗನಾಥನದೂ ಒಂದು ಮಾಡಿದರಾಯಿತು. ಎಲ್ಲದಕ್ಕೂ "ಸಂಶೋಧಕ" ಪ್ರತಿಭೆಗಳೇ ತಾನೆ ಉಪಕುಲಪತಿಗಳಾಗಿ ರಾರಾಜಿಸುವುದು !

ಆದರೆ ಪ್ರಶ್ನೆ ಹೆಸರಿನದಲ್ಲವೇ ಅಲ್ಲ. ಮೈಸೂರಿಗೆ ೯ ಮೈಲಿ ದೂರದಲ್ಲಿ

(೭ನೇ ಪುಟಕ್ಕೆ)





ಸಂಪುಟ-೧೪ ಸಂಚಿಕೆ-೧೨ ಜುಲೈ ೨೦೧೩

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**


ಸಂಪಾದಕೀಯ

## ಗ್ರಾಮರಾಜ್ಯದ ಪತನ

ಭಾರತದ ಜನತೆಯ ಮಧ್ಯೆ ಬಡತನದ ರೇಖೆಯನ್ನು ಎಲ್ಲಿಗೆ ನಿಲ್ಲಿಸಬೇಕೆಂದು ತೀವ್ರವಾದ ಚರ್ಚೆ ನಡೆದಿದೆ. ಕೇಂದ್ರ ಯೋಜನಾ ಆಯೋಗ ವರ್ಷಕ್ಕೊಂದು ನೀತಿಯನ್ನು ಪ್ರಕಟಿಸುತ್ತಿದೆ. ದೇಶದ ಬಡಜನರ ನಿತ್ಯದ ಆದಾಯವನ್ನೇ ಇಂದು ಬಡತನರೇಖೆಯನ್ನು ನಿರ್ಧರಿಸಲು ಮಾನದಂಡವಾಗಿ ನೋಡಲಾಗುತ್ತಿದೆ. ಗ್ರಾಮೀಣ ಜನತೆಯ ಆದಾಯವನ್ನು ಸರಾಸರಿ ೨೦ ರೂಪಾಯಿ, ನಗರದ ಜನತೆಯ ಆದಾಯವನ್ನು ಸರಾಸರಿ ೩೦ ರೂಪಾಯಿಯ ಆಸುಪಾಸಿನಲ್ಲಿ ಎಳೆದಾಡಿ ಅದರ ಮಧ್ಯೆ ಬಡತನ ರೇಖೆಯನ್ನು ನಿರ್ಧರಿಸುವ ಪ್ರಯತ್ನಗಳು ನಡೆಯುತ್ತಿವೆ. ಇನ್ನು ರಾಜ್ಯ ಸರಕಾರಗಳು ಬಡತನರೇಖೆಯ ಕೆಳಗಿನವರನ್ನು ಗುರ್ತಿಸಲು ರಾಜಕೀಯ ಹಾಗೂ ಅನುದಾನಗಳ ಲೆಕ್ಕಾಚಾರದ ಮಾನದಂಡಗಳನ್ನೇ ಗುರಿಯಾಗಿಸಿಕೊಂಡಿವೆ. ಇವರಿಗೆ ನಿಜವಾದ ಬಡತನವನ್ನು ಗುರ್ತಿಸಿ, ಬಡತನ ನಿರ್ಮೂಲನೆಗೆ ಯೋಜನೆಗಳನ್ನು ರೂಪಿಸುವುದು ಆದ್ಯತೆಯ ವಿಷಯವಾಗಿಲ್ಲ. ಬಡತನ ರೇಖೆಯನ್ನು ಮೇಲಕ್ಕೊಯ್ದರೆ ಬಡವರ ಸಂಖ್ಯೆ ಹೆಚ್ಚಾಗುತ್ತದೆ, ಕೆಳಕ್ಕೆ ತಂದರೆ ಆ ಸಂಖ್ಯೆ ಕಡಿಮೆಯಾಗುತ್ತದೆ. ಈ ರೇಖೆಯನ್ನು ಏರಿಳಿಸುವುದರ ಹಿಂದೆ ರಾಜಕೀಯ ಲೆಕ್ಕಾಚಾರಗಳಿರುತ್ತವೆಯೇ ಹೊರತು ಬಡತನದ ನಿರ್ಮೂಲನೆಯ ಕಾಳಜಿ ಇರುವುದಿಲ್ಲ. ಕೇಂದ್ರ ಸರಕಾರವೇ ನೇಮಿಸಿದ ಸೆನ್‌ಗುಪ್ತಾ ಸಮಿತಿ ವರದಿ ದೇಶದಲ್ಲಿಯ ಅಗಾಧವಾದ ಬಡವರ ಸಂಖ್ಯೆಯನ್ನು ಗುರ್ತಿಸಿದಾಗ ಹಲವಾರು ಜನ ಮೂಗು ಮುರಿದದ್ದುಂಟು. ಪ್ರಧಾನಿ ಮನಮೋಹನ ಸಿಂಗ್ ಅವರ ಮೊದಲ ಅವಧಿಯ (ಯು.ಪಿ.ಎ.-೧) ಸರಕಾರಕ್ಕೆ ಎಡಪಕ್ಷಗಳು ಬೆಂಬಲಿಸಲು ಸಾಮಾನ್ಯ ಕನಿಷ್ಠ ಕಾರ್ಯಕ್ರಮವೇ ಆಧಾರವಾಗಿತ್ತು. ಅಂದು ಎಡಪಕ್ಷಗಳ ಒತ್ತಾಯದ ಮೇರೆಗೆ ಉದ್ಯೋಗ ಖಾತ್ರಿ ಯೋಜನೆ ಜಾರಿಗೆ ಬಂದಿತು. ಈ ಯೋಜನೆ ಜಾರಿಗೆ ಬಂದ ಮೇಲೂ ಗ್ರಾಮೀಣ ಭಾರತದ ಸ್ಥಿತಿಗತಿ ನಿರೀಕ್ಷಿತ ಅಥವಾ ಅಪೇಕ್ಷಿತ ಬದಲಾವಣೆ ಕಾಣಲಿಲ್ಲ. ಭ್ರಷ್ಟಾಚಾರವೇ ಆಡಳಿತದ ಉಸಿರಾಗಿರುವಾಗ ಈ ಪರಿಸ್ಥಿತಿ ಆಶ್ಚರ್ಯಕರವೇನೂ ಅಲ್ಲ.

ಇತ್ತೀಚೆಗೆ ನ್ಯಾಷನಲ್ ಸ್ಯಾಂಪಲ್ ಸರ್ವೆ ಆಫೀಸ್ (ಎನ್.ಎಸ್.ಎಸ್.ಓ.) ೨೦೧೧-೧೨ ಅವಧಿಯಲ್ಲಿ ನಡೆಸಿದ ಸರ್ವೆ ಭಾರತದ ಗ್ರಾಮೀಣ ಭಾಗದ ಬಡಜನರು ದಿನಕ್ಕೆ ೧೭ ರೂಪಾಯಿ, ನಗರಗಳ ಬಡಜನತೆ ೨೩ ರೂಪಾಯಿ ಖರ್ಚು ಮಾಡಿ ಬದುಕುತ್ತಿದ್ದಾರೆ ಎಂದು ಹೇಳಿದೆ. ಸೆನ್‌ಗುಪ್ತಾ ವರದಿ ಬಂದಾಗ ಇದು ವಾಸ್ತವ ವರದಿಯಲ್ಲ ಎಂದು ಹೇಳಿದವರು ಇದನ್ನು ಗಮನಿಸಬೇಕು. ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆ ಜಾರಿಗೆ ಬಂದಾಗ, ಸರಕಾರ ಒಂದು ರೂಪಾಯಿಗೆ ಒಂದು ಕೆ.ಜಿ. ಅಕ್ಕಿ ಘೋಷಣೆ ಮಾಡಿದಾಗ 'ದುಡಿವ ಜನರನ್ನು ಸೋಮಾರಿಗಳನ್ನಾಗಿ ಮಾಡುವ ಯೋಜನೆಗಳಿವು' ಎಂದು ಕೊಂಕು ಮಾತನ್ನಾಡಿದ 'ಅಭಿವೃದ್ಧಿ' ಚಿಂತಕರು ಬಡ ಭಾರತದ ವಾಸ್ತವತೆಯತ್ತ ತೆರೆದ ಕಣ್ಣಿನಿಂದ ಮುಕ್ತ ಮನಸ್ಸಿನಿಂದ ನೋಡಬೇಕಾಗಿದೆ. ಬಡತನದ ಕುರಿತ ವಾಸ್ತವ ವರದಿಗಳನ್ನು ನಂಬದೇ ಇರುವವರು ನಮ್ಮ ರಾಜ್ಯದ ೨೦೧೧ರ ಜನಗಣತಿಯ ಮಾಹಿತಿಗಳನ್ನಾದರೂ ಗಮನಿಸಿದರೆ ನಿಜಾಂಶ ತಿಳಿಯುತ್ತದೆ. ೧೯೯೦ರ ನಂತರ ಜಾಗತೀಕರಣ ಪ್ರೇರಿತ ಹೊಸ ಆರ್ಥಿಕ ನೀತಿ ಜಾರಿಗೆ ಬಂದಮೇಲೆ ಸಮಾಜದ ಮೇಲ್ಪದರಿನ ಸ್ಥಿತ್ಯಂತರಗಳನ್ನು ಗಮನಿಸಿ ಇದುವೇ ಭಾರತದ ನೈಜ ಅಭಿವೃದ್ಧಿ ಎಂದು ಭಾವಿಸಿದರೆ ನಮಗೆ ನಾವೇ ಮೋಸ ಮಾಡಿಕೊಂಡಂತೆ. ಕಳೆದ ಮೂರು ದಶಕಗಳಲ್ಲಿ ನಗರೀಕರಣ ಪ್ರಕ್ರಿಯೆ ಹೆಚ್ಚುತ್ತಿದೆ. ೨೦೧೧ರ ಜನಗಣತಿಯ ಅಂಕಿಸಂಖ್ಯೆಗಳನ್ನು ಗಮನಿಸಿದಾಗ, ರಾಜ್ಯದ ಆರು ಕೋಟಿ ಜನಸಂಖ್ಯೆಯಲ್ಲಿ ಗ್ರಾಮೀಣ ನಗರದ ಜನಸಂಖ್ಯೆಯ ಅಂತರವನ್ನು ಗಮನಿಸಿದರೆ ದಿಗಿಲಾಗುತ್ತದೆ. ನಗರ-ಗ್ರಾಮಗಳ ಮಧ್ಯೆ ಒಂದೂವರೆ ಕೋಟಿಗೂ ಕಡಿಮೆ ಅಂತರವಿದೆ. ೬೧೯೫೨೯೭ ಒಟ್ಟು ಜನಸಂಖ್ಯೆ ಇದ್ದರೆ ಇದರಲ್ಲಿ ಗ್ರಾಮೀಣ ಜನರು ೩೭೪೬೯೩೩೫. ಕಳೆದ ಎರಡು ದಶಕಗಳಿಂದ ನಡೆಯುತ್ತಿರುವ ನಗರೀಕರಣದ ವೇಗವನ್ನು ಗಮನಿಸಿದರೆ ಈ ದಶಕದಲ್ಲಿಯೇ ನಗರಗಳ ಜನಸಂಖ್ಯೆ ಗ್ರಾಮಗಳಿಗಿಂತ ಹೆಚ್ಚುತ್ತದೆ. ಇದರರ್ಥ ಹಳ್ಳಿಗಳ ದೇಶವಾದ ಭಾರತ ಹಳ್ಳಿಗರಿಗೆ ಬದುಕು ಕೊಡುವಲ್ಲಿ ವಿಫಲವಾಗಿದೆ ಎಂದು. ಇದೇ ಸಂದರ್ಭದಲ್ಲಿ ಕೃಷಿ ವ್ಯವಸ್ಥೆಯಡಿ ಬದುಕುತ್ತಿರುವ ಜನರ ಪ್ರಮಾಣ ಶೇ. ೪೯.೨೮ರಷ್ಟಾಗಿದೆ. ಇದು ಅತಿ ವೇಗದಲ್ಲಿ ಕಡಿಮೆಯಾಗುತ್ತಿದೆ. ಅಂದರೆ ಕೃಷಿ ಪ್ರಧಾನವಾಗಿದ್ದ ನಮ್ಮ ರಾಜ್ಯದಲ್ಲಿ ಶೇ. ೫೦ಕ್ಕಿಂತ ಹೆಚ್ಚಿನ ಜನ ಕೃಷಿ ವಲಯದಾಚೆ ತಮ್ಮ ಬದುಕನ್ನು ಕಂಡುಕೊಳ್ಳುತ್ತಿದ್ದಾರೆ. ಗ್ರಾಮಗಳಲ್ಲಿ ಉದ್ಯೋಗ ಖಾತ್ರಿ ಯೋಜನೆ ಮುಂತಾದ ಸರಕಾರಿ ಯೋಜನೆಗಳು ಜನರನ್ನು ಸೋಮಾರಿಗಳನ್ನಾಗಿ ಮಾಡಿದ್ದರೆ ಗ್ರಾಮದ 'ನೆಮ್ಮದಿ' ಬದುಕನ್ನು ಬಿಟ್ಟು ಜನರೇಕೆ ನಗರಗಳಿಗೆ ಬಂದು ಕೊಳಗೇರಿಗಳಲ್ಲಿ ಜೀವಿಸುವಂಥ ಪರಿಸ್ಥಿತಿ ಬರುತ್ತಿತ್ತು. ಗ್ರಾಮಗಳಲ್ಲಿ ಸಣ್ಣ ಹಿಡುವಳಿದಾರರು ಭೂಮಿ ಕಳೆದುಕೊಂಡು, ಬದುಕಿನ ತಾಪತ್ರಯಗಳಿಗೆ ಮಾರಿಕೊಂಡು ಭೂಹೀನ ಕೂಲಿಕಾರರಾಗುತ್ತಿದ್ದಾರೆ. ಇದೇ ಸಂದರ್ಭದಲ್ಲಿ ಭೂಮಾಲಿಕರು ಬ್ಯಾಂಕ್‌ಗಳು ಒದಗಿಸುವ ಸಾಲ ಸೌಲಭ್ಯಗಳನ್ನು ಪಡೆದು ಕೃಷಿಯನ್ನು ಯಾಂತ್ರೀಕರಣಕ್ಕೆ ಒಳಪಡಿಸುತ್ತಿದ್ದಾರೆ. ಇನ್ನೊಂದೆಡೆ

ಸರಕಾರ ಅಭಿವೃದ್ಧಿಯ ಹೆಸರಿನಲ್ಲಿ ರೈತರ ಭೂಮಿಯನ್ನು ಕಬಳಿಸಿ ಉದ್ಯಮಿಗಳಿಗೆ, ಭೂಗಳ್ಳರಿಗೆ ನೀಡುತ್ತಿದೆ. ಒಟ್ಟಿನಲ್ಲಿ ಗ್ರಾಮದ ಸ್ಥಿತಿ ಚಿಂತಾಜನಕವಾಗಿ ಗ್ರಾಮಗಳು ಮಕ್ಕಳ, ವಯೋವೃದ್ಧರ ಆಶ್ರಯ ತಾಣಗಳಾಗುತ್ತಿವೆ.

ಖ್ಯಾತ ಜನಪದ ಗಾಯಕರಾಗಿದ್ದ ಹುಕ್ಕೇರಿ ಬಾಳಪ್ಪನವರು ತಮ್ಮ ಪ್ರತಿ ಕಾರ್ಯಕ್ರಮದಲ್ಲಿ ಒಂದು ಹಾಡು ಹೇಳುತ್ತಿದ್ದರು ಅಥವಾ ಜನತೆ ಒತ್ತಾಯ ಮಾಡಿ ಆ ಹಾಡು ಹೇಳಿಸುತ್ತಿದ್ದರು. 'ನಮ್ಮ ಹಳ್ಳಿ ಊರ, ನಮಗ ಪಾಡ, ಯಾತಕ್ಕವ್ವ ಹುಬ್ಬಳ್ಳಿ ಧಾರವಾಡ' ಎಂಬುದು ಆ ಹಾಡು. ನಮ್ಮ ಹಳ್ಳಿ ಊರು ಯಾಕೆ ಒಳ್ಳೆಯದು ಎಂದು ಹೇಳುತ್ತಿದ್ದ ಅವರ ಹಾಡಿನಲ್ಲಿ ನಗರೀಕರಣವನ್ನು ನಿರಾಕರಿಸುತ್ತಲೇ ಗ್ರಾಮಗಳ ಸಹಬಾಳ್ವೆ, ಹಸಿರುಪೈರು, ಹಳ್ಳ, ಕೆರೆ, ಶುದ್ಧಹವೆ, ಹಾಲು, ಮೊಸರು ಹೀಗೆ ಆರೋಗ್ಯಕರವಾದ, ಸ್ವಾವಲಂಬಿಯಾದ ಬದುಕನ್ನು ವರ್ಣಿಸುತ್ತಿದ್ದರು. ಆದರೆ ಇಂದು ಸಂಪತ್ತಿನ ಒಟ್ಟುಗೂಡಿಸುವಿಕೆಯೇ ಅಭಿವೃದ್ಧಿ ಎಂದು ನಂಬಿರುವ ಸರಕಾರಗಳು, ಜಗತ್ತಿನ ಸಿರಿವಂತರ ಪಟ್ಟಿಯಲ್ಲಿ ನಮ್ಮ ದೇಶದ ಸಿರಿವಂತರನ್ನು ಕಂಡು ರೋಮಾಂಚನಗೊಳ್ಳುವ ಆರ್ಥಿಕ ತಜ್ಞರು ದುಡಿವ ಜನರನ್ನು ಸೋಮಾರಿಗಳೆಂದು ಹೀಗಳೆದ 'ಕ್ರಿಯಾಶೀಲರು' ಒಮ್ಮೆ ಗ್ರಾಮಗಳ ಬದುಕನ್ನು ಸೂಕ್ಷ್ಮವಾಗಿ ಗಮನಿಸಬೇಕು. ಅವರೇಕೆ ಗ್ರಾಮ ತೊರೆಯುತ್ತಾರೆ. 'ತಮ್ಮ ಕೂಲಿಯಾಳುಗಳಾಗುವುದನ್ನು ತೊರೆದು' ಎಂದು ಯೋಚಿಸಬೇಕು. ಸರಕಾರಗಳು ಬಂಡವಾಳ ಹೂಡಿಕೆದಾರರ ಸಮಾವೇಶಕ್ಕೆ ಕೊಡುವ ಆದ್ಯತೆಯನ್ನು ಗ್ರಾಮೀಣ ಕೃಷಿ ವ್ಯವಸ್ಥೆ ಸುಧಾರಿಸಲು ಕೊಡಬೇಕು. ಈ ಸಲದ ಜನಗಣತಿಯ ಅಂಕಿ–ಅಂಶಗಳು ಗ್ರಾಮರಾಜ್ಯದ ಪತನವನ್ನು ನಿಖರವಾಗಿ ತೋರಿಸುತ್ತಿವೆ. ಬುದ್ಧಿಜೀವಿಗಳು, ಸಾಮಾಜಿಕ ತಜ್ಞರು, ರಾಜಕೀಯ ಚಿಂತಕರು, ಕೃಷಿ ಪಂಡಿತರು, ಸಾಮಾಜಿಕ ಹೋರಾಟಗಾರರು, ಮಾಧ್ಯಮಗಳು ಈ ನಿಟ್ಟಿನಲ್ಲಿ ಗಮನಹರಿಸಬೇಕು. ಕೇವಲ ಮೇಲ್ಸೇತುವೆಗಳು, ಹೆದ್ದಾರಿಗಳು, ಬಡಾವಣೆಗಳು, ಅಪಾರ್ಟ್‌ಮೆಂಟ್‌ಗಳು, ಮಾಲ್‌ಗಳು ಅಭಿವೃದ್ಧಿಯ ಸೂಚಿಗಳಲ್ಲ. ಗ್ರಾಮಭಾರತದ ಪತನ ಈ ಉಪಖಂಡದ ನಾಗರಿಕತೆಯ ಪತನವಾಗುತ್ತದೆ. ದೇಶದಲ್ಲಿ ಶ್ರೀಮಂತರೆಷ್ಟು ಎನ್ನುವುದು ಮುಖ್ಯವಲ್ಲ ದೇಶದ ಸರ್ವಜನತೆಯ ಬದುಕು ಎಷ್ಟು ಶ್ರೀಮಂತವಾಗಿದೆ ಎನ್ನುವುದು ಮುಖ್ಯ.

ಸಿದ್ದನಗೌಡ ಪಾಟೀಲ

## ಕ್ರಿಕೆಟ್ : ಆಟಕ್ಕಿಂತ ಮೋಸವೇ ಹೆಚ್ಚಾದಾಗ

**ಭಾ**ರತದಲ್ಲಿ ಬ್ರಿಟಿಷರು ಬಿಟ್ಟುಹೋದ ಪಳೆಯುಳಿಕೆಗಳಲ್ಲಿ ಒಂದು ಕ್ರಿಕೆಟ್. ಪ್ರಾರಂಭದಲ್ಲಿ ರಾಜಮಹಾರಾಜರುಗಳ ಕೃಪಾಪೋಷಿತವಾಗಿದ್ದ ಈ ಕ್ರೀಡೆ ಶ್ರೀಮಂತರು, ಸಭ್ಯರಿಗೆ ಮಾತ್ರ ಸೀಮಿತಗೊಂಡಿತ್ತು. ಇಂಗ್ಲೆಂಡಿನಲ್ಲಿ ಕೂಡ ಈ ಕ್ರೀಡಾ ಪಂದ್ಯ ಪ್ರಾರಂಭವಾದ್ದು ಶ್ರೀಮಂತರ, ಅನುಕೂಲಸ್ಥರ ಕಾಲಹರಣಕ್ಕಾಗಿಯೆ. ಬ್ರಿಟಿಷರು ಆಳಿದ ದೇಶಗಳಲ್ಲಿ ಮಾತ್ರವೆ ಈ ಕ್ರಿಕೆಟ್ ಕ್ರೀಡೆ ಹರಡಿದ್ದು. ಪಂದ್ಯಗಳೂ ಕೂಡ ಅವುಗಳಲ್ಲಿ ಹತ್ತು ಹನ್ನೆರಡು ದೇಶಗಳಿಗೇ ಸೀಮಿತ. ಭಾರತ ಉಪಖಂಡದಲ್ಲಿ ಕ್ರಿಕೆಟ್ ಬೃಹತ್ತಾಗಿ ಹರಡಿಕೊಂಡಿದೆ. ಈಗ ಕಾರ್ಪೊರೇಟ್ ವಲಯದ ಪ್ರವೇಶದಿಂದಾಗಿ ಒಂದು ದಂಧೆಯಾಗಿಬಿಟ್ಟಿದೆ. ಕ್ರಿಕೆಟ್ ಕ್ರೀಡಾಪಟುಗಳು ಕೋಟ್ಯಾಧಿಪತಿಗಳಾಗಿಬಿಟ್ಟಿದ್ದಾರೆ, ತಾರಾಪಟ್ಟಕ್ಕೇರಿದ್ದಾರೆ. ಕ್ರಿಕೆಟ್ ಪಂದ್ಯಗಳೆಂದರೆ ಒಂದು ಬಗೆಯ ಸನ್ನಿ. ಈಗಂತೂ ಜನ ಟೆಲಿವಿಷನ್ ಮುಂದೆ ಗಂಟೆಗಟ್ಟಲೆ ಕೂರುತ್ತಾರೆ ಮ್ಯಾಚ್ ವೀಕ್ಷಿಸುತ್ತ. ಭಾರತ–ಪಾಕಿಸ್ತಾನಗಳ ಮಧ್ಯೆ ಮ್ಯಾಚ್ ಎಂದರೆ ಮುಗಿದೇ ಹೋಯಿತು. ಮಾಧ್ಯಮಗಳು ಅದನ್ನು ಸಮರೋಪಾದಿಯಲ್ಲಿ ನಿರೂಪಿಸುತ್ತವೆ. ಜನ ಗುಂಪು ಕಟ್ಟಿಕೊಂಡು ಟಿವಿ ಷಾಪ್‌ಗಳ ಮುಂದೆ ನಿಂತಿರುತ್ತಾರೆ, ರಸ್ತೆ ಸಂಚಾರ ಕೂಡ ಕಡಿಮೆಯಾಗಿರುತ್ತದೆ. ಇಷ್ಟಲ್ಲದೆ ಕ್ರಿಕೆಟ್ ಸಾವಿರಾರು ಕೋಟಿ ರೂಪಾಯಿಗಳ ವ್ಯವಹಾರ ಈಗ.

ಪ್ರಾರಂಭದಲ್ಲಿ ಕ್ರಿಕೆಟ್ ಟೆಸ್ಟ್ ಮ್ಯಾಚುಗಳು ಮೂರು ದಿನಗಳಿದ್ದುದು ನಂತರ ಐದು ದಿನಗಳಿಗೇರಿತು. ಆಗೆಲ್ಲ ಪ್ರೇಕ್ಷಕರು ಕ್ರಿಕೆಟ್ ಸ್ಟೇಡಿಯಂಗೆ ಹೋಗಿ ನೋಡುತ್ತಿದ್ದರು. ಇತರರು ರೇಡಿಯೋ ಮುಂದೆ ಕುಳಿತು ವೀಕ್ಷಕ ವಿವರಣೆ ಕೇಳಿ ಸಂತೋಷಪಡುತ್ತಿದ್ದರು. ಆಮೇಲೆ ಬಂದದ್ದು ಏಕದಿನ ಪಂದ್ಯಗಳು. ಇವೆಲ್ಲ ವಿಪರೀತ ಮಟ್ಟಕ್ಕೆ ಹೋದದ್ದು ಟೆಲಿವಿಷನ್ ಬಂದಮೇಲೆ. ಜಾಹೀರಾತುಗಳ ಭರಾಟೆಯಲ್ಲಿ ಕೋಟಿಗಟ್ಟಲೆ ಹಣ ಸುರಿಯಲು ಪ್ರಾರಂಭವಾದಾಗ ಕ್ರಮೇಣ ಆಟಗಾರರೂ ಕಾರ್ಪೊರೇಟ್ ಸಂಸ್ಥೆಗಳ ಜಾಹೀರಾತುಗಳಲ್ಲಿ ಕಾಣಿಸಿಕೊಂಡು ದುಡ್ಡು ಕಮಾಯಿಸತೊಡಗಿದರು. ಈ ಬೆಳವಣಿಗೆಗಳೆಲ್ಲ ಕ್ರಿಕೆಟ್‌ಅನ್ನು ಒಂದು ಉದ್ಯಮವಾಗಿ, ಕ್ರೀಡಾಪಟುಗಳನ್ನು ವ್ಯವಹಾರಸ್ಥರನ್ನಾಗಿ, ಪ್ರೊಫೆಷನಲ್ ಆಗಿ ಮಾಡಿತು. ಕ್ರೀಡಾಸಕ್ತರು ಮ್ಯಾಚ್‌ಗಳಿಗೆ ಟಿಕೇಟುಗಳಿಗಾಗಿ ರಾತ್ರಿ ಇಡೀ ಸಾಲಿನಲ್ಲಿ ನಿಂತು ನಿರಾಶರಾಗಿ ಹಿಂದಿರುಗುತ್ತಿದ್ದರು. ಕೆಲವೊಮ್ಮೆ ಪೊಲೀಸರ ಲಾಟಿ ಏಟಿನ ಸವಿ ತಿನ್ನುತ್ತಿದ್ದುದೂ ಉಂಟು. ಆಗಲೇ ಟಿಕೇಟು ವಿತರಣೆಯಲ್ಲಿ ಕಾಳಸಂತೆ ವ್ಯವಹಾರ ನಡೆಯುತ್ತಿತ್ತು. ಸೋಲುಗೆಲುವಿನ ಈ ಪೈಪೋಟಿಯಲ್ಲಿ ಬೆಟ್ಟಿಂಗ್ ಪ್ರಾರಂಭವಾದ್ದು ಕೂಡ ದೊಡ್ಡ ಪ್ರಮಾಣದಲ್ಲಿ ಪ್ರಾರಂಭವಾದ್ದೂ ಕೂಡ ಈ ಅವಧಿಯಲ್ಲೇ. ಕ್ರಿಕೆಟ್ ಕ್ರೀಡೆಯ ಅವನತಿ ಶುರುವಾಗಿದ್ದೂ ಹಣದ ವ್ಯವಹಾರಗಳು ಹೆಚ್ಚಾದ ಮೇಲೆ. ಅದರ ಹಿಂದೆಯೇ ಒಂದೊಂದೊಂದಾಗಿ ಹಗರಣಗಳು, ಮ್ಯಾಚ್ ಫಿಕ್ಸಿಂಗ್ ಎಂಬ ಮೋಸದಾಟದ ದೂರುಗಳು ಬರಲಾರಂಭಿಸಿದ್ದು. ಸರಕಾರ ಮಧ್ಯ ಪ್ರವೇಶಿಸಿ ಆಗಲೇ ತನಿಖೆ ನಡೆಸಿ,


ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ







**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಕ್ರಿಕೆಟ್‌ಅನ್ನು ನಿಯಂತ್ರಿಸಲು ಕ್ರಮಕೈಗೊಳ್ಳಬೇಕಾಗಿತ್ತು. ಭಾರಿ ಶ್ರೀಮಂತರು, ಉದ್ಯಮಿಗಳು, ರಾಜಕಾರಣಿಗಳು ಇರುವುದರಿಂದ ಸರಕಾರ ಹಿಂಜರಿಯಿತು.

ಈ ದೇಶದಲ್ಲಿ ಇತರ ಎಲ್ಲ ಕ್ರೀಡೆಗಳನ್ನು ಹಿಂದೆ ಹಾಕಿ ಕ್ರಿಕೆಟ್ ಮಾತ್ರ ಬೃಹದಾಕಾರವಾಗಿ ಬೆಳೆದಿರುವುದು ಅಚ್ಚರಿಯ ಸಂಗತಿ. ಭಾರತದಲ್ಲಿ ಕ್ರಿಕೆಟ್‌ಅನ್ನು ನಿಯಂತ್ರಿಸಲು ಇರುವ ಬಿಸಿಸಿಐ (ಬೋರ್ಡ್ ಆಫ್ ಕ್ರಿಕೆಟ್ ಕಂಟ್ರೋಲ್ ಇನ್ ಇಂಡಿಯಾ) ಸಂಸ್ಥೆ ಒಂದು ಬೃಹತ್ ಉದ್ಯಮ ಸಂಸ್ಥೆಯಾಗಿ ಬೆಳೆದಿದೆ. ಸಾವಿರಾರು ಕೋಟಿ ರೂಪಾಯಿಗಳ ವ್ಯವಹಾರ ನಡೆಸುವ ಸಂಘಟನೆ ಇದು. ಸರಕಾರದಿಂದ ಸಾಕಷ್ಟು ಸವಲತ್ತುಗಳನ್ನು ಇದು ಪಡೆದುಕೊಂಡಿದೆ. ಪ್ರಭಾವಿ ವ್ಯಕ್ತಿಗಳು, ರಾಜಕಾರಣಿಗಳು, ಉದ್ಯಮಿಗಳು ಇರುವ ಈ ಸಂಸ್ಥೆ ಗೊಂದಲದ ಗೂಡಾಗಿದೆ, ಅಕ್ರಮದ ಆಗರವಾಗಿದೆ. ಸರಕಾರ ಇವುಗಳ ಕುರಿತು ತನಿಖೆ ನಡೆಸುವುದು ಅಗತ್ಯವಾಗಿದೆ. ಇತ್ತೀಚೆಗೆ ಈ ಸಂಸ್ಥೆಯಲ್ಲಿ ನಡೆದ ರಂಪಾಟಗಳನ್ನು ನೋಡಿಕೊಂಡು ಸರಕಾರ ತೆಪ್ಪಗಿರುವುದು ಅಚ್ಚರಿಯ ಸಂಗತಿ.

ಇನ್ನು ಬಿಸಿಸಿಐನ ಆಶ್ರಯದಲ್ಲಿ ಕೆಲವು ವರ್ಷಗಳ ಹಿಂದೆ ಪ್ರಾರಂಭವಾದ ಐಪಿಎಲ್ (ಇಂಡಿಯನ್ ಪ್ರೀಮಿಯರ್ ಲೀಗ್) ಪಂದ್ಯಗಳು ಮಹಾಮೋಸ, ಭ್ರಷ್ಟಾಚಾರದ ಪ್ರತೀಕವಾಗಿವೆ. ಇದರ ಪ್ರಾರಂಭ, ನಡವಳಿಕೆ ಎಲ್ಲ ವಿಚಿತ್ರ. ಕಾರ್ಪೊರೇಟ್ ಉದ್ಯಮಿಗಳೂ, ಸಿನಿಮಾ ನಟ, ನಟಿಯರು, ಭಾರಿ ಶ್ರೀಮಂತರು ಇದರಲ್ಲಿ ಭಾಗಿಗಳು. ಹೆಸರುಗಳೆಲ್ಲ ಸುಪರಿಚಿತವಾಗಿರುವುದರಿಂದ ಇಲ್ಲಿ ಅದನ್ನು ಪಟ್ಟಿ ಮಾಡುವುದು ಅನಗತ್ಯ. ಕ್ರಿಕೆಟ್‌ಅನ್ನು ತೀರಾ ಭ್ರಷ್ಟಗೊಳಿಸಿದ ಕೀರ್ತಿ ಐಪಿಎಲ್‌ಗೆ ಸಲ್ಲುತ್ತದೆ. ಮೊದಲನೆಯದಾಗಿ ಕ್ರೀಡಾಪಟುಗಳನ್ನು ಗುಲಾಮರಂತೆ ಹರಾಜಿನಲ್ಲಿ ಕೊಂಡು ಪಂದ್ಯಗಳಿಗಾಗಿ ತಂಡಗಳನ್ನು ಕಟ್ಟಿಕೊಂಡ ರೀತಿ. ಈ ಹರಾಜು ಪ್ರಕ್ರಿಯೆ ಅವಮಾನಕರ. ಇದನ್ನು ಸರಕಾರ ಆಗಲೇ ನಿಷೇಧಿಸಬೇಕಾಗಿತ್ತು. ಇನ್ನು ಪಂದ್ಯಗಳಿಗೆ ಮುಂಚೆ ಸಾಂಸ್ಕೃತಿಕ ಕಾರ್ಯಕ್ರಮದ ಹೆಸರಿನಲ್ಲಿ ಕೀಳ್ಮಟ್ಟದ ಕಳಪೆ ಪ್ರದರ್ಶನ. ಇದರ ಮೇಲೆ ಪಂದ್ಯ ನಡೆಯುತ್ತಿರುವಾಗ ತುಂಡುಡುಪು ಧರಿಸಿರುವ ಲಲನೆಯರ ಕುಣಿತ. ಇವೆಲ್ಲ ಸಂಘಟಕರ ಮಾರಾಟ ತಂತ್ರ. ಈ ಪಂದ್ಯಗಳನ್ನು ಪ್ರಾರಂಭಿಸಿದಾತ ಮೋದಿ ಕೆಲವೇ ದಿನಗಳಲ್ಲಿ ಹಲವು ಭ್ರಷ್ಟಾಚಾರಗಳ ಸುಳಿಯಲ್ಲಿ ಸಿಕ್ಕಿಕೊಂಡು ಈಗ ಹೊರಗೆ. ಈ ವರ್ಷ ಅತಿದೊಡ್ಡ ಹಗರಣ ಬಯಲಾಗಿದೆ. ಮ್ಯಾಚ್ ಫಿಕ್ಸಿಂಗ್ ಅಪಾದನೆಯ ಮೇಲೆ ಕೆಲವು ಆಟಗಾರರ ಬಂಧನವಾಗಿದೆ. ಬಿಸಿಸಿಐ ಅಧ್ಯಕ್ಷರ ರಾಜೀನಾಮೆಗೆ ಒತ್ತಡ ಬಂದಿದ್ದು, ಖಾಜಿ ನ್ಯಾಯ ಮಾಡಿ ಸರಿಪಡಿಸಲಾಗಿದೆ. ಭಾರಿ ಪ್ರಮಾಣದಲ್ಲಿ ಬೆಟ್ಟಿಂಗ್ ನಡೆದಿರುವುದು ಕಂಡುಬಂದಿದ್ದು ಹಲವರ ಬಂಧನವಾಗಿದೆ. ಭೂಗತಲೋಕದೊಂದಿಗೆ ನಿಕಟ ಸಂಪರ್ಕವಿರುವುದೂ ಬಯಲಾಗಿದೆ. ಐಪಿಎಲ್ ಪಂದ್ಯಗಳನ್ನು ನಿಷೇಧಿಸಿ, ಸರಕಾರ ಅವ್ಯವಹಾರಗಳು ನಡೆದಿರುವ ಬಗ್ಗೆ ಸಮಗ್ರ ತನಿಖೆ ನಡೆಸಬೇಕೆಂದು ಒತ್ತಾಯ ತರಬೇಕಾಗಿದೆ. ಮೋಸದಾಟಗಳಿಗೆ ಕಡಿವಾಣ ಹಾಕಿ, ಅವ್ಯವಹಾರಗಳನ್ನು ತಡೆಯುವುದು ಅಗತ್ಯವಾಗಿದೆ. ಸಾರ್ವಜನಿಕರೂ ಈ ಬಗ್ಗೆ ಎಚ್ಚರ ವಹಿಸಬೇಕಾಗಿದೆ.

# ವಿದ್ಯಾರ್ಥಿ

**ಹೊ**ರಟಿರುವೆ ನಾನು
ಹರಕು ಚಿಂದಿಯ ಹುಡುಕುತ
ಶಾಲಾ ಕಾಂಪೌಂಡ್ ಹಿಂದೆ
ಒಡಲ ಕನಸನು ಬೀದಿಗಾಸುತ
ಶಾಲಾ ಗೇಟಿನ ಮುಂದೆ

ನನ್ನಲ್ಲೂ ಚೀಲವಿದೆ ಎಲ್ಲರಂತೆ
ಆದರೆ; ತುಂಬಿರುವುದು
ಬೇರೊಬ್ಬ ಬಳಸಿ ಬಿಟ್ಟಿರುವ
ಹರಕು ಪುಸ್ತಕ ಮುರುಕು ಸ್ಲೇಟು

ಗಟಾರು ಮೋಟಾರು ದಾಟಿ
ತಲುಪಿದಾಗ ನನ್ನ ಸೂರು
ಕಸಿವಿಸಿಗೊಳ್ಳುವೆ ನಾನು
ಕಾಣದ ಅಮ್ಮನ ನೆನೆದು
ಎದೆಗವಿಚಿಕೊಳ್ಳುವೆ ನಾನು
ಹರಕು ಪುಸ್ತಕದಲ್ಲಿ ಕನ್ನಡಾಂಬೆಯ ಕಂಡು !

ನಾ ಯಾರನ್ನು ದೂರಲಿ
ನಕ್ಷತ್ರ ಜಾರಿದರೆ ಹೊಣೆ ಯಾರು ?
ಊರ ಹೊರಗಿನ ಜಾಲಿ ಬಯಲು

ನೀಡಿಲ್ಲವೆ ಬದುಕಲು ನೆರಳು
ಪುರಸಭೆಯ ಕಸದಲ್ಲೊ, ಕನಸಲ್ಲೊ
ಹುಡುಕುತ್ತೇನೆ ಪೆನ್ನು ಹಾಳು ಮೂಳು

ಅಲೆಮಾರಿಗೆ ಅಕ್ಷರದ ಗೀಳು ಹುಟ್ಟಿದ್ದು
ಅದೊಂದು ದಿನ ಬೀದಿಯ ಬಿಸಿಲಿನಲ್ಲಿ
ಆ ಪೋರ !
ಅನ್ನದ ಬದಲಾಗಿ ಕೊಟ್ಟಿದ್ದು ಪೆನ್ನು !
ಆಮೇಲೆ ಅವನು
''ಅ'' ಅನ್ನು ''ಆ'' ಅನ್ನು
ಎಂದು ಮನೆಪಾಠ ಹೇಳಿದ್ದು

ಈಗ ಅವನಿಲ್ಲ
ಅವರ ತಂದೆಗೆ ವರ್ಗಾವಣೆ
ನನಗೋ
ಅವನದೆ ಆರಾಧನೆ




**ಮಾಬು ಡಂಬಳ**
ಶಿಕ್ಷಕರು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ
ಲಕ್ಷ್ಮೀನಾರಾಯಣ ಕ್ಯಾಂಪ್, ಪೋ॥ ಕವಿತಾಳ, ಮಾನವಿ ತಾಲೂಕು ರಾಯಚೂರು ಜಿಲ್ಲೆ – ೫೮೪ ೧೨೦

ಈ ತಿಂಗಳು (೩ನೇ ಪುಟದಿಂದ)

ಇನ್ನೊಂದು ವಿ.ವಿ. ಅಗತ್ಯವೆ ? ತುಮಕೂರು ವಿ.ವಿ. ಇನ್ನೂ ತೊಟ್ಟಿಲಲ್ಲೇ ಬಿದ್ದಿದೆ, ಆ ಮಗುವಿಗೆ ತೊದಲು ನುಡಿಯೂ ಬಂದಿಲ್ಲ – ಅಂಬೆಗಾಲಿಕ್ಕುವ ಚೈತನ್ಯವೂ ಇಲ್ಲ. ಹೀಗಿರುವಾಗ ಇನ್ನೊಂದು ಮಗು ಏಕೆ ? ಮಿತಸಂತಾನ ಬೋಧಿಸುವ ದೇಶ ಆ ಬಗ್ಗೆ ಯೋಚನೆ ಮಾಡಬೇಕು. ಸಂತಾನ ಬೇಕೆಂದು ವಿಕೃತ ಮಗುವನ್ನು ಧರೆಗೆ ತರುವುದು, ಅದಕ್ಕೆ ಹಾಲುಣಿಸದೆ ನರಪೇತಲ ಮಾಡುವುದು ಅಕ್ಷಮ್ಯ. ಒಂದು ಮೂಲಭೂತ ಪ್ರಶ್ನೆ ಇದೆ : ವಿಶ್ವವಿದ್ಯಾನಿಲಯಗಳಲ್ಲಿ ಪ್ರವೇಶ ಬಯಸಿ, ಪ್ರವೇಶ ಸಿಗದೆ ಬೀದಿಗೆ ಬಿದ್ದಿರುವವರು ಮೈಸೂರು– ಮಂಡ್ಯ–ಚಾಮರಾಜನಗರ ಜಿಲ್ಲೆಗಳಲ್ಲಿ ಎಷ್ಟು ಮಂದಿ ಇದ್ದಾರೆ ? ಅವರಿಗೆ ಅರ್ಹತೆ ಇದ್ದೂ ಪ್ರವೇಶ ಸಿಕ್ಕಿಲ್ಲವೆಂಬುದು ಮೊದಲು ಸಾಬೀತಾಗಬೇಕು, ಅಂಥವರ ಸಂಖ್ಯೆ ಗಣನೀಯ ಪ್ರಮಾಣದಲ್ಲಿದ್ದರೆ ಮಾತ್ರ ಇನ್ನೊಂದು ವಿ.ವಿ. ಹುಟ್ಟುಹಾಕಬೇಕು. ಆಗಲೂ ಅದು ಶ್ರೀರಂಗಪಟ್ಟಣದಲ್ಲೇ ಇರಬೇಕಾಗಿಲ್ಲ, ಹುಣಸೂರಿನಲ್ಲಿಯೂ ಇರಲು ಸಾಧ್ಯ. ನಮ್ಮ ರಾಜ್ಯದ ಬೇರೆ ಪ್ರದೇಶಗಳಿಂದ ವಿದ್ಯಾರ್ಥಿಗಳು ಬಂದು ಈ ಕಾವೇರಿ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆಯುತ್ತಾರೆಯೆ ? ಹಾಗಿದ್ದರೆ ಯಾವ ಪ್ರದೇಶದಿಂದ ಹೆಚ್ಚು ವಿದ್ಯಾರ್ಥಿಗಳು ಬರುತ್ತಾರೋ ಆ ಪ್ರದೇಶದಲ್ಲಿ ಹೊಸ ವಿ.ವಿ. ಸ್ಥಾಪನೆಯಾಗಬೇಕಲ್ಲವೆ ?

ಶ್ರೀರಂಗಪಟ್ಟಣದ ಹತ್ತಿರದಲ್ಲೆಲ್ಲೂ ಕೃಷಿಯೋಗ್ಯವಲ್ಲದ ಭೂಮಿ ಹೇರಳವಾಗಿಲ್ಲ. ನೀರಾವರಿ ಸೌಲಭ್ಯವಿರುವ ಭೂಮಿಯನ್ನು ನೂರಾರು ಸಿಮೆಂಟ್ ಕಟ್ಟಡಗಳಿಂದ ತುಂಬಿ ಅದನ್ನು ವಿ.ವಿ. ಎಂದು ಕರೆಯುವುದು ನಾಡನ್ನು ಸುಡುಗಾಡು ಮಾಡಿದಂತೆ. ಮೊದಲು ವಿಶ್ವವಿದ್ಯಾನಿಲಯಕ್ಕಾಗಿ ಸಾವಿರ ಎಕರೆ ಫಲವತ್ತಾದ ಭೂಮಿ, ಆಮೇಲೆ ವಿದ್ಯಾರ್ಥಿಗಳಿಗೆ – ಅಧ್ಯಾಪಕರಿಗೆ ವಸತಿಗಾಗಿ ಇನ್ನೊಂದು ಸಾವಿರ ಎಕರೆ, ಅವರ ಜೊತೆ ಬರುವ ಅಂಗಡಿ–ಹೋಟೇಲ್‌ಗಳಿಗೆ ನೂರು ಎಕರೆ, ಆಟದ ಮೈದಾನಗಳಿಗೆ ಐನೂರು ಎಕರೆ, ಹೀಗೆ ಇನ್ನೂ ಎಷ್ಟೋ ಭೂಮಿ ಬೇಕಾಗುತ್ತದೆ. ಮೈಸೂರಿನ ಮಾನಸ ಗಂಗೋತ್ರಿ ಸ್ಥಾಪನೆಯಾದಾಗ ಮತ್ತು ಬೆಂಗಳೂರಿನ ಜ್ಞಾನಭಾರತಿ ಸ್ಥಾಪನೆಯಾದಾಗ ಫಲವತ್ತಾದ ಭೂಮಿಯಲ್ಲಿ ಕಟ್ಟಡಗಳು ಏಳಲಿಲ್ಲ; ಕುರುಚಲು ಪ್ರದೇಶವು ವಿ.ವಿ. ಆಯಿತು, ಅಲ್ಲಿ ಸಸ್ಯಸಂಪತ್ತು ಸಹ ಬಂದಿತು. ರೈತರನ್ನು ಒಕ್ಕಲೆಬ್ಬಿಸಿ ಶ್ರೀರಂಗಪಟ್ಟಣದಲ್ಲಿ ವಿ.ವಿ. ಸ್ಥಾಪಿಸುವುದು ಸರ್ವಥಾ ಯೋಗ್ಯವಲ್ಲ; ಆ ರೈತರ ಮಕ್ಕಳಿಗೆ ಒಂಭತ್ತು ಮೈಲಿ ದೂರದ ಮೈಸೂರು ವಿಶ್ವವಿದ್ಯಾನಿಲಯವು ಬಾಗಿಲು ತೆರೆದರೆ ಸಾಕು. ಕೇಂದ್ರೀಯ ವಿ.ವಿ. ಸ್ಥಾಪಿಸುತ್ತಾರೆನ್ನುವುದಾದರೆ ಅದು ರಾಜ್ಯದ ಬೇರೆಡೆ ಇದ್ದರೂ ಬಾಧಕವಿಲ್ಲ. ಗುಲ್ಬರ್ಗಾದಲ್ಲಿ ಒಂದು ಕೇಂದ್ರೀಯ ವಿ.ವಿ. ಸ್ಥಾಪನೆಗೊಂಡಿದೆ. ನಮ್ಮ ರಾಜ್ಯಕ್ಕೆ ಮತ್ತೊಂದು ಕೇಂದ್ರೀಯ ವಿಶ್ವವಿದ್ಯಾನಿಲಯವನ್ನು ಕೇಂದ್ರ ಸರ್ಕಾರವು ದಯಪಾಲಿಸುತ್ತದೆಂಬ ಭ್ರಾಂತಿ ಏಕೆ ? ಹಾಗೆ ಕೊಡುವುದಿದ್ದರೆ ನಾವು ಅದನ್ನು ರಾಜ್ಯದ ಕೇಂದ್ರಭಾಗದಲ್ಲಿ ಇರುವಂತೆ ನೋಡಿಕೊಳ್ಳಬೇಕು. ಉದಾಹರಣೆಗೆ ದಾವಣಗೆರೆ. ಇನ್ನು, ಅಲ್ಪಸಂಖ್ಯಾತ ವಿ.ವಿ. ಸ್ಥಾಪಿಸಬೇಕೆಂಬ ಉದ್ದೇಶವಿದ್ದರೆ ಅದನ್ನು ತಕ್ಷಣ ಬದಲಿಸಿಕೊಳ್ಳಬೇಕು. ನಮ್ಮ ದೇಶದಲ್ಲಿ ಇನ್ನು 'ಅಲ್ಪಸಂಖ್ಯಾತ' ಎಂಬ ಬಿರುದಿನ ವಿದ್ಯಾಸಂಸ್ಥೆಗಳು ಕೂಡದು. ಅವು ನಿರಂಕುಶ ಸಂಸ್ಥೆಗಳಾಗುತ್ತವೆ. ಬೆಂಗಳೂರಿನ ಸೆಂಟ್ ಜಾನ್ ಮೆಡಿಕಲ್ ಕಾಲೇಜಿನ ಕತೆ ಗೊತ್ತೆ ? ಅದು ಆರಂಭದಲ್ಲಿ ತಾನು 'ಅಲ್ಪಸಂಖ್ಯಾತ' ಆಗುವುದಿಲ್ಲವೆಂದು ಪ್ರಮಾಣಪತ್ರ ಸಲ್ಲಿಸಿ ಸರ್ಕಾರದಿಂದ ಭೂಮಿ ಪಡೆಯಿತು. ರೈತರಿಗೆ ದೊರಕಿದ ಪರಿಹಾರ ನಗಣ್ಯ. ಕಾಲೇಜಿಗೆ ಅರ್ಹತೆಯ ಆಧಾರದ ಮೇಲೆ ವಿದ್ಯಾರ್ಥಿಗಳನ್ನು – ಅಧ್ಯಾಪಕರನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ, ಅಭ್ಯರ್ಥಿಗಳ ಮತಧರ್ಮದ ಆಧಾರದ ಮೇಲಲ್ಲ, ಎಂದು ಅಂದಿನ ಕೇಂದ್ರ ಸರ್ಕಾರದ ಆರೋಗ್ಯ ಸಚಿವರಿಗೆ ಮುಚ್ಚಳಿಕೆ ಬರೆದು ಕೊಟ್ಟಿತ್ತು. ಸರ್ಕಾರದ ವತಿಯಿಂದ ಕಾಲೇಜು ಮತ್ತು ಆಸ್ಪತ್ರೆಗಾಗಿ ಪಡೆದಿದ್ದ ಭೂಮಿಯನ್ನು ಪರಭಾರೆ ಮಾಡಕೂಡದೆಂದು ಸರ್ಕಾರವು ಷರತ್ತು ವಿಧಿಸಿತ್ತು. ಈ ಪ್ರತಿಯೊಂದು ಒಪ್ಪಂದದ ಅಂಶವನ್ನೂ ಸೇಂಟ್ ಜಾನ್ಸ್ ಕಾಲೇಜು ಕಡೆಗಾಣಿಸಿದೆ, ಆದರೆ ಸರ್ಕಾರ ಮಧ್ಯಪ್ರವೇಶ ಮಾಡಲಾಗಿಲ್ಲ, ವಿಶ್ವವಿದ್ಯಾನಿಲಯವು ಸಂಪೂರ್ಣ ಅಸಹಾಯಕವಾಗಿ ಕೂತಿದೆ. ನ್ಯಾಯಾಲಯದ ಮುಂದೆ ತಾನು 'ಅಲ್ಪಸಂಖ್ಯಾತ ಸಂಸ್ಥೆ' ಎಂದು ಹೇಳಿಕೊಂಡು ರಕ್ಷಣೆ ಪಡೆದುಕೊಂಡಿದೆ. ಸಂವಿಧಾನದ ೩೦ನೆಯ ಆರ್ಟಿಕಲ್‌ನಲ್ಲಿ ಅಂತಹ ರಕ್ಷಣೆಗೆ ಅವಕಾಶವಿದೆ, ಆದರೆ ತಾನು ಆ ನಿಯಮದಡಿ ಬರುವುದಿಲ್ಲವೆಂದು ಪ್ರಮಾಣಪತ್ರ ನೀಡಿದ್ದುದನ್ನು ಆ ಕಾಲೇಜು ಮುಚ್ಚಿಟ್ಟಿತು; ವಿಶ್ವವಿದ್ಯಾನಿಲಯ ಅದನ್ನು ದಾಖಲೆ ಸಹಿತ ನ್ಯಾಯಾಲಯದ ಮುಂದಿಟ್ಟಾಗ ನ್ಯಾಯಾಲಯ ಕಿವಿ–ಕಣ್ಣು ಮುಚ್ಚಿಕೊಂಡಿತು. ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಿದ್ದ ಒಂದು ಪ್ರಸಂಗದಲ್ಲಿ ಸಂವಿಧಾನದ ೩೦ನೆಯ ಆರ್ಟಿಕಲ್ ಕುರಿತು ವ್ಯಾಖ್ಯಾನಿಸುವಾಗ ಒಂದು ಮಾತು ಹೇಳಲಾಗಿತ್ತು : "ಅಲ್ಪಸಂಖ್ಯಾತ ಸಂಸ್ಥೆಯ ಹಕ್ಕು ಅದರ ಆಡಳಿತ ನಡೆಸಬಹುದು ಎಂದಿದೆಯೇ ಹೊರತು ಅದರ ದುರಾಡಳಿತ ನಡೆಸಬಹುದೆಂದಲ್ಲ." ಆದರೆ ಅಲ್ಪಸಂಖ್ಯಾತ ಸಂಸ್ಥೆಗಳ ಆಡಳಿತವು ಸ್ವೇಚ್ಛಾಚಾರಿಯಾಗಿರುವುದು ವಾಸ್ತವ. ಈ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರವು ನಮ್ಮ ರಾಜ್ಯದಲ್ಲಿ 'ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆ'ಯೊಂದನ್ನು ಸ್ಥಾಪಿಸುವುದು ಸಲ್ಲದು. ಅಲ್ಪಸಂಖ್ಯಾತರಿಗೆ ಈಗಿನ ವಿಶ್ವವಿದ್ಯಾನಿಲಯಗಳಲ್ಲೇ ಪ್ರವೇಶ ದೊರಕಿಸಿಕೊಟ್ಟರೆ ಸಾಕು. ಅದಕ್ಕೂ ಮಿಗಿಲಾಗಿ, ಅಲ್ಪಸಂಖ್ಯಾತ ಕುಟುಂಬಗಳ ಮಕ್ಕಳು ವಿಶ್ವವಿದ್ಯಾನಿಲಯ ಮಟ್ಟವನ್ನು ಮುಟ್ಟುವಂತೆ ಮೊದಲು ಶಾಲಾಹಂತಗಳಲ್ಲಿ ಸೂಕ್ತ ಅವಕಾಶ ಕಲ್ಪಿಸಿಕೊಡಬೇಕು. ಅದನ್ನು ಮಾಡದೆ ಮೂರ್ಖ ತುಷ್ಟೀಕರಣದ ಮೋಸದಿಂದ ಸರ್ಕಾರವು ಅಲ್ಪಸಂಖ್ಯಾತರಿಗೆ ಹೊಸ ಅನುಕೂಲವನ್ನೇನೂ ಮಾಡಿಕೊಡುವುದಿಲ್ಲ. ಇನ್ನೊಂದು ನಿಯಮವನ್ನು ನ್ಯಾಯಾಲಯವು ಈಚಿನ ದಿನಗಳಲ್ಲಿ ಪ್ರಸ್ತುತಪಡಿಸಿದೆ : "ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಯಲ್ಲಿ ಕಡೇಪಕ್ಷ ಶೇ. ೫೦ರಷ್ಟು ವಿದ್ಯಾರ್ಥಿಗಳು ಆಯಾ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿರಬೇಕು" ಎಂದು. ಬೇರೆಲ್ಲಾ ವಿಶ್ವವಿದ್ಯಾನಿಲಯಗಳಲ್ಲಿ ಪ್ರವೇಶ ಪಡೆದಿರುವ ವಿದ್ಯಾರ್ಥಿಗಳನ್ನೆಲ್ಲಾ ನಿರ್ಬಂಧವಾಗಿ ಹೊಸ ಅಲ್ಪಸಂಖ್ಯಾತ ವಿಶ್ವವಿದ್ಯಾನಿಲಯಕ್ಕೆ ದೂಡಿದರೂ ಅವರ ಸಂಖ್ಯೆ ಶೇ. ೫೦ಕ್ಕೆ ಬರಲಾರದು ! ಸರ್ಕಾರದ ಕಪಟ ತಂತ್ರವು ಪ್ರಚಾರದ ದೃಷ್ಟಿಯಿಂದ ಒಂದು ರಾಜಕೀಯ ಪಕ್ಷಕ್ಕೆ ಅನುಕೂಲ ತರಬಹುದು, ಆದರೆ ಅಲ್ಪಸಂಖ್ಯಾತರಿಗೆ ಅದರಿಂದ ಸುತರಾಂ ಪ್ರಯೋಜನವಿರುವುದಿಲ್ಲ.

ಯಾವ ನಿಟ್ಟಿನಿಂದ ನೋಡಿದರೂ ಶ್ರೀರಂಗಪಟ್ಟಣದಲ್ಲಿ ಹೊಸ ವಿಶ್ವವಿದ್ಯಾನಿಲಯವೊಂದನ್ನು ಸ್ಥಾಪಿಸುವುದು ಯೋಗ್ಯವಲ್ಲ. ಇರುವ ವಿಶ್ವವಿದ್ಯಾನಿಲಯಗಳನ್ನು ಮುಚ್ಚಟೆಯಿಂದ ನಡೆಸಿದರೆ ನಾವು ಧನ್ಯರು. ಉಪಕುಲಪತಿಗಳ ನೇಮಕಕ್ಕೆ ಯಾರು ಎಷ್ಟು ಲಂಚ ಪಡೆಯುತ್ತಿದ್ದಾರೆ ಎಂಬುದು ಗುಟ್ಟಾಗಿ ಉಳಿದಿಲ್ಲ. ಶ್ರೀರಂಗಪಟ್ಟಣದಲ್ಲಿ ವಿ.ವಿ. ಸ್ಥಾಪನೆಯಾದರೆ ಅದಕ್ಕೆ ನೇಮಕಗೊಳ್ಳುವವರಿಂದ ಎಷ್ಟು ಪೀಕಿಸಬಹುದೆಂಬ ಹುನ್ನಾರವು ಸ್ಪಷ್ಟವಿದೆ. ಅಲ್ಪಸಂಖ್ಯಾತರಿಗೆ ಟೋಪಿ ಹಾಕಿ ತಾವು ಕಿರೀಟ ಧರಿಸುವ ಅಯೋಗ್ಯತನವನ್ನು ಧಿಕ್ಕರಿಸಬೇಕು, ಟಿಪ್ಪುವಿನ ಹೆಸರಿನಿಂದಾಗಲಿ ಹೊಸ ವಿ.ವಿ. ಎಂಬ ಆಮಿಷದಿಂದಾಗಲಿ ಅವೈಚಾರಿಕ ತೀರ್ಮಾನಕ್ಕೆ ಜನತೆಯು 'ಅಸ್ತು' ಎನ್ನಬಾರದು.

* * *

ಶ್ರೀರಂಗಪಟ್ಟಣ ಮತ್ತು ಕಾವೇರಿ ಎಂಬ ಪ್ರಸ್ತಾಪ ಬಂದಾಗ ತಮಿಳುನಾಡಿನ ಧಡೂತಿ ಮುಖ್ಯಮಂತ್ರಿಯನ್ನು ನೆನಪಿಸಿಕೊಳ್ಳದಿರಲು ಸಾಧ್ಯವೇ ? ಕೃಷ್ಣರಾಜ ಸಾಗರ ಖಾಲಿಯಾಗಿರುವುದು ಪ್ರಪಂಚಕ್ಕೆಲ್ಲಾ ಕಾಣುತ್ತದೆ, ಆದರೆ ಜಯಲಲಿತಾಗೆ ಅಲ್ಲಿ ನೂರಾರು ಟಿ.ಎಂ.ಸಿ. ನೀರು ಬಚ್ಚಿಟ್ಟಿರುವಂತೆ ಭಾಸವಾಗುತ್ತದೆ. ಆದ್ದರಿಂದ ನ್ಯಾಯಾಲಯಕ್ಕೆ ನುಗ್ಗಿ ಅಲ್ಲಿಂದ ನೀರು ಪಡೆಯಲು ನಾಟ್ಯವಾಡುತ್ತಾಳೆ ಆಕೆ. ಕಳೆದ ವರ್ಷ ತಾನು ಮುಳುಗಿಕೊಳ್ಳಲು ಸಾಕಷ್ಟು ನೀರು ಹರಿಸಲಿಲ್ಲವೆಂಬ ಮೊಂಡುಮಾತಾಡಿ ಅದಕ್ಕೆ ಕರ್ನಾಟಕ ಸರ್ಕಾರವು 'ಪರಿಹಾರ' ಕೊಡಬೇಕೆಂದು ಅರಚುತ್ತಾಳೆ, ೨೫೦೦ ಕೋಟಿ ರೂಪಾಯಿ ತುಂಬಿಕೊಳ್ಳಲು ಗೋಣಿಚೀಲ ಹಿಡಿದು ತಯಾರಾಗಿ ನಿಲ್ಲುತ್ತಾಳೆ. ಆಕೆ ಅಷ್ಟು ಅನಕ್ಷರಸ್ಥ ಮೂಢೆ, ಕುರುಡಿ, ಎಂದು ನಂಬುವುದು ಕಷ್ಟ. ಮುಂದೊಂದು ದಿನ ಮುಖ್ಯಮಂತ್ರಿ ಸಿದ್ದರಾಮಯ್ಯನವರು ಆಕೆಯನ್ನು ಭೇಟಿಯಾದಾಗ ಹೇಳಬೇಕು, "ಅಮ್ಮ ತಾಯಿ, ನೀನು ಇನ್ನುಮೇಲೆ ನೀರಿಗೆ ತಗಾದೆ ಮಾಡಬೇಡ. ನಮ್ಮ ವಾರ್ಷಿಕ ಆಯವ್ಯಯ ಪಟ್ಟಿಯಲ್ಲಿ ಪ್ರತಿವರ್ಷವೂ ನಿನಗಾಗಿ ಹತ್ತು ಸಾವಿರ ಕೋಟಿ ರೂಪಾಯಿ ತೆಗೆದಿಡುತ್ತೇವೆ, ನಿನ್ನ ಮಡಿಲಿಗೆ ನೀನು ಬೇಕೆಂದಾಗ ತುಂಬುತ್ತೇವೆ. ಸುಮ್ಮನೆ ಪಿರಿಪಿರಿ ಮಾಡಬೇಡ, ಒಂದು ಹನಿ ನೀರನ್ನೂ ಕೇಳಬೇಡ.

ಹತ್ತು ಸಾವಿರ ಕೋಟಿ ರೂಪಾಯಿ ಪಡೆದು ಮೈದಾಸನಂತೆ ನಿರಾಳವಾಗಿ ಬಾಳು. ನಿನಗೆ ಶುಭವಾಗಲಿ," ಎಂದು.

ಈಕೆಯೊಡನೆ ಹೇಗೆ ವ್ಯವಹರಿಸುವುದು? ತಮಿಳುನಾಡಿನ ರಾಜಕೀಯ ಪಕ್ಷಗಳೆಲ್ಲಾ ಆಕೆ ಯೊಡನೆ ಆಕೆಯಷ್ಟೇ ಕುರುಡಾಗಿ ಕುಣಿಯು ತ್ತವೆಯಲ್ಲ! ಮೃಗಜಲದಿಂದಲೂ ಜಲ ಹರಿಸಿ ಕೊಳ್ಳುವ ಜಾಣತನ ಎನ್ನೋಣವೆ?

* * *

ಮಾನ್ಯ ನಾರಾಯಣಮೂರ್ತಿಯವರು ತಮ್ಮ ಸುಪುತ್ರನ ಸಮೇತ ಮತ್ತೆ ತಮ್ಮ ಶಾನುಭೋಗತನ ನಡೆಸಲು ಇನ್‌ಫೋಸಿಸ್‌ಗೆ ಮರಳಿದ್ದಾರೆ. ನಮ್ಮ ರಾಜ್ಯದಲ್ಲಿ ಸುಭಿಕ್ಷೆಗೆ ಇನ್ನಾವ ಆತಂಕವೂ ಇಲ್ಲ ವೆಂಬಂತೆ ಮಾಧ್ಯಮಗಳು ಅವರನ್ನು ಉತ್ಸಾಹದಿಂದ ಸ್ವಾಗತಿಸಿವೆ. ಸಾಕಷ್ಟು ಮಂದಿ ಆ ಕಂಪನಿಯಿಂದ ಕೆಲಸ ಬಿಟ್ಟು ಹೋಗುತ್ತಿದ್ದಾರಂತೆ. ಆದ್ದರಿಂದ ಮೂರ್ತಿಗಳು ಬಂದ ಕೂಡಲೆ ಸಂಬಳದ ಹೆಚ್ಚಳ ಮಾಡಿದ್ದಾರೆ. ಕಂಪನಿಯು ಆಕಾಶಕ್ಕೆ ಲಗ್ಗೆಯಿಡಲು ಇನ್ನಾವ ಅಡ್ಡಿಯೂ ಇಲ್ಲ! ಒಳ್ಳೆಯದಾಗಲಿ, ಯಾರದೂ ಅಭ್ಯಂತರವಿಲ್ಲ. ಆದರೆ ಕರ್ನಾಟಕದ ಜನರಿಗೆ ಒಂದು ಆತಂಕವಿದೆ: ಬೆಂಗಳೂರು–ಮೈಸೂರು–ಮಂಗಳೂರು, ಹೀಗೆ ರಾಜ್ಯದ ಹಲವೆಡೆ ಅನಗತ್ಯದ ಐಷಾರಾಮಿ ಅಸ್ತಿತ್ವಕ್ಕಾಗಿ ನೂರಾರು ಎಕರೆ ಭೂಮಿಯನ್ನು ಕವಡೆ ಕಿಮ್ಮತ್ತಿಗೆ ಪಡೆದ ಕಂಪನಿ ಈಗ ಮತ್ತೆ ಶಿವಮೊಗ್ಗ–ಚಿತ್ರದುರ್ಗ–ಧಾರವಾಡ ಮುಂತಾದೆಡೆ ಚಿನ್ನ ಬೆಳೆಯುವುದಾಗಿ ಹೇಳಿ ಭೂಮಿ ದಕ್ಕಿಸಿಕೊಳ್ಳಲು ಮುಂದಾಗಿ ಬಿಡುತ್ತಾರೇನೋ ಎಂಬುದೇ ಆ ಆತಂಕ. ಇವರು ಚಿನ್ನ ಬೆಳೆಯುವುದು ಬೇಡ, ಕಂಪನಿಗೆ ಇನ್ನು ಒಂದಂಗುಲ ಹೊಸ ಭೂಮಿಯನ್ನು ಸಹ ಕೊಡಲಾಗುವುದಿಲ್ಲವೆಂದು ಸರ್ಕಾರ ದಿಟ್ಟ ತೀರ್ಮಾನ ಕೈಗೊಳ್ಳಬೇಕು.

* * *

"ರಾಜರ್ಷಿ" ಮತ್ತು "ಭೀಷ್ಮಾಚಾರ್ಯ" ಲಾಲ ಕೃಷ್ಣ ಅಧ್ವಾನಿಯವರು ದೇಶದ ಪ್ರಧಾನ ಮಂತ್ರಿ ಯಾಗದೆ ನಿರ್ಗಮಿಸಲು ಸಾಧ್ಯವಿಲ್ಲವೆಂದು ಆತ್ಮರತಿಯಲ್ಲಿ ಮುಳುಗಿಕೊಂಡು ಮೀಯುತ್ತಲೇ ಬಂದಿದ್ದಾರೆ. "ಅದು ನಿನ್ನ ಹುಚ್ಚು ಕನಸು" ಎಂದು ನರಮೇಧೇಂದ್ರ ಮೋದಿ ನಿಚ್ಚಳವಾಗಿ ಸಾರ್ವಜನಿಕವಾಗಿ ಹೇಳಿದ್ದಾರೆ. ಈ ಇಬ್ಬರಿಗೆ ಬೇರೆ ಬೇರೆ ಹೆಸರುಗಳಿವೆ, ಆದರೆ ಲಕ್ಷಣದಲ್ಲಿ ಭಿನ್ನತೆ ಅತ್ಯಲ್ಪ. ಒಬ್ಬರು ಸರ್ಪನಾಥ, ಇನ್ನೊಬ್ಬರು ನಾಗನಾಥ; ಸರ್ಪತ್ವ ಇಬ್ಬರಲ್ಲೂ ಸಾಂದ್ರವಾಗಿದೆ. ಅವರಲ್ಲಿ ಯಾರನ್ನೂ ಪ್ರಧಾನಿಯ ಪಟ್ಟಕ್ಕೇರಿಸುವುದು ಅಪಾಯಕರವೇ. ಇಬ್ಬರನ್ನೂ ಕಲ್ಲುನಾಗರರನ್ನಾಗಿಸಿ ಕೂರಿಸಿ; ಬೇಕಾದವರು ಯಥಾಶಕ್ತಿ ಪೂಜಿಸಿಕೊಳ್ಳಲಿ, ಅಷ್ಟೆ. ಇವರ ಯುದ್ಧ ಮುಸುಕಿನಲ್ಲೇ ನಡೆಯುತ್ತಿತ್ತು, ಈಗ ರಂಗಮಂಚದ ಮೇಲೆ ಝಗಮಗಿಸುವ ಬೆಳಕಿನಲ್ಲಿ ನಡೆದು ವೃದ್ಧ ನಾಯಕನನ್ನು ಪಕ್ಕಕ್ಕೆ ತಳ್ಳಿ ಯುವ ನಾಯಕ ಬಾವುಟ ಹಿಡಿದು ಕೇಕೆ ಹಾಕುತ್ತಿದ್ದಾರೆ. ಸದ್ಯಕ್ಕೆ ಇದೆಲ್ಲಾ ಒಂದು ರೀತಿಯ ಪ್ರಹಸನವಾಗಿ ಕಾಣುತ್ತಿದೆ, ಆದರೆ ನಾಳೆಯ ದಿನಗಳಲ್ಲಿ ದೌರ್ಜನ್ಯಗಳ ಮಹಾಪೂರಕ್ಕೆ ಇದು ನಾಂದಿಯಾಗ ಬಲ್ಲದು. ಆ ಎಚ್ಚರ ಎಲ್ಲ ರಾಜಕೀಯ ಪಕ್ಷಗಳಲ್ಲೂ ಇರಬೇಕು. ಒಂದೇ ಒಂದು ಬಾರಿಯೂ ಲೋಕಸಭೆಗೆ ಚುನಾಯಿತರಾಗುವ ಸಾಮರ್ಥ್ಯವಿಲ್ಲದ ಸಿಂಗ್ ಮಹಾಶಯರು ಸತತವಾಗಿ ನಮ್ಮ ಪ್ರಧಾನಿ. ಅವರ ಶಾಶ್ವತ ವಿಳಾಸ ಗುವಾಹತಿಯ ಬಾಡಿಗೆ ಮನೆ! ಅದನ್ನು ದೇಶ ನಂಬಬೇಕು, ಅಲ್ಲಿಂದ ಇವರು ರಾಜ್ಯಸಭೆಗೆ ಬರಬೇಕು, ಪ್ರಧಾನಿಯಾಗಿ ದೇಶವನ್ನು ಅಮೆರಿಕೆಯ ಭಂಟನನ್ನಾಗಿಸಬೇಕು, ಇದು "ದೇಶದ ಕರ್ಮ" ಎಂದು ಜನ ತೂಗಡಿಸುತ್ತಿರಬೇಕು. ನಮ್ಮ ಅದ್ವಾನಿಯವರು ಬಿಹಾರದ ಮುಖ್ಯಮಂತ್ರಿ ನಿತೀಶ್ ಕುಮಾರ್‌ಗೆ ಉಪದೇಶ ನೀಡಿದರು, "ನಮ್ಮ ಪಕ್ಷದ ಸಖ್ಯ ಕಳೆದುಕೊಳ್ಳಲು ಹಾತೊರೆಯಬೇಡಿ, ನಿಧಾನಸ್ಥ ರಾಗಿರಿ," ಎಂದು. ಇದಲ್ಲವೇ ರಾಜಕೀಯ ವ್ಯಂಗ್ಯ! ತಾವು ನಾಟಕೀಯವಾಗಿ ಪತ್ರ ಬರೆದು ಸಂನ್ಯಾಸ ಪಡೆಯುತ್ತಾರೆ, ೧೨ ಗಂಟೆಯೊಳಗಾಗಿ ಮೀಸೆ ಭಾಗವತರ ಆದೇಶದಂತೆ ಅದನ್ನು ಹಿಂದಕ್ಕೆ ಪಡೆಯುತ್ತಾರೆ; ಅದು ಹಾತೊರಿಕೆಯಲ್ಲ, ನಿತೀಶ್ ಕುಮಾರ್ ಏನಾದರೂ ಅದ್ವಾನಿ ಪಕ್ಷದೊಡನೆ ಸಂಬಂಧ ಕಳಚಿಕೊಂಡರೆ ಅದು ಹಾತೊರಿಕೆ! ಇರಲಿ, ಈ ನಿತೀಶರ ನೀತಿ ಹೇಗಿದೆ ನೋಡಿ: ಅದ್ವಾನಿಯ ಭಾಜಪವು ಅನಿಷ್ಟವಲ್ಲ, ಆದರೆ ಮೋದಿಯ ಭಾಜಪ ಅನಿಷ್ಟ. ಅಂದರೆ, ಭಾಜಪದಲ್ಲಿ ಎಷ್ಟು ಭಾಜಪಗಳಿವೆ? ನಿತೀಶರು ಅರ್ಹತಾ ಪತ್ರ ನೀಡಿದರೆ ಫ್ಯಾಸಿಸ್ಟ್ ಪಕ್ಷವು ನಾಗರಿಕ ಪಕ್ಷವಾಗುತ್ತದೆ. ಆ ಪಕ್ಷದೊಡನೆ ೧೭ ವರ್ಷದ ಸಖ್ಯ ಹೊಂದಿದ್ದ ನಿತೀಶರಿಗೆ ಈಗ ಕೂಡಲೆ ಬೋಧೆಯುಂಟಾಗಿದೆ! ನಿಜವಾದ ಸನ್ನಿವೇಶವೇನು? ಮೋದಿಯಿಂದ ತಕ್ಷಣ ಎದುರಾಗುವ ಹಿಂಸೆ, ಬಿಕ್ಕಟ್ಟು, ಇತ್ಯಾದಿ. ಇಂತಹ ಅರಿವು ಸ್ವಾಗತಾರ್ಹ. ಆದರೆ ನಾಗನಾಥ ಅದ್ವಾನಿ ಯವರ ಮುಖವೂ ಅಂಥದೇ. ಮೋದಿ ನೇರವಾಗಿ ಮಾಡುವುದನ್ನು ಅದ್ವಾನಿ ತಮ್ಮ ಸೇನೆಯ ಭಂಟರಿಂದ ಮಾಡಿಸುತ್ತಾರೆ, ಅಷ್ಟೆ. ಪ್ರಸಕ್ತ ರಾಜಕೀಯ ತುರ್ತು ನಿತೀಶರನ್ನು ಭಾಜಪದಿಂದ ವಿಮುಖಗೊಳಿಸಿದೆ. ಮತ್ತೆ ಯಾವಾಗ ಬಿಹಾರದ ಮೋದಿಯನ್ನು ಆಲಂಗಿಸಿಬಿಡುತ್ತಾರೋ ಈಗಲೇ ಹೇಳಲಾಗದು. ಅಂತಹ ಮುತ್ಸದ್ದಿ ದೇಶದಲ್ಲಿ ಮೂರನೆಯ ರಂಗದ ನಾಯಕತ್ವ ವಹಿಸಬೇಕೆಂಬ ಸಲಹೆ ಕೇಳಿಬರುತ್ತಿದೆ. ಜನಗಳ ನಡುವೆ ಹೋಗಿ ಈ "ರಂಗ"ದ ನಾಯಕರು ಹಾಗೂ ಪಕ್ಷಗಳು ಕೆಲಸ ಮಾಡದೆ ಚುನಾವಣೆ ಬಂದಾಗ ಕೂಟಗಳನ್ನು ರಚಿಸಿಕೊಂಡು ಮತ ಯಾಚಿಸಿದರೆ ಜನ ಇವರಿಗೆ ಮಂಗಳಾರತಿ ಮಾಡಿ ಕಳಿಸುತ್ತಾರೆ, ಅಷ್ಟೇ. ಸದ್ಯಕ್ಕೆ ನಿತೀಶ್ ಕುಮಾರ್ ತಮ್ಮ ಪಕ್ಷವನ್ನು ಭಾಜಪ ತೆಕ್ಕೆಯಿಂದ ಹೊರಗೆಳೆದದ್ದಷ್ಟೇ ಸ್ವಾಗತಾರ್ಹ ಕ್ರಮ.

* * *

ಅದ್ವಾನಿ, ಭಾಜಪ ಮತ್ತು ಫ್ಯಾಸಿಸಂ ಪ್ರಸ್ತಾಪ ಮಾಡಿದ್ದರಿಂದ ನೆನಪಿಗೆ ಬರುತ್ತಿರುವುದು ಎಚ್. ಲ್ಯೂಡರ್ಸ್ ಎಂಬ ಸಂಸ್ಕೃತ ವಿದ್ವಾಂಸ. ವೈದಿಕ ಸಾಹಿತ್ಯ, ವ್ಯಾಕರಣ, ಇತ್ಯಾದಿ ಕ್ಷೇತ್ರಗಳಲ್ಲಿ ಆತ ಘನವಿದ್ವಾಂಸನೆನಿಸಿಕೊಂಡಿದ್ದಾನೆ. ಆತ ೧೯೩೦ರ ದಶಕದಲ್ಲಿ ಜರ್ಮನಿಯಲ್ಲಿದ್ದ. ಹಿಟ್ಲರ್ ಮತ್ತು ಅವನ ಸೇನೆ (ಸ್ಟಾರ್ಮ್‌ಟ್ರೂಪರ್ಸ್) ಪ್ರವರ್ಧಮಾನಕ್ಕೆ ಬರುತ್ತಿದ್ದ ಕಾಲ. ಆಗ್ಗೆ ಆಗಲೆ ಲ್ಯೂಡರ್ಸ್ ಅನೇಕ ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸಿದ್ದ ಮತ್ತು ಬರ್ಲಿನ್ನಿನಲ್ಲಿ ಹುಂಬೋಲ್ಡ್‌ಟ್ ವಿಶ್ವವಿದ್ಯಾನಿಲಯದ ಉಪಕುಲಪತಿಯಾಗಿದ್ದ. ಹಿಟ್ಲರನ ನೇತೃತ್ವದಲ್ಲಿ ವಿವಿಧ ರೀತಿಯ ಹಲ್ಲೆಗಳು ಸಾಮಾನ್ಯವಾಗಿದ್ದ ಕಾಲ ಅದು. ಕಮ್ಯುನಿಸ್ಟರ ಮತ್ತು ಸೋಷಿಯಲ್ ಡೆಮೊಕ್ರಾಟರ ಪಕ್ಷಗಳ ಕಚೇರಿಗಳಿಗೆ ಬೆಂಕಿ ಇಕ್ಕುವುದು, ನಾಯಕರನ್ನು ಕೊಲ್ಲುವುದು, ಮುಂತಾದ ದುಷ್ಕೃತ್ಯಗಳು ಸತತವಾಗಿ ಜರುಗುತ್ತಿದ್ದವು. ಬರ್ಲಿನ್ ವಿಶ್ವವಿದ್ಯಾನಿಲಯದೆದುರು ಪ್ರಗತಿಪರ ಪುಸ್ತಕಗಳನ್ನು ಸುಡುವುದು ಅಂತಹ ಒಂದು ಕಾರ್ಯಕ್ರಮವಾಗಿತ್ತು. (ಈಗ ಆ ಜಾಗದಲ್ಲಿ ಭಾನುವಾರಗಳಂದು ವಿದ್ಯಾರ್ಥಿ ಗಳು ಮತ್ತು ಪುಸ್ತಕ ಮಾರಾಟಗಾರರು ಬಂದು ಅಧ್ಯಯನ, ವ್ಯಾಪಾರ, ಚರ್ಚೆಗಳು, ಇತ್ಯಾದಿಗಳಲ್ಲಿ ಭಾಗವಹಿಸುತ್ತಾರೆ.) ಜೊತೆಗೆ, ವಿಶ್ವವಿದ್ಯಾನಿಲಯದಲ್ಲಿ ಹಿಟ್ಲರ್ ವಿರೋಧಿ ವಿದ್ಯಾರ್ಥಿ ಬಣಗಳನ್ನು ಹಿಂಸಿ ಸುವುದು, ಅವರು ತರಗತಿಗಳಿಗೆ ಬಾರದಂತೆ ತಡೆಯುವುದು, ದೈಹಿಕ ಹಿಂಸೆ, ಇವೆಲ್ಲಾ ದಿನನಿತ್ಯದ ಕಾರ್ಯಕ್ರಮಗಳಾಗಿದ್ದವು. (ನರೇಂದ್ರ ಮೋದಿ ಭಾರತದ ಪ್ರಧಾನಿಯಾದರೆ ನಮ್ಮ ನಡುವೆಯೂ ಇಂತಹ ಪ್ರಸಂಗಗಳು ಉಲ್ಬಣಿಸುವ ಸಾಧ್ಯತೆ ನೂರಕ್ಕೆ ನೂರರಷ್ಟಿದೆ ಎನ್ನುವುದನ್ನು ಮರೆಯಬಾರದು). ಹುಂಬೋಲ್ಡ್‌ಟ್ ವಿಶ್ವವಿದ್ಯಾನಿಲಯದೆದುರು ಹಿಟ್ಲರ್ ಪಡೆ ಪುಸ್ತಕಗಳನ್ನು ಗುಡ್ಡೆಹಾಕಿ ಸುಟ್ಟ ಮಾರನೆಯ ದಿನ "ವಿದ್ಯಾರ್ಥಿ" ಗೂಂಡಾ ಪಡೆಯು ಹುಂಬೋಲ್ಡ್‌ಟ್ ವಿಶ್ವವಿದ್ಯಾನಿಲಯದೊಳಗೆ ನುಗ್ಗಿ ಪುಸ್ತಕ ಭಂಡಾರದಿಂದ ಪುಸ್ತಕಗಳನ್ನು ತೆಗೆದು ಹೊರಹಾಕುವುದು, ವಿದ್ಯಾರ್ಥಿ–ಅಧ್ಯಾಪಕರನ್ನು ಆಯ್ಕೆ ಮಾಡಿಕೊಂಡು ಥಳಿಸುವುದು, ಮುಂತಾದ ದುಷ್ಕೃತ್ಯ ಗಳಲ್ಲಿ ತೊಡಗುವುದಿತ್ತು. ನೂರಾರು ಮಂದಿ ಹಿಟ್ಲರ್ ಮರಿಗಳ "ವಿದ್ಯಾರ್ಥಿ" ಗೂಂಡಾ ಸೇನೆ ವಿಶ್ವವಿದ್ಯಾನಿಲಯದೆದುರು ಬಂದಿತು, ಒಳಗೆ ನುಗ್ಗಲು ತಯಾರಿ ನಡೆಸುತ್ತಿದ್ದಿತು. ಸಂಸ್ಕೃತ ವಿದ್ವಾಂಸ – ಉಪಕುಲಪತಿ ಲ್ಯೂಡರ್ಸ್ ಮೊದಲೇ ಅಲ್ಲಿ ಬಂದು ಉಪಸ್ಥಿತನಿದ್ದ. ಗೂಂಡಾಗಳನ್ನು ಒಳಗೆ ಬಿಡದಂತೆ ಅಡ್ಡಗಟ್ಟಿ ಹೇಳಿದ: "ನಿಮ್ಮಲ್ಲಿ ಒಬ್ಬನನ್ನೂ ನಾನು ಒಳಗೆ ಬಿಡುವುದಿಲ್ಲ, ಇಲ್ಲಿಂದ ಮೊದಲು ತೊಲಗಿ ಹೋಗಿ; ನಿಮ್ಮ ದುಷ್ಕೃತ್ಯಗಳಿಗೆ ಇಲ್ಲಿ ಅವಕಾಶವಿಲ್ಲ. ಹೋಗಿ ನಿಮ್ಮ ನಾಯಕರಿಗೆ ತಿಳಿಸಿ, ಇಂತಹ ಕೆಲಸ ಗಳನ್ನು ಮುಂದುವರಿಸಕೂಡದು, ಎಂದು." ಗೂಂಡಾಪಡೆ ಅಂತಹ ವಿರೋಧ ಮತ್ತು ಪ್ರತಿಭಟನೆ ಯನ್ನು ನಿರೀಕ್ಷಿಸಿರಲಿಲ್ಲ, ಬೇರೆಲ್ಲೂ ಉಪಕುಲಪತಿಗಳು ಅಷ್ಟು ಗಟ್ಟಿಯಾಗಿ ಮಾತನಾಡಿರಲಿಲ್ಲ, ಬಾಗಿಲ ಬಳಿ ನಿಂತು ಗೂಂಡಾಗಳನ್ನು ತಡೆದಿರಲಿಲ್ಲ. ಸಂಸ್ಕೃತ ವಿದ್ವಾಂಸ ಲ್ಯೂಡರ್ಸ್ ಅದನ್ನು ದಿಟ್ಟತನದಿಂದ

ಮಾಡಿದ, ಅನೇಕರ ಮೆಚ್ಚುಗೆ ಮತ್ತು ಗೌರವ ಪಡೆದ. ಗೂಂಡಾಗಳು ಬಾಲ ಮುದುರಿಕೊಂಡು ಹೊರಟು ಹೋದರು. ಮಾರನೆಯ ಬೆಳಿಗ್ಗೆ ವೇಳೆಗೆ ಲ್ಯೂಡರ್ಸ್‌ನನ್ನು ಆತನ ಸ್ಥಾನದಿಂದ ಕಿತ್ತುಹಾಕುವ ಆಜ್ಞೆ ಹೊರಬಂದಿತು. ಆತ ಉಪಕುಲಪತಿಯ ಸ್ಥಾನ ಕಳೆದುಕೊಂಡ. ಅದಕ್ಕೆ ಅವನಿಗೇನೂ ಪಶ್ಚಾತ್ತಾಪ ವಾಗಲಿಲ್ಲ. "ನನ್ನನ್ನು ಕೆಲಸದಿಂದ ಹೊರದೂಡಿ, ಆದರೆ ವಿಶ್ವವಿದ್ಯಾನಿಲಯದ ಘನತೆ ಹಾಳು ಮಾಡಬೇಡಿ, ಗ್ರಂಥಭಂಡಾರಕ್ಕೆ ಬೆಂಕಿ ಹಚ್ಚಬೇಡಿ, ವಿದ್ಯಾರ್ಥಿಗಳನ್ನು ವ್ಯಾಸಂಗ ಮಾಡಲು ಬಿಡಿ; ಸಾಕು ನಿಮ್ಮ ಪೋಕರಿತನ" ಎಂಬ ಹೇಳಿಕೆ ಕೊಟ್ಟ. ಮುಂದೇನಾಯಿತೆಂದು ಹೇಳಬೇಕಾಗಿಲ್ಲ. ಲ್ಯೂಡರ್ಸ್ ಫ್ಯಾಸಿಸ್ಟರ ವಿರುದ್ಧ ತನ್ನ ದನಿ ಎತ್ತಿದ್ದು ಇತಿಹಾಸವಾಯಿತು.

ಇದನ್ನೇಕೆ ನೆನೆಯಬೇಕೆಂದರೆ, ನಮ್ಮಲ್ಲಿ ಫ್ಯಾಸಿಸ್ಟ್ ಮಾದರಿಯ "ವಿದ್ಯಾರ್ಥಿ" ಗೂಂಡಾ ಪಡೆಗಳು ದುರುಳತನದಿಂದ ದಾಂದಲೆ ನಡೆಸಿದಾಗ (ಮಂಗಳೂರು, ಪುತ್ತೂರು, ಮುಂತಾದೆಡೆಗಳಲ್ಲಿ) ಯಾವ ಸಂಸ್ಕೃತ ಪಂಡಿತನೂ ಆ ಪಡೆಗಳನ್ನು ಹಿಮ್ಮೆಟ್ಟಿಸಲು ಹೋಗಲಿಲ್ಲ, ಯಾವ ಪ್ರಾಚಾರ್ಯ–ಉಪಕುಲಪತಿಗಳೂ ಆ ಪಡೆಗಳನ್ನು ತಡೆಯಲು ಬಾಗಿಲಿಗೆ ಬಂದು ನಿಲ್ಲಲಿಲ್ಲ. ಬದಲಾಗಿ, ಅಧಿಕಾರಾರೂಢ ಭಾರತೀಯ ಜನತಾ ಪಕ್ಷದ ಮಂತ್ರಿಗಳ ಪರಾಕು ಹೇಳುವ ನಾಚಿಕೆಗೇಡಿನ ವರ್ತನೆ ಪ್ರದರ್ಶಿಸಿದರು. ಯಾವುದು ಸಂಸ್ಕೃತ–ಸಂಸ್ಕೃತಿಗಳ ಹಿರಿಮೆ? ಲ್ಯೂಡರ್ಸ್‌ನ ಕೆಚ್ಚೆದೆಯ ಪ್ರತಿಭಟನೆಯೋ ಅಥವಾ ಪರಾಕು ಹೇಳುವ ಕೀಳು ನಡತೆಯೋ? ಲ್ಯೂಡರ್ಸ್ ಗಳಿಸಿದ್ದಷ್ಟು ವಿದ್ವತ್ತು ಗಳಿಸುವುದಿರಲಿ, ಅವನ ಸಾಂಸ್ಕೃತಿಕ ನಿಷ್ಠೆಯ ನ್ನಾದರೂ ನಮ್ಮಲ್ಲಿ ಮೈಗೂಡಿಸಿಕೊಳ್ಳಬೇಡವೆ? ಲ್ಯೂಡರ್ಸ್‌ನ ಶಿಷ್ಯೆಯಾಗಿರದ, ಆದರೆ ಹುಂಬೋಲ್ಡ್ಟ್ ವಿಶ್ವವಿದ್ಯಾನಿಲಯದಲ್ಲಿ ಸಂಸ್ಕೃತ ಕಲಿತು ಅಲ್ಲೇ ನಲವತ್ತು ವರ್ಷಗಳ ಕಾಲ ಪ್ರಾಧ್ಯಾಪಕಳಾಗಿ ಕೆಲಸ ಮಾಡಿದ ಡಾ॥ ಹಿಲ್ಟ್ರೂಡ್ ರುಸ್ಟಾವ್ ಈ ಪ್ರಸಂಗವನ್ನು ಸ್ಮರಿಸಿ, ತಿಳಿಸಿ, ಲ್ಯೂಡರ್ಸ್ ಬಗ್ಗೆ ಭಾವುಕಳಾದಾಗ ವಿದ್ವತ್ಪ್ರಪಂಚದ ಜವಾಬ್ದಾರಿಯ ಅರಿವು ಯಾರಿಗಾದರೂ ಮೂಡ ಬೇಕು. ಈಚೆಗೆ ಹುಂಬೋಲ್ಡ್ಟ್ ವಿಶ್ವವಿದ್ಯಾನಿಲಯ ದೆದುರು ಆಕೆಯ ಜೊತೆ ನಿಂತು ಆಕೆ ತೋರಿಸಿದ ಜಾಗಗಳನ್ನು ನೋಡಿದ್ದು, ಆಕೆ ತಿಳಿಸಿದ ಪ್ರಸಂಗಗಳನ್ನು ಕೇಳಿದ್ದು ಸದಾ ಸ್ಮರಣೆಯಲ್ಲಿ ಉಳಿಯುವಂಥದು. ಸಂಸ್ಕೃತದಲ್ಲಿರುವ ಸಾಹಿತ್ಯ ಓದಿ ಅಥವಾ ಪಾಠ ಮಾಡಿ ಲ್ಯೂಡರ್ಸ್‌ನ ವ್ಯಕ್ತಿತ್ವವನ್ನು ನಮ್ಮಲ್ಲಿ ಬೆಳೆಸಿ ಕೊಳ್ಳದಿದ್ದರೆ ಸಂಸ್ಕೃತದ ಜ್ಞಾನ ವ್ಯರ್ಥ. ನಮ್ಮ ಸಂಸ್ಕೃತ ವಿಶ್ವವಿದ್ಯಾನಿಲಯ ಇದನ್ನು ನೆನಪಿನಲ್ಲಿ ಇಡಲಿ, "ವಿದ್ಯಾರ್ಥಿ" ಗೂಂಡಾ ಪಡೆಗಳ ದೌರ್ಜನ್ಯ ಗಳನ್ನು ಪ್ರತಿಭಟಿಸದ ನಮ್ಮ ರಾಜ್ಯದ ಅಧ್ಯಾಪಕ ವೃಂದ ಮತ್ತು ಪ್ರಾಚಾರ್ಯ–ಉಪಕುಲಪತಿಗಳ ತಂಡ ಅಂತಃಕರಣಗಳನ್ನು ಕೆದಕಿ ನೋಡಿಕೊಳ್ಳಲಿ.

* * *

ಗೋವಾದ ರಾಜಧಾನಿಯಲ್ಲಿ ನಡೆದ ಭಾಜಪ ಕಾರ್ಯಕಾರಿ ಸಮಿತಿಯ ಬೈಠಕ್ ಪಕ್ಷದೊಳಗಿನ ಬಿರುಕನ್ನು ಸ್ಪಷ್ಟವಾಗಿ ಹೊರಗೆಡಹಿತು. ಎಲ್ಲ ಪಕ್ಷ ಗಳಿಗಿಂತ ಭಿನ್ನ, ತನ್ನ ಕಾರ್ಯಕರ್ತರ ದಂಡೇ ಬಂಡವಾಳ ಎಂದು ಹೇಳಿಕೊಳ್ಳುವ ಈ ರಾಜಕೀಯ ಪಕ್ಷದ ಚಾಲಕಶಕ್ತಿ ಆರೆಸ್ಸೆಸ್ ಎನ್ನುವುದು ಮತ್ತೊಮ್ಮೆ ರುಜುವಾತಾಯಿತು. ತಾನು ಸೃಷ್ಟಿಸಿದ ರಾಜಕೀಯ ಮುಖವಾಡ ಬಿಕ್ಕಟ್ಟಿನಲ್ಲಿ ಸಿಲುಕಿ ಕಿತ್ತಾಡುತ್ತಿರುವಾಗ ತೇಪೆ ಹಾಕಲು ಬರುವುದೇ ಮಾತೃಸಂಸ್ಥೆ ಆರೆಸ್ಸೆಸ್. ಗುಜರಾತ್ ಮುಖ್ಯಮಂತ್ರಿ ನರೇಂದ್ರ ಮೋದಿಗೆ ತರಾತುರಿಯಲ್ಲಿ ಪಟ್ಟ ಕಟ್ಟಲು ಅಧ್ಯಕ್ಷ ರಾಜನಾಥ ಸಿಂಗರ ಗುಂಪು ನಿರ್ಧರಿಸಿದ್ದುದರಿಂದ ಅದ್ವಾನಿ ಹಾಗೂ ಅವರ ಗುಂಪಿನ ಹಲವರು ಸಭೆಗೇ ಬಾರದೆ ಹೊರಗುಳಿದರು. ನರೇಂದ್ರ ಮೋದಿಯನ್ನು ಭಾಜಪದ ಚುನಾವಣಾ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿದ ನಂತರ ನಾಟಕೀಯ ಬೆಳವಣಿಗೆಗಳು ಪ್ರಾರಂಭ ಪಕ್ಷದಲ್ಲಿ. ಇಪ್ಪತ್ತನಾಲ್ಕು ಗಂಟೆಗಳಲ್ಲಿ ಹಿರಿಯ ನಾಯಕ, ಮಾಜಿ ಉಪಪ್ರಧಾನಿ, ಅಟಲ್ ಬಿಹಾರಿ ವಾಜಪೇಯಿ ಜೊತೆ ಪಕ್ಷವನ್ನು ಬೆಳೆಸಿದಾತ, ರಥಯಾತ್ರೆಯ ನಾಯಕ ಲಾಲಕೃಷ್ಣ ಅದ್ವಾನಿಯ ರಾಜೀನಾಮೆ, ಅಷ್ಟೇ ವೇಗದಲ್ಲಿ ಮುಂದೆ ಇಪ್ಪತ್ತನಾಲ್ಕು ಗಂಟೆಗಳಲ್ಲಿ ಆರೆಸ್ಸೆಸ್ ಮುಖಂಡ ಮೋಹನ್ ಭಾಗವತ್ ಮಧ್ಯಸ್ತಿಕೆಯಲ್ಲಿ ಎಲ್ಲ ಸ್ತಬ್ಧ. ಇವೆಲ್ಲ ಈಗ ಭಾಜಪ ಪುರಾಣದ ಇನ್ನೊಂದು ಪ್ರಕರಣ. ಈ ತೇಪೆ ಎಷ್ಟು ದಿನ ಹರಕು ಮುಚ್ಚೀತು. ಇದು 'ಮಿಲಿಯನ್ ಡಾಲರ್ ಪ್ರಶ್ನೆ.' ಒಂದು ಕಾಲದಲ್ಲಿ ಮೋದಿ ಅದ್ವಾನಿಗೆ ಪಟ್ಟಶಿಷ್ಯ. ರಾಮಜನ್ಮಭೂಮಿ ರಥಯಾತ್ರೆಯಲ್ಲಿ ಮೋದಿ ಬಲಗೈ ಭಂಟ ಅದ್ವಾನಿಗೆ. ಲೋಕಸಭೆಯಲ್ಲಿ ವಿರೋಧ ಪಕ್ಷದ ನಾಯಕಿ ಸುಷ್ಮಾ ಸ್ವರಾಜ್, ರಾಜ್ಯಸಭೆಯ ನಾಯಕ ಅರುಣ್ ಜೇಟ್ಲಿ, ಮಾಜಿ ವಿದೇಶಾಂಗ ಸಚಿವ ಜಸ್ವಂತ್ ಸಿಂಗ್, ಮಾಜಿ ಹಣಕಾಸು ಸಚಿವ ಇವರೆಲ್ಲ ಮೋದಿಗೆ ಹೊಸ ಹುದ್ದೆಯ ಬಗ್ಗೆ ಅಸಮಾಧಾನಿಗಳೇ. ತಮ್ಮದೇ ಆದ ರೀತಿಯಲ್ಲಿ ಅವರು ಬುಸುಗುಟ್ಟುತ್ತಿದ್ದಾರೆ. ಇದು ಮತ್ತೆ ಯಾವಾಗ ಸ್ಫೋಟ ವಾಗುತ್ತೋ. ಚುನಾವಣೆ ಹತ್ತಿರ ಬರುತ್ತಿದ್ದ ಹಾಗೆ ಟಿಕೇಟು ಹಂಚಿಕೆಯಲ್ಲಿ ನಡೆಯುವ ಜುಗ್ಗಾಟವನ್ನೂ ನೋಡಬಹುದು. ಮತ್ತೆ ಅಧಿಕಾರದ ಚುಕ್ಕಾಣಿ ಹಿಡಿಯುವ ಕನಸು ಕಾಣುತ್ತಿರುವ ಎನ್‌ಡಿಎಯ ಮುಖ್ಯ ಪಾತ್ರಧಾರಿ ಜನತಾದಳ ಯುನೈಟೆಡ್ ಕಳಚಿಕೊಂಡಿದೆ. ಉಳಿದಿರುವುದು ಅಕಾಲಿದಳ, ಶಿವಸೇನೆ ಮಾತ್ರ. ಮೋದಿಗೂ ಈ ಎರಡು ಪಕ್ಷ ಗಳಿಗೂ ಅಷ್ಟಕ್ಕಷ್ಟೆ. ಮುಂದಿನ ಪ್ರಧಾನಿಯಾಗಲು ಹೊರಟಿರುವ ನರೇಂದ್ರ ಮೋದಿಯ ಮೋಡಿ ಎಷ್ಟು ಯಶಸ್ವಿಯಾಗುವುದೋ ನೋಡೋಣ. ಪ್ರಧಾನಿ ಸಿಂಹಾಸನ ಅಲಂಕರಿಸಲು ಮೋದಿ ಒಬ್ಬರೇ ಅಲ್ಲ, ಬಿಹಾರದ ಮುಖ್ಯಮಂತ್ರಿ ನಿತೀಶ್ ಕುಮಾರ್, ಉತ್ತರ ಪ್ರದೇಶದ ಮುಲಾಯಮ್ ಸಿಂಗ್ ಯಾದವ್, ಲಾಲ ಕೃಷ್ಣ ಅದ್ವಾನಿ, ಕಾಂಗ್ರೆಸ್ಸಿನ ರಾಹುಲ್ ಗಾಂಧಿ ಮತ್ತು ಇನ್ನೂ ಯಾರು ಯಾರದೋ ದೊಡ್ಡ ಹಿಂಡೇ ಇದೆ.

* * *

ಹಲವು ಹಗರಣಗಳಲ್ಲಿ ಮುಳುಗಿಹೋಗಿರುವ ಪ್ರಧಾನಿ ಮನಮೋಹನ ಸಿಂಗ್ ಮತ್ತೊಮ್ಮೆ ಅಸ್ಸಾಮಿ ನಿಂದಲೇ ರಾಜ್ಯಸಭೆಗೆ ಆಯ್ಕೆಯಾಗಿದ್ದಾರೆ. ಇನ್ನಾರು ವರ್ಷ ರಾಜ್ಯಸಭೆಯ ಸದಸ್ಯತ್ವ ಗಟ್ಟಿ. ಪ್ರಧಾನಿ ಸ್ಥಾನವಂತೂ ಇನ್ನು ಅವರಿಗೆ ದೂರವೆ. ಒಂಬತ್ತು ವರ್ಷಗಳ ಆಡಳಿತ, ಸಮ್ಮಿಶ್ರ ಸರಕಾರದ ಎಳೆದಾಟ, ಭ್ರಷ್ಟಾಚಾರ ಪ್ರಕರಣಗಳ ಸರಮಾಲೆ ಇವೆಲ್ಲ ದೇಶವನ್ನು ಅಮೆರಿಕದ ಬಾಲಂಗೋಚಿ ಮಾಡಿರುವ ಮನಮೋಹನ ಸಿಂಗ್ ದಾಖಲೆಗಳು. ಇದರ ಜೊತೆಗೆ ಇನ್ನೊಂದು ದಾಖಲೆಯನ್ನೂ ಈತ ಸ್ಥಾಪಿಸಿದ್ದಾರೆ. ಅದು ಸ್ವತಂತ್ರ ಭಾರತದ ಇತಿಹಾಸದಲ್ಲಿ ಚುನಾವಣೆಗಳನ್ನು ಎದುರಿಸಿ ಜನ ಪ್ರತಿನಿಧಿಯಾಗಿ ಲೋಕಸಭೆಗೆ ಆಯ್ಕೆ ಯಾಗದೆ, ಪರೋಕ್ಷವಾಗಿ ರಾಜ್ಯಸಭೆಗೆ ಸದಸ್ಯನಾಗಿ ಆರಿಸಿ ಬಂದಿರುವ ವ್ಯಕ್ತಿ ಇಷ್ಟು ದೀರ್ಘಕಾಲ ಪ್ರಧಾನಿಯಾಗಿರುವುದು.

ನಲವತ್ತೇಳು ವರ್ಷಗಳ ಹಿಂದೆ ೧೯೬೬ರಲ್ಲಿ ಶ್ರೀಮತಿ ಇಂದಿರಾ ಗಾಂಧಿ ಪ್ರಧಾನಿಯಾದಾಗ ರಾಜ್ಯಸಭೆಯ ಸದಸ್ಯರೊಬ್ಬರು ಪ್ರಧಾನಿಯಾಗುವ ಅರ್ಹತೆಯ ಪ್ರಶ್ನೆ ಉದ್ಭವಿಸಿತ್ತು. ಪಾರ್ಲಿಯಮೆಂಟರಿ ವ್ಯವಸ್ಥೆಯಲ್ಲಿ ಲೋಕಸಭೆಗೆ ಆಯ್ಕೆಯಾಗಿರುವವರು ಮಾತ್ರವೇ ಪ್ರಧಾನಿಯಾಗಲು ಅರ್ಹತೆ ಪಡೆದಿರುತ್ತಾರೆ. ಇದು ಲಾಗಾಯ್ತಿನಿಂದ ಬಂದಿರುವ ಪರಂಪರೆ. ಶ್ರೀಮತಿ ಇಂದಿರಾ ಗಾಂಧಿ, ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಸಂಪುಟದಲ್ಲಿ ವಾರ್ತಾ ಸಚಿವೆ ಯಾದಾಗ ಅವರು ರಾಜ್ಯಸಭೆ ಸದಸ್ಯೆ, ೧೯೬೪ರಲ್ಲಿ ಆಯ್ಕೆಯಾಗಿದ್ದರು. ಪ್ರಧಾನಿಯಾಗಿ ಆಯ್ಕೆಗೊಂಡ ಮೊದಲ ರಾಜ್ಯಸಭಾ ಸದಸ್ಯೆ. ಪಾರ್ಲಿಮೆಂಟಿನಲ್ಲಿ ಈ ಬಗ್ಗೆ ಚರ್ಚೆ ಕೂಡ ನಡೆದಿತ್ತು. ಹೆಸರಾಂತ ಪಾರ್ಲಿಯಮೆಂಟೇರಿಯನ್ ಎಂದು ಖ್ಯಾತನಾಮ ರಾಗಿದ್ದ ಎಚ್. ವಿ. ಕಾಮತ್‌ರವರು ಸಂವಿಧಾನಕ್ಕೆ ಈ ಬಗ್ಗೆ ತಿದ್ದುಪಡಿಯೊಂದನ್ನು ಖಾಸಗಿ ಮಸೂದೆ ಯಾಗಿ ಮಂಡಿಸಿದ್ದರು. ಅದು ಪ್ರಧಾನ ಮಂತ್ರಿ ಯಾಗಲಿ ಅಥವಾ ರಾಜ್ಯಗಳ ಮುಖ್ಯಮಂತ್ರಿ ಗಳಾಗಲಿ ಅಧಿಕಾರ ವಹಿಸಿಕೊಳ್ಳುವಾಗ ಕೆಳಮನೆಗೆ ಆಯ್ಕೆಯಾಗಿರುವ ಜನಪ್ರತಿನಿಧಿಯಾಗಿರಬೇಕು. ಇದು ಕಡ್ಡಾಯವಾಗಿ ಪಾಲಿಸಬೇಕಾದ ನಿಯಮ, ಪಾರ್ಲಿಯಮೆಂಟರಿ ಸಂಪ್ರದಾಯದ ಉನ್ನತಮಟ್ಟ ಕಾಪಾಡಿಕೊಳ್ಳಲು. ಈ ಬಗ್ಗೆ ಪಾರ್ಲಿಯಮೆಂಟಿನಲ್ಲಿ ಇಡೀ ದಿನ ಚರ್ಚೆ ನಡೆದಿತ್ತು. ಚರ್ಚೆಯಲ್ಲಿ ಕಮ್ಯುನಿಸ್ಟ್ ನಾಯಕ ಪ್ರೊ॥ ಹಿರೇನ್ ಮುಖರ್ಜಿ, ಯಶಪಾಲ ಸಿಂಗ್, ವಿಶ್ವನಾಥ ಪಾಂಡೆ, ಹರೀಶ್ ಚಂದ್ರ ಮಾಥುರ್, ಜೈಸುಖ್ ಲಾಲ್ ಹಾಥಿ ಮುಂತಾದ ಘಟಾನುಘಟಿಗಳು ಭಾಗವಹಿಸಿದ್ದರು. ಮೂವತ್ತೆರಡು ಮಂದಿ ಸದಸ್ಯರು ಚರ್ಚೆಯಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಗೊಳಿಸಿದರು. ಸರಕಾರದ ಪರವಾಗಿ ಮಾತನಾಡಿದ ಸಚಿವರು ಪ್ರಜಾಪ್ರಭುತ್ವದ ದೃಷ್ಟಿಯಿಂದ ಪ್ರಧಾನಿ ಚುನಾಯಿತ ಸದಸ್ಯರಾಗಿರಬೇಕೆಂಬ ವಾದವನ್ನು ಒಪ್ಪಿಕೊಂಡು ಪರಂಪರೆಯನ್ನು ಎತ್ತಿಹಿಡಿಯಲು ಸರಕಾರ ಮತ್ತು ತಮ್ಮ ಪಕ್ಷ ಆಶ್ವಾಸನೆ ನೀಡುವುದೆಂದು ಪ್ರಕಟಿಸಿದರು. ಪ್ರಾಯಶಃ ಕಾಂಗ್ರೆಸ್ ೧೯೬೭ರಲ್ಲಿ

ಕೊಟ್ಟ ಆಶ್ವಾಸನೆ ಯನ್ನು ಇತರ ಎಲ್ಲವುಗಳಂತೆಯೇ ಮರೆಯಿತೆಂದು ಕಾಣುತ್ತದೆ. ಈ ಚರ್ಚೆಯ ನಂತರ ಶ್ರೀಮತಿ ಇಂದಿರಾ ಗಾಂಧಿ ೧೯೬೭ರಲ್ಲಿ ಲೋಕಸಭೆಗೆ ಆಯ್ಕೆಯಾದರು.

ಸಂವಿಧಾನದಲ್ಲಿ ದೇಶದ ಪ್ರಧಾನಿಯಾಗಿ ಅಥವಾ ರಾಜ್ಯದ ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಳ್ಳುವವರು ಅಧಿಕಾರ ವಹಿಸಿಕೊಂಡ ಆರು ತಿಂಗಳೊಳಗಾಗಿ ಮೇಲ್ಮನೆ ಅಥವಾ ಕೆಳಮನೆ ಸದಸ್ಯರಾಗಿ ಆಯ್ಕೆಯಾಗಬೇಕು ಎಂದಿದೆ. ಹಾಗಾಗಿ ಪಿ. ವಿ. ನರಸಿಂಹರಾವ್ ಪ್ರಧಾನಿಯಾಗಿ ನೇಮಕ ಗೊಂಡಮೇಲೆ ಅವರು ಲೋಕಸಭೆಯ ಸದಸ್ಯರಾಗಿ ಆಯ್ಕೆಗೊಂಡರು. ಆದರೆ ಮನಮೋಹನ ಸಿಂಗ್ ಮಾತ್ರ ರಾಜ್ಯಸಭೆಯ ಸದಸ್ಯರಾಗಿಯೇ ಪ್ರಧಾನಿ ಕುರ್ಚಿಗೆ ಅಂಟಿಕೊಂಡಿದ್ದಾರೆ. ಕಾಂಗ್ರೆಸ್ಸಿಗೆ ಇವರನ್ನು ಲೋಕಸಭೆಗೆ ಆಯ್ಕೆಮಾಡುವ ತಾಖತ್ತಿರಲಿಲ್ಲ ಎನ್ನುವುದು ಎದ್ದುಕಾಣುತ್ತದೆ. ಯಾವತ್ತೂ ತಾನು ನೀಡುವ ಆಶ್ವಾಸನೆಗಳನ್ನು ಗಾಳಿಗೆ ತೂರುವುದು ಕಾಂಗ್ರೆಸ್ಸಿನ ಉನ್ನತ ಪರಂಪರೆ ತಾನೆ.

* * *

ಕರ್ನಾಟಕ ರಾಜ್ಯದಲ್ಲಿ ಈಗ ರಾಜಕೀಯ ಪಕ್ಷಗಳ ದೃಷ್ಟಿಯೆಲ್ಲ ಮುಂಬರುವ ಲೋಕಸಭಾ ಚುನಾವಣೆಗಳ ಮೇಲೆ. ಶಾಸನಸಭಾ ಚುನಾವಣೆ ಗಳಲ್ಲಿ ಮಣ್ಣುಮುಕ್ಕಿದ ಭಾಜಪ ಈಗ ಲೋಕಸಭಾ ಚುನಾವಣೆಯಲ್ಲಿ ಚೇತರಿಸಿಕೊಳ್ಳಲು ನೋಡುತ್ತಿದೆ. ಸೋಲಿನ ಕುರಿತು ಆತ್ಮಾವಲೋಕನ ಮಾಡಿಕೊಳ್ಳಲು ಹೊರಟಿರುವ ಈ ಪಕ್ಷ, ತನ್ನ ಅಧಿಕಾರಾವಧಿಯಲ್ಲಿ ಕೆಲವು ಲೋಪಗಳಾಗಿರುವುದನ್ನು ಒಪ್ಪಿಕೊಂಡಿದೆ. ಮೂರು ಮುಖ್ಯಮಂತ್ರಿಗಳನ್ನು ನೀಡಿ ಮುಗ್ಗರಿಸಿದ ಭ್ರಷ್ಟತೆ ಇನ್ನೊಂದು ಹೆಸರಾಗಿರುವ ಭಾಜಪ ಈಗ ಪಕ್ಷದಿಂದ ಹೊರಗೆ ಹೋಗಿರುವ ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪನವರನ್ನು ಮತ್ತೆ ಪಕ್ಷದ ಒಳಗೆಬಿಟ್ಟುಕೊಳ್ಳಲು ನೋಡುತ್ತಿದೆ. ಮೀನಮೇಷ ಎಣಿಸಿ ತಾನೇ ಕಟ್ಟಿ ಬೆಳೆಸಿದ ಪಕ್ಷವನ್ನು ಬಿಡಲಾಗದೆ ಬಿಟ್ಟು ಬೇರೆ ಪಕ್ಷವನ್ನು ರಚಿಸಿಕೊಂಡಿರುವ ಯಡಿಯೂರಪ್ಪ ನಿಜಕ್ಕೂ ಸೋತು ಸೋರೆಕಾಯಿ ಯಾಗಿದ್ದಾರೆ. ಚುನಾವಣೆಯಲ್ಲಿ ಬಲಪ್ರದರ್ಶನ ಮಾಡಲು ಹೋಗಿ ಮೂಗು ಮುರಿದುಕೊಂಡಿದ್ದಾರೆ. ಅವರನ್ನು ನಂಬಿಕೊಂಡವರು ಈಗ ಅಂಬೋ ಅನ್ನುತ್ತಿದ್ದಾರೆ. ಭಾಜಪವನ್ನು ರಾಜ್ಯದಲ್ಲಿ ಮೂರನೆ ಸ್ಥಾನಕ್ಕೆ ಇಳಿಸಿದ ಕೀರ್ತಿ ಅವರಿಗೆ ಸಲ್ಲಬೇಕು. ಈಗ ಈತ ಮತ್ತೆ ಡೋಲಾಯಮಾನದಲ್ಲಿ ಮುಳುಗಿದ್ದಾರೆ. ಮತ್ತೆ ಭಾಜಪಗೆ ಮರಳುವುದರ ಬಗ್ಗೆ ಅಡ್ಡಗೋಡೆಯ ಮೇಲೆ ಇಟ್ಟಹಾಗೆ ಮಾತನಾಡತೊಡಗಿದ್ದಾರೆ. ಭಾಜಪ ಬಿಡುವಾಗ ತೊಳಲಾಡುತ್ತಿದ್ದ ಹಾಗೆ ಈಗಲೂ ಅವರ ಸ್ಥಿತಿ ಇಚ್ಚಿತ್ತವಾಗಿದೆ. ಮಾಮೂಲಿ ನಂತೆ ಸದ್ಯದಲ್ಲೇ ಮುಂದಿನ ಹೆಜ್ಜೆ ಏನೆಂಬುದನ್ನು ನಿರ್ಧರಿಸುವುದಾಗಿ ಹೇಳಿದ್ದಾರೆ. ಎರಡೂ ಕಡೆ ತೆರೆಮರೆಯಲ್ಲಿ ಪ್ರಯತ್ನ ಗಳೇನೋ ನಡೆಯುತ್ತಿದೆ. ಯಡಿಯೂರಪ್ಪ ತನ್ನ ಬಳಗದೊಂದಿಗೆ ಭಾಜಪಗೆ ಹೋದರೆ ಭಾಜಪ ವಿರೋಧ ಪಕ್ಷದ ಸ್ಥಾನದಲ್ಲಿ ಮೆರೆಯಬಹುದು. ಲೋಕಸಭೆ ಚುನಾವಣೆಗಳಲ್ಲಿ ಅದರ ಬೇಳೆ ಬೇಯುವುದು ಕಷ್ಟ. ಮುಖ್ಯಮಂತ್ರಿ ಸಿದ್ದರಾಮಯ್ಯ ನವರ ಭವಿಷ್ಯವೂ ಮುಂದಿನ ಚುನಾವಣೆಗಳ ಮೇಲೆ ಅವಲಂಬಿತ.

* * *

ಭಾರತೀಯ ಜನತಾ ಪಕ್ಷವು ಅಧಿಕಾರದಲ್ಲಿದ್ದಾಗ ರಾಜ್ಯದ ಮತ್ತು ಜನರ ಆಸ್ತಿಯನ್ನು ನೇರವಾಗಿ ಲೂಟಿ ಮಾಡಿದ ಪ್ರಸಂಗಗಳು ನೂರಾರು. ಬಳ್ಳಾರಿ ರೆಡ್ಡಿ ದಂಡು, ರಾಮಚಂದ್ರಾಪುರ ಮುಂತಾದ ಮಠಗಳು, ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನ ಸಂಸ್ಥೆ, ಇವೆಲ್ಲಾ ಕೋಟಿಗಟ್ಟಲೆ ಹಣ ದೋಚಿಕೊಂಡದ್ದು ಎಲ್ಲರಿಗೂ ತಿಳಿದಿದೆ. ಅಂತೆಯೇ ಯಡಿಯೂರಪ್ಪ ಮುಂತಾದ "ಗಣ್ಯರು" ಎಂತೆಂತಹ ಹೀನಾಯದ ಕೃತ್ಯಗಳಲ್ಲಿ ತೊಡಗಿ ಬೊಕ್ಕಸ ತುಂಬಿಕೊಂಡರು ಎಂಬುದೂ ಗೊತ್ತಿದೆ. ಮಂಗಳೂರು ಮುಂತಾದ ಕಡೆ "ಭಾಜಪ ಸೇನೆಗಳ ವೀರರು" ಎಷ್ಟು ಭಯಂಕರ ಹಲ್ಲೆಗಳನ್ನು ವಿದ್ಯಾರ್ಥಿನಿಯರ, ಪತ್ರಕರ್ತರ, ಮತ್ತು ಅಲ್ಪಸಂಖ್ಯಾತರ ಮೇಲೆ ಜರುಗಿಸಿದರೆಂಬುದು ತಿಳಿದ ವಿಷಯವೇ. ಇವೆಲ್ಲಕ್ಕೂ ಪರಿಹಾರವಾಗಿ ಸಿದ್ದರಾಮಯ್ಯನವರ ಸರ್ಕಾರದ ಪ್ರತಿಕ್ರಿಯೆ ಮತ್ತು ಕಾರ್ಯಕ್ರಮ ಏನೆಂಬುದು ಈವರೆಗೆ ಪ್ರಕಟ ವಾಗಿಲ್ಲ. ಯಡಿಯೂರಪ್ಪ–ಸದಾನಂದಗೌಡ–ಜಗದೀಶ ಶೆಟ್ಟರ್ ಮುಖ್ಯಮಂತ್ರಿಗಳಾಗಿದ್ದಾಗ ದೈಹಿಕ ಹಲ್ಲೆಗಳನ್ನು ಎಗ್ಗಿಲ್ಲದೆ ನಡೆಸುತ್ತಿದ್ದ ಇದೇ "ಭಾಜಪ ವೀರರು" ಈಗ ಬೇರೊಂದು ತಂತ್ರ ಅನುಸರಿಸಲು ಆರಂಭಿಸಿದ್ದಾರೆ. ಇದು ಭಾಜಪ ಅಧಿಕಾರಕ್ಕೆ ಬರುವ ಮುಂಚಿನ ಕ್ರಿಯಾವಿಧಾನವೂ ಆಗಿತ್ತು. ಅವುಗಳಲ್ಲಿ ಒಂದು ವಿಧಾನ 'ಹೊಸತು'ಗೆ ನೇರ ಅನುಭವಕ್ಕೆ ಹಿಂದೆಯೂ ಬಂದಿತ್ತು, ಈಗಲೂ ಆರಂಭವಾಗಿದೆ. ಅದೆಂದರೆ ಹೆಸರು–ಕುಲ–ಗೋತ್ರ ಯಾವುದನ್ನೂ ತಿಳಿಸದೆ "ಈಶೇಂದ್ರ" ಎಂದೋ, "ಗಾರ್ದಭೇಂದ್ರ" ಎಂದೋ ಕರೆದುಕೊಂಡು ದುರ್ನಾತವಿರುವ ಭಾಷೆಯಲ್ಲಿ ಶುದ್ಧ ಅತಾರ್ಕಿಕ ಮಾತುಗಳನ್ನು ಬರೆಯುವುದು, "ಹುಷಾರಾಗಿರಿ, ಇಲ್ಲದಿದ್ದರೆ ಹೀಗೆ ಮಾಡುತ್ತೇನೆ, ಹಾಗೆ ಮಾಡುತ್ತೇನೆ, ಬುದ್ಧಿ ಕಲಿಸುತ್ತೇನೆ" ಎಂದು ಪುಟಗಟ್ಟಲೆ ವಿಷ ಕಾರುವುದು ಮತ್ತು ಬೆದರಿಕೆ ಹಾಕುವುದು. ಅದರಲ್ಲಿ ಚರ್ಚೆ ಮತ್ತು ವಿಮರ್ಶೆ ಇರುವುದಿಲ್ಲ; ಇರುವುದೆಲ್ಲಾ ಬೈಗುಳ ಮತ್ತು ನಂಜು. 'ಹೊಸತು' ಜೂನ್ ೨೦೧೩ರ ಸಂಚಿಕೆ ಪ್ರಕಟವಾದ ನಂತರ ಯಾರೋ ಒಬ್ಬ ಧೀರ "ಈಶೇಂದ್ರ" ಎಂಬ ಸುಳ್ಳು ಹೆಸರಲ್ಲಿ, ಯಾವ ವಿಳಾಸವನ್ನೂ ಕೊಡದೆ, ಸುದೀರ್ಘ ಪತ್ರವೊಂದನ್ನು ಬರೆದಿದ್ದಾನೆ. ಅದರ ಸಾರಾಂಶ : "ಭಾರತೀಯ ಜನತಾ ಪಕ್ಷ ಮತ್ತು ಅದರ ಧೋರಣೆಗಳನ್ನು ಸರ್ವಥಾ ಟೀಕಿಸಕೂಡದು ಮತ್ತು ವಿಮರ್ಶಿಸಕೂಡದು" ಎಂದು. ಭಾಜಪ ಆಡಳಿತದ ಯಾವ "ಶ್ರೇಷ್ಠ ಕೃತ್ಯ"ವನ್ನು ಶ್ಲಾಘಿಸಬೇಕೆಂದು ಈ ಮಹನೀಯರು ತಿಳಿಸಿಲ್ಲ. ಅನಾಮಧೇಯ ಪತ್ರವನ್ನು ಪ್ರಕಟಿಸುವ ಅಗತ್ಯವಿಲ್ಲ ಮತ್ತು ಅದು ಪತ್ರಿಕೆಯ ನೀತಿಗೆ ವಿರುದ್ಧವಾದದ್ದು ಸಹ. ಅದಕ್ಕೆ ಪ್ರತಿಕ್ರಿಯಿಸುವುದು ಕೆಸರಿನ ಮೇಲೆ ಕಲ್ಲುಗಳನ್ನು ಎಸೆದಂತೆ, ಅಷ್ಟೆ. ಆದರೆ 'ಹೊಸತು' ಓದುಗರಿಗೆ ಮತ್ತು ಆಡಳಿತಾರೂಢ ಸರ್ಕಾರಕ್ಕೆ, ಕತ್ತಲಿನಲ್ಲಿ ಕತ್ತರಿ ಹಾಕುವ ಜನ ಹೇಗಿದ್ದಾರೆ ಮತ್ತು ಎಲ್ಲಿದ್ದಾರೆ, ಅವರ ಮನೋಭಾವ ಎಂಥದು, ಎಂದು ತಿಳಿಯುವುದು ಒಳ್ಳೆಯದು. ಆ ದೃಷ್ಟಿಯಿಂದ "ಸನ್ಮಾನ್ಯ" ಮತಿಭ್ರಷ್ಟ ಈಶೇಂದ್ರನ ಪತ್ರದ ಕೆಲವು ಸಾಲುಗಳನ್ನು ಇಲ್ಲಿ ಅಚ್ಚುಮಾಡಲಾಗಿದೆ. ಇದರ ಬಗ್ಗೆ ಪತ್ರಿಕೆಯಲ್ಲಿ ಪತ್ರವ್ಯವಹಾರಕ್ಕೆ ಅವಕಾಶ ಬೇಡ.

ಇಲ್ಲಿದೆ ನೋಡಿ "ಈಶೇಂದ್ರ ಉವಾಚ" :

(ಕಾಗುಣಿತ ಇತ್ಯಾದಿ ಮೂಲಪತ್ರದಲ್ಲಿರುವಂತೆ): ಗಾಂದಿಜಿ ಮತ್ತು ಕಾಂಗ್ರಸ್ ಪಕ್ಷವು ಬ್ರಿಟಿಶರೊಂದಿಗೆ ಹೊಂದಾಣಿಕೆ ಮಾಡಿ "ನಾವು ಹೊಡಿಯುವ ನಟನೆ ಮಾಡುತ್ತೇವೆ. ನೀವು ಕೂಗುವ ನಟನೆ ಮಾಡಿ. ನಿಮ್ಮ ಮೇಲೆ ವಿಶ್ವಾಸ ಇಟ್ಟ ಪ್ರತಿಯೊಬ್ಬ ಭಾರತೀಯನನ್ನು ವಂಚಿಸಿ ಸುಳ್ಳು ಹೋರಾಟದ ಆಟ ಆಡಿದರೆ ನೀವು ಭದ್ರವಾಗಿರುತ್ತೀರಿ ಎಂತ ಅವರನ್ನು ನಂಬಿಸಿ ಭಾರತ ಮಾತೆಗೇನೆ ದ್ರೋಹ ಎಸಗಿದರು....

ನಿಮ್ಮಂತಹ ಕೆಲವರು ಕರ್ನಾಟಕದಲ್ಲಿ ಸ್ಸಸ್ಕೃತಿ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಅಡ್ಡಿಮಾಡು ತಿದ್ದಾರೆ. ಮೊದಲು ನೀವು ನಿಮ್ಮ ಧರ್ಮವನ್ನು ಅರಿಯಿರಿ – ಅಂದರೆ ನಿಮ್ಮನ್ನು ಹುಟ್ಟಿಸಿದವರು ಯಾರು ಎಂಬುದನ್ನು....

ಹಿಂದೂ ಮತ್ತು ಬುದ್ಧ ಧರ್ಮದ ಎಲ್ಲಾ ಕೃತಿಗಳು, ಗ್ರಂಥಗಳು ಸಂಸ್ಕೃತದಲಿರುವುದರಿಂದ ಇದನ್ನು ಪ್ರತಿಯೊಬ್ಬರೂ ತಿಳಿಯುವಂತಾಗಲು ಸಂಸ್ಕೃತ । ಅಧ್ಯಾತ್ಮಿಕ ವಿಶ್ವವಿಧ್ಯಾಲಯಗಳು ಇಡೀ ದೇಶದಲ್ಲಿಯೇ ಅಗತ್ಯವಾಗಿದೆ...

....ಭಾರತದ ಸಂವಿಧಾನವನ್ನು ಮೊತ್ತ ಮೊದಲು ಬರೆದವರು ಡಾ. ರಾಜಗೋಪಾಲಾಚಾರಿಯವರು. ನೆಹರೂವಿನೊಂದಿಗೆ ಸರಿ ಹೊಂದದರಿಂದ ಸಂವಿಧಾನದ ಕರಡು ಪ್ರತಿಯನ್ನು ನೆಹರೂವಿನ ಮುಖಕ್ಕೆ ಎಸೆದು ಕಾಂಗ್ರೆಸ್ ಪಕ್ಷವನ್ನು ತ್ಯಜಿಸಿ ತಮ್ಮ ಸ್ವಂತ ಪಕ್ಷ ಸ್ವತಂತ್ರ ಪಕ್ಷವನ್ನು ಕಟ್ಟಿದರು. ನೆಹರೂ ರವರು ಆ ಪ್ರತಿಯನ್ನು ಡಾ. ಅಂಬೇಡ್ಕರ್‌ರವರ ಕೈಗೆ ಕೊಟ್ಟರು. ಇವರು ಕೆಲವು ಅನಾವಶ್ಯಕ, ಸಮಯ ಹರಣ ಮಾಡುವ, ನಿಷ್ಪ್ರಯೋಜಕ ಅಂಶಗಳನ್ನು ಸೇರಿಸಿದರು.

....ಇನ್ನು ಮುಂದೆ ಸತ್ಯ ವಿಶಯಗಳನ್ನು ಅರಿದು ಬರೆಯುವಿ ಎಂತ ನಂಬುತ್ತೇನೆ. ಹಿಂದು ಧರ್ಮಕ್ಕೆ ಸಂಬಂಧಪಟ್ಟ ಯಾವ ವಿಶಯಗಳನ್ನು ಸಂಪೂರ್ಣ ವಿಶಯಗಳನ್ನು ತಿಳಿಯದೆ ಬರೇ ಮೂದಲಿಸುವ ಉದ್ದೇಶದಿಂದ ಬರೆಯಬೇಡ. ನಿನ್ನ ಪತ್ರಿಕೆಯಲ್ಲಿ ಮೂಡಿಬರುವ ಕೆಲವು ಲೇಖನಗಳನ್ನು ಯಾರಾ ಅಧರ್ಮಿಯರು ಹಿಂದುಗಳ ಹೆಸರಿನಲ್ಲಿ ಪ್ರಕಟ ಮಾಡುತ್ತಾರೆ.

...ಹೀಗೆಯೇ ನಿನ್ನ ಪತ್ರಿಕೆಯು ಮುಂದುವರಿದರೆ I HAVE TO USE my Freedom to eliminate SUCH SOCiAL EVILS. I Beleive THIS is ENOUGH FOR A WISe mAN.

Advisingly Warm you

ISHENDRA

●




**ಜೂನ್ ತಿಂಗಳ ಸಂಚಿಕೆ**

**ಕೃಷಿ ವಿಜ್ಞಾನ**

ಶ್ರೀ. ಎಲ್. ಸಿ. ನಾಗರಾಜ್ (ಹೊಸತು, ಜನವರಿ ೨೦೧೩ರ ಸಂಚಿಕೆ) ಮತ್ತು ಶ್ರೀ. ಪ್ರದೀಪ್ ಬೆಳಗಲ್ ಹಾಗೂ ಶ್ರೀ. ಕೆ. ಎಂ. ಗುರುಸಿದ್ಧಮೂರ್ತಿ (ಹೊಸತು, ಏಪ್ರಿಲ್ ೨೦೧೩ರ ಸಂಚಿಕೆ) ಕೃಷಿ ವಿಜ್ಞಾನವನ್ನು ಕುರಿತಂತೆ ವಿಭಿನ್ನವೆಂದು ತೋರುವ ವಾದಗಳನ್ನು ಮಂಡಿಸಿದ್ದಾರೆ. ಆದರೆ ಅದು ತೋರಿಕೆ ಮಾತ್ರ, ಏಕೆಂದರೆ ಎರಡು ಲೇಖನಗಳಲ್ಲೂ ಭಾರತದ ಕೃಷಿ ಸನ್ನಿವೇಶವನ್ನು ಕುರಿತಂತೆ ಸಮಾನ ಆಶಯವಿದೆ. ಬಹುರಾಷ್ಟ್ರೀಯ ಕಂಪನಿಗಳ ಹಿಡಿತವು ಕೃಷಿ ಕ್ಷೇತ್ರದಲ್ಲಿ ಈಗಾಗಲೆ ಗಣನೀಯ ಪ್ರಮಾಣದಲ್ಲಿದೆ. ಅದು ರೈತರಿಗೆ, ಕೃಷಿಗೆ ಮತ್ತು ದೇಶಕ್ಕೆ ಹೇಗೆ ಮತ್ತು ಏಕೆ ಮಾರಕ ವೆಂಬುದನ್ನು ಎರಡು ಲೇಖನಗಳೂ ಪ್ರಸ್ತಾಪಿಸಿವೆ. ಸಾಂಪ್ರದಾಯಿಕ ಕೃಷಿ ಜ್ಞಾನವನ್ನು ತೊಡೆದುಹಾಕಿ ಆಧುನಿಕ ಕೃಷಿ ವಿಜ್ಞಾನಕ್ಕೆ ಮಾತ್ರವೇ ಕಟ್ಟು ಬೀಳಬೇಕೆಂಬುದನ್ನು ಎರಡು ಲೇಖನಗಳೂ ತಿರಸ್ಕರಿಸಿವೆ. ಇದು ಆರೋಗ್ಯಪೂರ್ಣ ನಿಲುವು. ಯಾವ ವಿಜ್ಞಾನವೂ ಅನುಭವಸಿದ್ಧವಾದ ಸಾಂಪ್ರದಾಯಿಕ ಜ್ಞಾನವನ್ನು ತಿರಸ್ಕರಿಸುವುದಿಲ್ಲ; ಅಂತೆಯೇ, ಕೃಷಿಜ್ಞಾನದ ನಿರಂತರ ಪರಿಷ್ಕರಣದಿಂದ ಕೃಷಿ ವಿಜ್ಞಾನವು ಗಟ್ಟಿಗೊಳ್ಳುತ್ತದೆ ಎಂಬುದನ್ನು ಸಾಂಪ್ರದಾಯಿಕ ಜ್ಞಾನವು ನಿರಾಕರಿಸುವುದಿಲ್ಲ. ಆದರೆ ಐತಿಹ್ಯಗಳು ಮತ್ತು ಕಲ್ಪಿತ ಪದ್ಧತಿಗಳು ಎರಡೂ ವಿಧಾನಗಳಲ್ಲಿ ಅಪ್ರಸ್ತುತ. ನಮ್ಮ ಇಂದಿನ ಕೃಷಿ ಪದ್ಧತಿಗಳು ಈ ಆಧಾರದಲ್ಲಿ ಮೂಡುವುದು ಸೂಕ್ತ. ಪ್ರತಿಯೊಂದಕ್ಕೂ 'ಸರ್ವಜ್ಞ'ರೆನ್ನಲಾದ ಪಾಶ್ಚಿಮಾತ್ಯ ಪಂಡಿತರ ಅಭಿಪ್ರಾಯಗಳನ್ನು ಸ್ವೀಕರಿಸಿ ಅಳವಡಿಸಿಕೊಳ್ಳುವುದು ಅನಗತ್ಯ. ಅದು ಅಪಾಯಕಾರಿ ಕೂಡ.

ಮಧುಗಿರಿ **_ಕೆ. ಬಿ. ಸಿದ್ದಲಿಂಗಯ್ಯ_**

**ಜಾತಿ ಆಧಾರದ ಮೀಸಲಾತಿ ಪ್ರಸ್ತುತತೆ**

ಜಾತಿ ಎಂಬುದು ದೇವರಿಂದ ಸೃಷ್ಟಿಸಲಾದ ಪದ್ಧತಿಯ ಬದಲಾಗಿ ಕಸಬು ಆಧಾರದ ಮೇಲೆ ಜಾತಿಯ ವರ್ಗಗಳು ಹುಟ್ಟಿಸಿ ಕುಲಕಸಬುಗಳಿಂದ ಅಂದಿನ ಸಮಾಜದಲ್ಲಿ ನೆಮ್ಮದಿಯ ಜೀವನ ನಡೆಸುತ್ತಿದ್ದರು. ಇಂದು ಕುಲಕಸಬುಗಳಿಂದ ಆದಾಯದ ಪ್ರಮಾಣದಲ್ಲಿ ಕುಸಿತದಿಂದ ಬದುಕಿನಲ್ಲಿ ಕಷ್ಟಗಳ ಸರಮಾಲೆ, ಶ್ರೇಣೀಕೃತವಾದ ಸಮಾಜದ ನಿರ್ಮಾಣ ದಿಂದ ಅಹಿತಕರ ಘಟನೆಗಳಾದ ದ್ವೇಷ, ಅಸೂಯೆ, ಹೊಡೆದಾಟ... ಮುಂತಾದವುಗಳ ಪರಿಣಾಮದಿಂದ ಸಮಾಜದ ಅಭಿವೃದ್ಧಿಯಲ್ಲಿ ಋಣಾತ್ಮಕ ಪರಿಸ್ಥಿತಿ ಎದುರಾ ಗುತ್ತಿದೆ. ಎಲ್ಲಿ ಸಮಾನತೆ ಇರುತ್ತದೆಯೋ ಅಲ್ಲಿ ಅಭಿವೃದ್ಧಿ ಮತ್ತು ಶಾಂತಿ ಇರುತ್ತದೆ. ಈ ಅಂಶಗಳನ್ನು ಗಮನದಲ್ಲಿರಿಸಿಕೊಂಡು ಚಿಂತನೆ ಮಾಡಿದರೆ "ಮೀಸಲಾತಿ" ಅವಶ್ಯಕತೆ ಕಂಡು ಬರುತ್ತಿದೆ. ಕಳೆದ ಹಲವು ದಶಕಗಳಿಂದ ಮೀಸಲಾತಿ ವ್ಯವಸ್ಥೆ ಇದ್ದರೂ ಅದರ ಪರಿಣಾಮದಿಂದ ಲಾದರೂ ಬಡ ಪರಿಶಿಷ್ಟ ಸಮಾಜದಲ್ಲಿ ಏಳಿಗೆಯಾಗಿ ಬದಲಾವಣೆಯಾಗಬೇಕಾಗಿತ್ತು.




ಆದರೆ ಬದಲಾವಣೆ ಮಾತ್ರ ಶೂನ್ಯ ಮಟ್ಟದಿಂದ ಸ್ವಲ್ಪ ದೂರದಲ್ಲಿದೆ. ಹೀಗಾಗಲು ಹಲವು ಕಾರಣಗಳಿವೆ. ಮೀಸಲಾತಿ ಪಡೆದವರು ಮತ್ತೆ ಮತ್ತೆ ಈ ಸೌಲಭ್ಯ ಪಡೆದು ಇತರರು ಇದರಿಂದ ವಂಚಿತರಾಗಿ ಮುಂದೆ ಬರಲು ಸಾಧ್ಯವಾಗುತ್ತಿಲ್ಲ. ಇದು ಒಂದು ಕಾರಣವಾದರೆ ಮುಂದುವರಿದ ಜನಾಂಗದವರು ಸುಳ್ಳು ದಾಖಲಾತಿ ಸೃಷ್ಟಿಸಿ ಮೀಸಲಾತಿ ಸೌಲಭ್ಯ ಪಡೆದುಕೊಳ್ಳುತ್ತಿರುವುದು ಮತ್ತೊಂದು ಕಾರಣ. ಮೀಸಲಾತಿ ವ್ಯವಸ್ಥೆ ವೈಜ್ಞಾನಿಕ ಆಧಾರದ ಮೇಲೆ ರೂಪಿಸದಿರುವುದು ಪ್ರಮುಖ ಕಾರಣಗಳಲ್ಲೊಂದು.

ಸಮಾಜದಲ್ಲಿ ಎಲ್ಲರೂ ಸುಖವಾಗಿ ಇರಬೇಕಾದರೆ ಎಲ್ಲ ಕ್ಷೇತ್ರಗಳು ಅಲ್ಪಮಟ್ಟಿಗಾದರೂ ಸಮಾನತೆ ಇರಬೇಕು. ಅಲ್ಲಿಯವರೆಗೆ ವೈಜ್ಞಾನಿಕ ಅಂಶಗಳ ಆಧಾರದ ಮೇಲೆ ಪ.ಜಾ./ಪ.ಪ. ಮತ್ತು ಹಿಂದುಳಿದವರಿಗೆ ಮೀಸಲಾತಿ ಸೌಲಭ್ಯ ಒದಗಿಸಬೇಕು.

ತುಮಕೂರು **ವಾಮನ ರಾವ್**

ಟೆರ್ರಿ ಈಗಲ್ಟನ್ನರ "ಮಾರ್ಕ್ಸ್ ಹೇಳಿದ್ದು ಏಕೆ ಸರಿ" ಎನ್ನುವ ಪುಸ್ತಕದ ಅನುವಾದ ಸಂಗ್ರಹವನ್ನು (ಡಾ॥ ಜಿ. ರಾಮಕೃಷ್ಣ) ೧೨ ಕಂತುಗಳಲ್ಲಿ ಹೊಸತು ಪ್ರಕಟಿಸಿದ್ದಕ್ಕಾಗಿ ಅನಂತ ಧನ್ಯವಾದಗಳು. ಡಾ॥ ಜಿ. ರಾಮಕೃಷ್ಣ ಅದನ್ನು ತುಂಬ ಅರ್ಥಪೂರ್ಣವಾಗಿ ಅನುವಾದಿಸಿದ್ದಾರೆ. ಅವರಿಗೆ ವಿಶೇಷ ಧನ್ಯವಾದಗಳು.

ಇದನ್ನು 'ನವಕರ್ನಾಟಕ' ಒಂದು ಕಿರು ಪುಸ್ತಕ ರೂಪದಲ್ಲಿ ಪ್ರಕಟಿಸಿದರೆ ತುಂಬ ಅನುಕೂಲ ವಾಗುತ್ತದೆ. ಪ್ರಸಕ್ತ ಸಂದರ್ಭಕ್ಕೆ ಮತ್ತು ಮಾರ್ಕ್ಸ್‌ವಾದಿ ಚಿಂತಕರಿಗೆ ಅದು ಬಹಳ ಉಪಯುಕ್ತವೆಂದು ನನ್ನ ಭಾವನೆ.

ಧಾರವಾಡ **ರಾಘವೇಂದ್ರ ಆಯಿ**

ಆರಂಭದ ಸರಕಾರದ ಮುಂದಿರುವ ಸವಾಲು ಗಳಿಗೆ ವಿಸ್ತಾರದ ವಿವರಣೆಯ ಲೇಖನದ ರೂಪದ ವಿಶದೀಕರಣ ನೀಡಿದವರು ಡಾ॥ ಟಿ. ಆರ್. ಚಂದ್ರಶೇಖರರವರು ಸಂಪಾದಕರಿಂದ ಪ್ರಸ್ತಾವನೆ ಯಾಗಿ ಬಳುವಳಿ ಬಂದ ಮುಖ್ಯಾಂಶಗಳನ್ನು ವಿಸ್ತರಿಸಿ ಪರಿಹರಿಸಿಕೊಳ್ಳುವ ದಾರಿಯನ್ನು ಅಂಕಿ–ಅಂಶಗಳಿಂದ ಸ್ಪಷ್ಟ ನಿಲುವಿನತ್ತ ನಿಲ್ಲಿಸಿ ಬಿಡುವಷ್ಟರಮಟ್ಟಿಗೆ ಬರಹ ಸಜೀವಗೊಂಡಿದೆ. ಹಾಗೆ ನೋಡಿದರೆ ಮುಖಪುಟ ಹಾಗೂ ಅದರರ್ಥದ ಅರಿವಿನ ಪೂರ್ತಿ ತಿಳುವಳಿಕಾ ವಿಧಾನವೇ ಈ ತಿಂಗಳ ಪ್ರಧಾನ ಭೂಮಿಕೆ ಎಂದರೂ ತಪ್ಪಲ್ಲ ಎನ್ನಿಸಿಬಿಡುತ್ತದೆ.

ಪದ್ಯಗದ್ಯಗಳೆರಡೂ ಹೌದೆಂದು ಒಪ್ಪಿಸಿಕೊಂಡ ರೀತಿಯಲ್ಲಿ ಒಪ್ಪ ಓರಣವಾಗಿ ಮೂಡಿಬಂದ ರಾಮ ಮತ್ತು ರೇಪ್ ಎಂಬ ಗದ್ಯ ಕಾವ್ಯ ಸರಾಗವಾಗಿ ಓದಿಸಿಕೊಳ್ಳಲೂ ಆಗದೆ ರಾಮರಾಮಾ ಎಂಬ ಉದ್ಗಾರವನ್ನೂ ಹೊರಡಿಸಿ ಅರ್ಥವತ್ತಾಗಿ ಇಂದಿನ ಸ್ಥಿತಿಗತಿಗಳಿಗೆ ಕನ್ನಡಿ ಹಿಡಿದು 'ಕಾಣಿಸಿ' ಕೊಟ್ಟ ಡಾ॥ ಸರಜೂಕಾಟ್ಕರ್ ಅವರಿಗೆ ಅಭಿನಂದನೆ ಸಲ್ಲುತ್ತವೆ.

'ಇವತ್ತಿನ ಶಿಕ್ಷಣಕ್ಕೆ ಅಗತ್ಯ ಒಂದು ಕಾಯಕಲ್ಪ' ಎಂಬ ಮಹತ್ವದ ಬರಹದ ಮೂಲಕ ಸ್ವರ ಏರಿಸಿದವರು ಉಜಿರೆಯ ಕೆ. ಟಿ. ಗಟ್ಟಿಯವರು. ಯಾವುದು ಇಂದು ಬದುಕಿನ ಪ್ರಾಮುಖ್ಯತೆಗಳಲ್ಲಿ ಅತಿ ಮುಖ್ಯವೆನಿಸಲ್ಪಡುತ್ತಿದೆಯೋ ಅದೇ ಜೀವನ ಶಿಕ್ಷಣದ ಕುರಿತಾಗಿ ಸ್ವತಃ ಶಿಕ್ಷಕರೂ ಶಿಕ್ಷಣ ನೀಡುವ ಅಧ್ಯಾಪಕರುಗಳಿಗೆ ಮಾರ್ಗದರ್ಶಕರೂ ಆದ ಪ್ರೊ॥ ಕೆ. ಟಿ. ಗಟ್ಟಿಯವರಿಗಿಂತ ಹಿರಿಯವರು ಅತಿ ಅಪರೂಪಿಗಳು ಎಂದರೆ ಸರಿ ಹೊಂದಬಲ್ಲುದು. ಅಭಿನಂದನೆಗಳು.

ಕಾಸರಗೋಡು **_ಕೇರಿಕ್ಕಾಡು ವನಮಾಲ_**
**_ಕೇಶವ ಭಟ್ಟ_**

## ಅನ್ನ ತಿನ್ನುವವರೆಲ್ಲರೂ ಪ್ರತಿಭಟಿಸಿ : ದೇವನೂರು

ಇತ್ತೀಚೆಗೆ ಶಿವಮೊಗ್ಗದ ಡಾ॥ ಬಿ. ಆರ್. ಅಂಬೇಡ್ಕರ್ ಭವನದಲ್ಲಿ ರೈತಸಂಘ, ಸರ್ವೋದಯ ಕರ್ನಾಟಕ ಪಕ್ಷದ ಸಮಾರಂಭದಲ್ಲಿ ಖ್ಯಾತ ಚಿಂತಕ, ಬರಹಗಾರ ದೇವನೂರ ಮಹಾದೇವ ಆಡಿದ ಮಾತುಗಳು.

ನಾನು ನಿಮಗೆ ಒಂದು ಕತೆ ಹೇಳ್ತೀನಿ. ಅದು ನಿಮಗೂ ಗೊತ್ತಿರುವ ಕತೆ. ಒಂದೂರಲ್ಲಿ ಒಬ್ಬ ಒಂದು ಕೋಳಿ ಸಾಕಿದ್ದನಂತೆ. ಆ ಕೋಳಿ ವಿಶೇಷ ಏನು ಅಂದರೆ ದಿನಾಲು ಅದು ಚಿನ್ನದ ಮೊಟ್ಟೆ ಇಡ್ತಿತ್ತಂತೆ. ಆಸೆ ಮಿತಿ ಮೀರಿದ ಮಾಲೀಕ ದಿನಾಲು ಒಂದೊಂದೆ ಮೊಟ್ಟೆಗಾಗಿ ಕಾಯೊ ಬದಲು ಒಂದೇ ಸಲ ಎಲ್ಲಾ ಚಿನ್ನದ ಮೊಟ್ಟೆಗಳನ್ನೂ ತೆಗೊಂಡರೆ ಹೆಂಗೆ ಅಂತ ಯೋಚನೆ ಮಾಡಿ, ಕೋಳಿನ ಕೊಯ್ದನಂತೆ. ಕೊಯ್ದ ಮೇಲೆ ನೋಡಿದರೆ ಗೊತ್ತಾಯ್ತು, ಮೊಟ್ಟೆಯೂ ಇಲ್ಲ, ಕೋಳಿಯೂ ಇಲ್ಲ ಅಂತ. ಇದನ್ನ ಪುರಾಣದ ಕತೆ ಅನ್ನಬೇಕಿಲ್ಲ, ಜಾನಪದ ಕತೆ ಅಂತಲೂ ಅನ್ನಬೇಕಿಲ್ಲ. ಇದು ಈ ಹೊತ್ತಿನ ವಾಸ್ತವ. ನಮ್ಮ ಮುಂದೆನೆ ನಡೆತಿರೊ ಸತ್ಯ. ಭೂ ಬ್ಯಾಂಕ್ ಹೆಸರಲ್ಲಿ ಇವತ್ತು ಕೆಐಎಡಿಬಿ ರಾಜ್ಯದಲ್ಲಿ ಬಡವರ, ಅನ್ನದಾತರ ಭೂಮಿಯನ್ನ ಕಿತ್ತುಕೊಳ್ಳಲಾಗ್ತಿದೆ. ಆ ಮೂಲಕ ಚಿನ್ನದ ಮೊಟ್ಟೆ ಇಡುವಂತ ಕೋಳಿಯ ಕತ್ತು ಕತ್ತರಿಸೊ ಕೆಲಸ ನಡೀತಿದೆ. ಸ್ವಾತಂತ್ರ್ಯ ಬಂದ ಮೇಲೆ ಕರ್ನಾಟಕದಲ್ಲಿ ಕೈಗಾರಿಕೆಗಳ ಹೆಸರಲ್ಲಿ ಭೂಮಿ ಸ್ವಾಧೀನ ನಡೀತಿದೆ. ಕಳೆದ ಎರಡು ವರ್ಷಗಳಲ್ಲಿ ಒಂದು ಲಕ್ಷ ಎಕರೆಗಳಿಗಿಂತಲೂ ಹೆಚ್ಚು ಭೂಮಿಯನ್ನು ವಶಪಡಿಸಿಕೊಳ್ಳಲಾಗಿದೆ.

ಮತ್ತೊಂದು ಕಡೆ ಏನಾಗ್ತಿದೆ ನೋಡಿ. ಭೂ ಬ್ಯಾಂಕ್‌ನೋರು ತಮ್ಮ ಭೂಮಿಯನ್ನು ಸ್ವಾಧೀನ ಮಾಡ್ಕೊಳ್ಳೋದು ಗ್ಯಾರಂಟಿ ಅನ್ನಿಸಿದ ಕೂಡಲೆ ರೈತರು ಎಕರೆಗೆ ಐದಾರು ಲಕ್ಷ ರೂಪಾಯಿಗಳಂತೆ ಜೆಸಿಬಿಗಳ ಮೂಲಕ ಮಣ್ಣು ಬಗೆದು ಮಾರಿಕೊಳ್ಳತೊಡಗಿದ್ದಾರೆ. ಎಂಥಾ ಸ್ಥಿತಿ ಬಂದಿದೆ ನೋಡಿ. ಹಿಂದೆ ಬರಗಾಲ ಬಂದಾಗ ಜನ ತಾವು ಹೆತ್ತ ಮಕ್ಕಳನ್ನೆ ಮಾರಿ ಭತ್ತ ಕೊಂಡುಕೊಳ್ತಿದ್ದರು ಅನ್ನೊ ಮಾತು ನೆನಪಾಗ್ತದೆ. ಹೆತ್ತ ಮಕ್ಕಳನ್ನು ಮಾರಿಕೊಳ್ಳೋದಕ್ಕೂ ಭೂಮಿಯ ಮಣ್ಣು ಬಗೆದು ಮಾರೋದಕ್ಕೂ ಏನು ವ್ಯತ್ಯಾಸ ಇದೆ ಹೇಳಿ ? ಆದ್ದರಿಂದ ಸರ್ಕಾರ ಭೂಮಿಯನ್ನು ವಶಪಡಿಸಿಕೊಳ್ಳಬಾರದು. ಯಾಕೆ ಅಂದರೆ ಇದುವರೆಗೆ ಹಾಗೆ ವಶಪಡಿಸಿಕೊಂಡ ಭೂಮಿಯನ್ನು ಸರ್ಕಾರ ಬಂಡವಾಳ ಶಾಹಿಗಳಿಗೆ ಲೀಸ್‌ಗೆ ಕೊಡ್ತಾ ಬಂದಿದೆ. ಏಕ್ ದಂ ನೂರು ವರ್ಷ ಲೀಸ್. ಆದರೆ ಇತ್ತೀಚೆಗೆ ಒಂದು ತಿದ್ದುಪಡಿ ತಂದರು. ಅದರ ಪ್ರಕಾರ ಲೀಸ್‌ಗೆ ಪಡೆದ ಭೂಮಿ ಈಗ ಕ್ರಯ ಆಗ್ತಾ ಇದೆ. ನೋಡಿ, ತಮಿಳುನಾಡಿನಲ್ಲಿ ಒಂದು ಎಕರೆ ಮಾತ್ರ ಗುಡಿ ಕೈಗಾರಿಕೆಗೆ ಕ್ರಯ ಮಾಡಿಕೊಡ್ತಾ ಇದ್ದಾರೆ. ಇನ್ನುಳಿದಂತೆ ಎಷ್ಟು ಎಕರೆ ಬೇಕಾದ್ರೂ ಲೀಸ್‌ಗೆ ಮಾತ್ರ. ಮಹಾರಾಷ್ಟ್ರದಲ್ಲಿ ಭೂಮಿ ಕ್ರಯಕ್ಕೆ ಇಲ್ಲ, ಲೀಸ್‌ಗೆ ಮಾತ್ರ.. ನೀನು ಮಾಡಿದ್ರೆ ಮಾಡು, ಬಿಟ್ರೆ ಬಿಡು. ಗುಜರಾತ್‌ನಲ್ಲೂ ಕೂಡಾ ಕ್ರಯ ಇಲ್ಲ. ಲೀಸ್ ಮಾತ್ರ. ಮತ್ತು ನಿನ್ನ ಉದ್ದೇಶ ಇಂತದಕ್ಕೇ ಅಂತ ತಗೊಳ್ತಿಯ, ನೀನು ಉದ್ದೇಶ ತಪ್ಪಿದ್ರೆ ಆ ಭೂಮಿಯನ್ನು ಸರ್ಕಾರ ವಶಪಡಿಸಿಕೊಳ್ತದೆ. ಈ ರೀತಿಯ ಯೋಜನೆ ಇದೆ. ಆದರೆ ಕರ್ನಾಟಕದಲ್ಲಿ ಲೀಸ್‌ಗೆ ತಗೊಂಡ ಭೂಮಿಯನ್ನ ಕ್ರಯ ಮಾಡಿಸಿಕೊಳ್ತಿದ್ದಾರೆ. ಕ್ರಯ ಮಾಡಿಸಿಕೊಂಡರೆ ಏನು ಮಾಡಬಹುದು ? ನಾಳೆ ಆ ಭೂಮಿ ಕ್ರಯ ಮಾಡಿಸಿಕೊಂಡವನ ಭೂಮಿ ಆಗ್ತದೆ. ಅವನನ್ನ ಕೇಳೊ ಹಕ್ಕು ಇರಲ್ಲ. ಈಗ ಉದಾಹರಣೆಗೆ ಹೇಳೋದಾದರೆ, ಆ ಭೂಮೀನ ಎಕರೆಗೆ ಒಂದು ಲಕ್ಷ ರೂಪಾಯಿಯಂತೆ ತಗೋತಾನೆ. ಸರ್ಕಾರ ಅವನಿಗೆ ಭೂಮಿ ಕೊಡ್ತದೆ. ಭೂ ಬ್ಯಾಂಕ್ ಅವನಿಗೆ ಭೂಮಿ ಕೊಡ್ತದೆ. ಕ್ರಯ ಆದ ಮೇಲೆ ಆತ ಭೂಮಿಯನ್ನ ಒಂದು ಕೋಟಿ ರೂಪಾಯಿಗೆ ಮಾರಿ ಕೊಳ್ತಾನೆ, ಅವನನ್ನ ಕೇಳೋ ಹಕ್ಕು ಯಾರಿಗೂ ಇಲ್ಲ, ಸರ್ಕಾರಕ್ಕೂ ಇಲ್ಲ. ಈಗ ನಡೀತಿರೋದೆ ಈ ದಂಧೆ. ಅಂದ್ರೆ ನೂರು ಪಟ್ಟು ಲಾಭ, ಅಂದ್ರೆ ಬಂಡವಾಳ ಹಾಕಿ ಬಂಡವಾಳ ಮಾಡೋದು. ಇದನ್ನ ಯಾರ್‍ಯಾರು ಹಂಚಿಕೊಳ್ತಾ ಇದಾರೊ ಅರ್ಥ ಆಗ್ತಾ ಇಲ್ಲ. ಸರ್ಕಾರ ಈಗಲಾದರೂ ಈ ಭೂ ಬ್ಯಾಂಕ್‌ನ್ನ ಹಿಂದಕ್ಕೆ ತೆಗೋಬೇಕು. ಇಲ್ಲದೆ ಇದ್ರೆ ಇದು ಯಾರ್‍ಯಾರನ್ನ ಎಷ್ಟೆಷ್ಟು ವಿನಾಶ ಮಾಡುತ್ತೋ ಊಹೆಗೂ ಸಿಗೋದಿಲ್ಲ. ಇದನ್ನ ಸರ್ಕಾರ ಹಿಂದಕ್ಕೆ ತೆಗೊಳ್ಳದೇ ಇದ್ದರೆ ಇಡೀ ಜನತೆ ತಮ್ಮ ಉಳಿವಿಗಾಗಿ ಭೂಮಿಯನ್ನ ಕಾಪಾಡಿಕೊಳ್ಳೋದಕ್ಕೆ ಮುಂದಾಗಬೇಕಾಗ್ತದೆ. ಇಲ್ಲದಿದ್ದರೆ ತುಂಬಾ ಕಷ್ಟ. ಕ್ರಯ ಮಾಡೋದನ್ನ ಕೂಡಲೆ ನಿಲ್ಲಿಸಬೇಕಾಗಿದೆ. ಭೂಮಿ ಕೊಡೋದಾದ್ರೆ ಕೊಡಲಿ, ಆದರೆ ಲೀಸ್‌ಗೆ ಮಾತ್ರ ಕೊಡಲಿ. ಆ ಕಾನೂನು ಮತ್ತೆ ಜಾರಿಗೆ ಬರಬೇಕು ಮತ್ತು ಆ ಭೂ ಬ್ಯಾಂಕ್ ಅನ್ನೋದು ಇರಬಾರದು. ಅದನ್ನ ಸರ್ಕಾರ ಹಿಂದಕ್ಕೆ ತಗೋಬೇಕು. ಇದನ್ನ ಭೂಮಿ ಇರುವವರು ಮಾತ್ರ ಒತ್ತಾಯ ಮಾಡೋದಲ್ಲ, ಯಾರ್ ಯಾರು ಅನ್ನ ತಿನ್ನುವವರು ಇದ್ದಾರೊ ಅವರೆಲ್ಲಾ ಪ್ರತಿಭಟಿಸಬೇಕು. ಇಲ್ಲದಿದ್ರೆ ನಾಳೆ ನಾಡಿನ ಕಷ್ಟಕ್ಕೆ ಇಡೀ ಸಮುದಾಯ ಸಿಕ್ಕಿಕೊಳ್ತದೆ, ದುರಂತಮಯ ಬದುಕಿಗೆ ಕಾರಣವಾಗ್ತದೆ. ಇದು ಒಂದು ಎಳೆ ಮಾತ್ರ ಕೊಡ್ತಾ ಇದ್ದೀನಿ. ಇನ್ನೂ ಬೇರೆ ಬೇರೆ ವಿವರಗಳು ಇದ್ದಾವೆ ನನ್ನ ಹತ್ರ. ಅದರ ಅಗತ್ಯ ಈಗ ಇಲ್ಲ, ಇಷ್ಟು ಹೇಳ್ತೀನಿ.

ಈ ಹಿನ್ನೆಲೆಯಲ್ಲಿ ನಾನು ಕೇಳ್ತೀನಿ, ಈಗ ವಿಧಾನ ಸಭೆ ಆರಂಭ ಆಗಿದೆ. ಎಷ್ಟು ಜನ ವಿರೋಧ ಪಕ್ಷದವರು ಇದ್ದಾರೆ ?...

ಒಟ್ಟು ಎಷ್ಟು ಜನ ಸಾರ್ ಎಂಎಲ್‌ಎಗಳು?...

ಇನ್ನೂರ ಇಪ್ಪತ್ನಾಲ್ಕ ?...

ಆಯ್ತು, ೨೨೪ ಜನ ಎಂಎಲ್‌ಎಗಳ ನಡುವೆ ವಿರೋಧ ಪಕ್ಷದವರು ಎಷ್ಟು ಜನ ?...

ಎಷ್ಟು ?... ನೂರಾ ಎರಡಾ ?...

ಅಲ್ಲಾ... ಒಂದು.

ಒಂದೆ ಅಂತ ನಾನು ಹೇಳ್ತೀನಿ. ಯಾಕೆ ಅಂದರೆ ಜಿ. ವಿ. ಶ್ರೀರಾಮರೆಡ್ಡಿ ಸಿಪಿಎಂನಿಂದ ಗೆದ್ದಿದ್ರೆ ಎರಡು ಆಗ್ತಾ ಇತ್ತು, ಸಿಪಿಐನ ಸಾತಿ ಸುಂದರೇಶ್ ಮೂಡಿಗೆರೆಯಿಂದ ಗೆದ್ದಿದ್ರೆ ಮೂರು ಜನ ಆಗ್ತಾ ಇದ್ರು. ಈಗ ಒಂದು ಮಾತ್ರ.

---

### ೨೦೧೩ : ವಿಭಾ ಸಾಹಿತ್ಯ ಪ್ರಶಸ್ತಿಗೆ ಹಸ್ತಪ್ರತಿ ಆಹ್ವಾನ

ಕನ್ನಡ ಕವಯಿತ್ರಿ ವಿಭಾ ಅವರ ನೆನಪಿನಲ್ಲಿ 'ವಿಭಾ ಸಾಹಿತ್ಯ ಪ್ರಶಸ್ತಿ – ೨೦೧೩'ಕ್ಕಾಗಿ ಕನ್ನಡದ ಕವಿಗಳಿಂದ ಮೂವತ್ತಕ್ಕೂ ಹೆಚ್ಚು ಕವಿತೆಗಳ ಹಸ್ತಪ್ರತಿಗಳನ್ನು ಆಹ್ವಾನಿಸಲಾಗಿದೆ. ಅನುವಾದಿತ ಕವನಗಳಿಗೆ ಅವಕಾಶವಿಲ್ಲ. ಈ ಪ್ರಶಸ್ತಿಯು ರೂ. ೫,೦೦೦/– ನಗದು ಮತ್ತು ಪ್ರಶಸ್ತಿ ಫಲಕವನ್ನು ಒಳಗೊಂಡಿದೆ. ಪ್ರಶಸ್ತಿ ವಿಜೇತ ಹಸ್ತಪ್ರತಿಯನ್ನು ಗದಗದ ಲಡಾಯಿ ಪ್ರಕಾಶನದಿಂದ ಪ್ರಕಟಿಸಲಾಗುವುದು. ಹಸ್ತಪ್ರತಿ ಕಳುಹಿಸಲು **ಕೊನೆಯ ದಿನಾಂಕ : ಜುಲೈ ೧೦.**

ಹಸ್ತಪ್ರತಿಯನ್ನು ಕಳುಹಿಸಬೇಕಾದ ವಿಳಾಸ :

**ಪ್ರಕಾಶ ಮತ್ತು ಸುನಂದಾ ಕಡಮೆ**
ಸಂಚಾಲಕರು, ವಿಭಾ ಸಾಹಿತ್ಯ ಪ್ರಶಸ್ತಿ – ೨೦೧೩
ನಂ. ೯೦, 'ನಾಗಸುಧೆ' ಮಹಡಿ, ೬/ಬಿ ಕ್ರಾಸ್
ಕಾಳಿದಾಸನಗರ, ವಿದ್ಯಾನಗರ ವಿಸ್ತೀರ್ಣ, ಹುಬ್ಬಳ್ಳಿ – ೫೮೦ ೦೩೧
ದೂರವಾಣಿ : ೦೮೩೬–೨೩೭೬೮೨೬, ೯೪೪೫೮೭೬೫೮೭

ಯಾಕೆ ಈ ಮಾತನ್ನ ಹೇಳ್ತಾ ಇದ್ದೀನಿ ಅಂದ್ರೆ ಇನ್ನುಳಿದವರೆಲ್ಲ ಆಡಳಿತ ಪಕ್ಷದವರೆ...! ಯಾರು ಡಬ್ಲ್ಯುಟಿಓ, ಗ್ಯಾಟ್, ವಿಶ್ವಬ್ಯಾಂಕ್ ಇವನ್ನ ವಿರೋಧಿಸಲ್ಲವೋ ಅವರು ಅಲ್ಲಿ ಕೂತಿದ್ದರೂ ಒಂದೆ, ಇಲ್ಲಿ ಕೂತದ್ದರೂ ಒಂದೆ ... ಎಲ್ಲರೂ ಆಡಳಿತ ಪಕ್ಷದವರೆ. ಇವತ್ತು ರಾಜಕಾರಣ ಅಂದರೆ ಈ ಡಬ್ಲ್ಯುಟಿಓ, ಗ್ಯಾಟ್, ವಿಶ್ವಬ್ಯಾಂಕ್ ಇದ್ದಾವಲ್ಲ ಅವು ನಿಜವಾದ ಆಡಳಿತ ಮಾಡ್ತಾ ಇರೋದು. ಇದೇ ಆತಂಕ ಉಂಟು ಮಾಡುತ್ತಿರೋದು.

ಪ್ರಧಾನ ಮಂತ್ರಿ ಇರಬಹುದು, ಮುಖ್ಯಮಂತ್ರಿ ಇರಬಹುದು, ಪಾಕಿಸ್ತಾನ ಇರಬಹುದು, ಪಾಕಿಸ್ತಾನಕ್ಕೂ ನಮಗೂ ಅಂತ ವ್ಯತ್ಯಾಸವೇನಿಲ್ಲ. ಯಾವುದೇ ಹಿಂದುಳಿದ ದೇಶ ಇರಬಹುದು, ಬರೀ ಹೆಬ್ಬೆಟ್ಟು ಮಾತ್ರ ಆಗಿದ್ದೀವಿ ನಾವು, ರುಜು ಒತ್ತುವವರು ಮಾತ್ರ ಆಗಿದ್ದೀವಿ. ಸ್ವಾತಂತ್ರ್ಯ ಅನ್ನೋದು ಇಲ್ಲ.

ನಾವು ಈಗ ಅವರಿಂದ ಬಿಡುಗಡೆಗಾಗಿ ಹೋರಾಡಬೇಕಿದೆ.

ಅವರು ನಮ್ಮ ಕಾಲಿಗೆ ಸರಪಳಿ ಕಟ್ಟಿದ್ದಾರೆ. ಯಾರ ಕಾಲಿಗೆ...? ನಮ್ಮ ಪ್ರಧಾನ ಮಂತ್ರಿ ಕಾಲಿಗೆ ಸರಪಳಿ ಕಟ್ಟಿದ್ದಾರೆ. ಒಂದಿಷ್ಟುದ್ದ ಬಿಟ್ಟಿದ್ದಾರೆ. ಎಷ್ಟುದ್ದ ಬಿಟ್ಟಿದ್ದಾರೋ ಆ ಪರಿಧಿಯಲ್ಲಿ ಮಾತ್ರ ಚಲನೆ ಮಾಡಬೇಕು, ಅಷ್ಟೇನೆ. ಈಗ ಆ ಸರಪಳಿಯನ್ನು ಕತ್ತರಿಸುವುದೆ ಪರ್ಯಾಯ ರಾಜಕಾರಣ. ಇವತ್ತು ವಿಧಾನ ಸಭೆಯಲ್ಲಿ ಸರ್ವೋದಯ ಕರ್ನಾಟಕ ಪಕ್ಷ ಒಂದು ಸಸಿ ನೆಟ್ಟಿದೆ. ಜೊತೆಗೆ ಕಮ್ಯುನಿಸ್ಟ್ ಪಕ್ಷಗಳು, ಸಮಾಜವಾದಿಗಳು ಕೂಡಿ ಇದನ್ನು ಹಬ್ಬಿಸಬೇಕಿದೆ, ಬೆಳೆಸಬೇಕಿದೆ. ನಾಡಿನ ಜೊತೆಗೆ, ಮುಖ್ಯವಾಗಿ ಯುವಜನತೆ ಜೊತೆಗೂಡಿ ನಾಯಕತ್ವ ವಹಿಸಿ ಇದನ್ನು ಬೆಳೆಸಬೇಕು. ಇಷ್ಟು ಹೇಳಿ ನನ್ನ ಮಾತು ಮುಗಿಸ್ತೀನಿ.

*ಬರಹಕ್ಕೆ :* **ಬಿ. ಎಲ್. ರಾಜು**

**ಖಾಸಗಿ ವಿವಿಗಳು; ತರಲಿವೆ ಅಪಾಯಗಳು...!**

ಸಹೋದ್ಯೋಗಿಯೊಬ್ಬರು ತಮ್ಮ ಪುಟ್ಟ ಮಗಳನ್ನು ಎಲ್‌ಕೆಜಿಗೆ ಸೇರಿಸಲು ತುಂಬಾ ಕಷ್ಟಪಡುತ್ತಿದ್ದರು. ಬರುವ ಅಲ್ಪ ಸಂಬಳದಲ್ಲೇ ಸಂಸಾರವನ್ನು ಸರಿದೂಗಿಸಿಕೊಂಡು ಹೋಗುತ್ತಿದ್ದ ಅವರಿಗೆ, ಪ್ರತಿಷ್ಠಿತ ಶಾಲೆಯಲ್ಲಿ ಹೆಚ್ಚು ಮೊತ್ತದ ಡೊನೇಷನ್ ಕೊಟ್ಟು ಮಗಳನ್ನು ಪ್ರತಿಷ್ಠಿತ ಶಾಲೆಗೆ ಸೇರಿಸುವುದು ಕಷ್ಟವಾಗಿತ್ತು. ಎಲ್‌ಕೆಜಿಗೇ ಇಷ್ಟೊಂದು ಹಣ ನೀಡಬೇಕಾದರೆ ಮುಂದೆ ಓದಿಸಲು ಎಷ್ಟು ಖರ್ಚಾಗುತ್ತದೋ ಎಂಬ ಭಯ ಅವರಿಗೆ ಈಗಿನಿಂದಲೇ ಆವರಿಸಿತ್ತು.

ಶಿಕ್ಷಣ ವ್ಯಕ್ತಿಯೊಬ್ಬನಿಗೆ ಆತ್ಮವಿಶ್ವಾಸ, ನೈತಿಕ ಪ್ರಜ್ಞೆ, ಆರ್ಥಿಕ ಸಬಲತೆಯ ಶಕ್ತಿ ನೀಡಬೇಕು ಎನ್ನುತ್ತಾರೆ ಶಿಕ್ಷಣತಜ್ಞರು. ಆದರೆ, ನಮ್ಮಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳ ಹಾವಳಿ, ಶಿಕ್ಷಣದ ವ್ಯಾಪಾರೀಕರಣದಿಂದಾಗಿ ಪೋಷಕರಲ್ಲಿ ಭಯದ ವಾತಾವರಣ ಮೂಡಿದೆ. ಎಲ್‌ಕೆಜಿಗೇ ಇಷ್ಟೊಂದು ಆತಂಕಪಡುವ ಆ ಸಹೋದ್ಯೋಗಿ, ತಮ್ಮ ಮಗಳನ್ನು ಉನ್ನತ ಶಿಕ್ಷಣಕ್ಕೆ ಸೇರಿಸುವಾಗ ಇನ್ನೆಷ್ಟು ಆತಂಕಪಡಬಹುದು ?

– ಹೌದು. ಮುಂಬರುವ ದಿನಗಳು ಈ ನಿಟ್ಟಿನಲ್ಲಿ ಖಂಡಿತಾ ಆತಂಕಕಾರಿಯಾಗಲಿವೆ. ರಾಜ್ಯದಲ್ಲಿ ಖಾಸಗಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲು ಹೊರಟಿರುವ ಸರ್ಕಾರ ಇಂಥ ಆತಂಕಕಾರಿ ದಿನಗಳನ್ನು ತಾನಾಗಿಯೇ ಆಹ್ವಾನಿಸುತ್ತಿದೆ. ಇದು ಆತಂಕವಷ್ಟೇ ಅಲ್ಲ, ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಬೇರುಗಳನ್ನು ಬುಡಸಹಿತ ಕಿತ್ತು ಹಾಕುವ ಅಪಾಯವನ್ನೂ ಆಹ್ವಾನಿಸುತ್ತಿದೆ.

ಜ್ಞಾನ ಆಯೋಗದ ಶಿಫಾರಸಿನಂತೆ, ರಾಜ್ಯದಲ್ಲಿ ಉನ್ನತ ಶಿಕ್ಷಣದ ಪ್ರಮಾಣ ಹೆಚ್ಚಿಸಲು ಖಾಸಗಿ ವಿವಿಗಳನ್ನು ಸ್ಥಾಪಿಸುತ್ತಿದ್ದೇವೆ ಎಂದು ಉನ್ನತ ಶಿಕ್ಷಣ ಸಚಿವರ ಸ್ಪಷ್ಟೀಕರಣ ನೀಡಿದ್ದಾರೆ. ಆದರೆ, ಅದೇ ಸಚಿವರು ಖಾಸಗಿ ವಿವಿ ಮಸೂದೆಯಲ್ಲಿ ರಾಜ್ಯದ ವಿದ್ಯಾರ್ಥಿಗಳಿಗೆ ಶೇ. ೪೦ರಷ್ಟು ಸೀಟುಗಳನ್ನು ಮಾತ್ರ ನೀಡಬೇಕು. ಉಳಿದ ಶೇ. ೬೦ರಷ್ಟು ಸೀಟುಗಳನ್ನು ಹೊರರಾಜ್ಯದ ವಿದ್ಯಾರ್ಥಿಗಳಿಗೆ ಮೀಸಲಾಗಿರಿಸಬೇಕು ಎನ್ನುತ್ತಾರೆ. ಹೊರರಾಜ್ಯದ ವಿದ್ಯಾರ್ಥಿಗಳು ಕರ್ನಾಟಕಕ್ಕೆ ಬಂದು ಉನ್ನತ ಶಿಕ್ಷಣ ಪಡೆದರೆ ನಮ್ಮ ರಾಜ್ಯದ ಉನ್ನತ ಶಿಕ್ಷಣದ ಪ್ರಮಾಣ ಹೇಗೆ ಹೆಚ್ಚಾಗುತ್ತದೆ ?

ಖಾಸಗಿ ವಿವಿ ಸ್ಥಾಪನೆಯಾಗಿ ೫ ವರ್ಷ ಪೂರ್ಣಗೊಳಿಸಿದ ನಂತರ ವಿವಿ ರಾಜ್ಯದಲ್ಲಿ ತನಗೆ ಸೂಕ್ತವೆನಿಸುವಂಥ ಸ್ಥಳಗಳಲ್ಲಿ ಘಟಕ ಕಾಲೇಜುಗಳು, ಹೆಚ್ಚುವರಿ ಕ್ಯಾಂಪಸ್, ಪ್ರಾದೇಶಿಕ ಕೇಂದ್ರ ಮತ್ತು ಅಧ್ಯಯನ ಕೇಂದ್ರಗಳನ್ನು ತೆರೆಯಬಹುದು ಎಂದು ಮಸೂದೆಯಲ್ಲಿ ಹೇಳಲಾಗಿದೆ. ಈ ರೀತಿ ಆದಲ್ಲಿ ರಾಜ್ಯದ ವಿವಿಧ ಜಿಲ್ಲೆಗಳು, ಗ್ರಾಮಾಂತರ ಪ್ರದೇಶಗಳಲ್ಲಿರುವ ಸಾರ್ವಜನಿಕ ಮತ್ತು ಸ್ಥಳೀಯ ಶಿಕ್ಷಣ ವ್ಯವಸ್ಥೆಯ ಬೇರುಸಹಿತ ನಿರ್ನಾಮವಾಗುತ್ತದೆ. ಸರ್ಕಾರಿ ಶಿಕ್ಷಣ ಸಂಸ್ಥೆಗಳು ಬಾಗಿಲು ಮುಚ್ಚಬೇಕಾಗುತ್ತದೆ. (ಸರ್ಕಾರ ಈಗಾಗಲೇ ಪ್ರೊ॥ ಗೋವಿಂದ ವರದಿ ಶಿಫಾರಸ್ಸಿನಂತೆ ೧೨,೭೪೦ ಕನ್ನಡ ಶಾಲೆ ಶ್ಥಿಥಿಗಳನ್ನು ಮುಚ್ಚಲು ನಿರ್ಧರಿಸಿದೆ). ಅಷ್ಟೇ ಅಲ್ಲ, ಅಲ್ಲಿನ ಶಿಕ್ಷಕರು, ಅಧ್ಯಾಪಕರು, ಅಧ್ಯಾಪಕೇತರ ಸಿಬ್ಬಂದಿ ಕೆಲಸ ಕಳೆದುಕೊಂಡು ಬೀದಿ ಪಾಲಾಗಬೇಕಾಗುತ್ತದೆ.

ಖಾಸಗಿ ವಿವಿಗಳನ್ನು ಪ್ರಾಯೋಜಕ ಸಂಸ್ಥೆ ರೂಪಿಸುತ್ತದೆ. ಆ ಪ್ರಾಯೋಜಕ ಸಂಸ್ಥೆ ತಾನು ಹಾಕಿದ ಬಂಡವಾಳಕ್ಕೆ ಪ್ರತಿಯಾಗಿ ಲಾಭ ಗಳಿಸುವ ಉದ್ದೇಶ ಹೊಂದಿರುತ್ತದೆ. ಉದಾಹರಣೆಗೆ ಪ್ರಾಯೋಜಕ ಸಂಸ್ಥೆಯ ಮುಖ್ಯಸ್ಥ ಖಾಸಗಿ ವಿವಿಗೆ ಕುಲಾಧಿಪತಿಯಾಗಬಹುದು. ಆತ ತನ್ನ ಜೀವನಪರ್ಯಂತ ಇಲ್ಲವೇ, ಸ್ವಇಚ್ಛೆಯಿಂದ ಅಧಿಕಾರ ಬಿಟ್ಟುಕೊಡುವವರೆಗೆ ಕುಲಾಧಿಪತಿ ಆಗಿರಬಹುದು. ಸರ್ಕಾರಿ ವಿವಿಗಳಲ್ಲಿ ಕುಲಾಧಿಪತಿ ಸ್ಥಾನ ಹೊಂದಿರುವ ರಾಜ್ಯಪಾಲರು ಖಾಸಗಿ ವಿವಿಗಳಲ್ಲಿ ಕೇವಲ ಸಂದರ್ಶಕರಾಗಿರುತ್ತಾರಷ್ಟೇ. ರಾಜ್ಯಪಾಲರನ್ನು ಘಟಿಕೋತ್ಸವದಲ್ಲಿ ಅಧ್ಯಕ್ಷತೆ ವಹಿಸುವ ಬದಲು ಅಲಂಕಾರಮೂರ್ತಿಯನ್ನಾಗಿ ಕೂರಿಸಲಾಗುತ್ತದೆಯಷ್ಟೇ.

ಖಾಸಗಿ ವಿವಿಗಳು ಸ್ವಂತ ಧನಮೂಲ ಉಳ್ಳದಾಗಿರತಕ್ಕದ್ದು. ರಾಜ್ಯದಿಂದ ಅಥವಾ ರಾಜ್ಯದ ಒಡೆತನದಲ್ಲಿರುವ ಅಥವಾ ನಿಯಂತ್ರಣದಲ್ಲಿರುವ ಯಾವುದೇ ಇತರ ಸಂಸ್ಥೆ, ನಿಗಮದಿಂದ ಯಾವುದೇ ನಿರ್ವಹಣಾ ಸಹಾಯ ಅನುದಾನ, ಹಣಕಾಸು ನೆರವನ್ನು ಹಕ್ಕಿನಿಂದ ಕೇಳತಕ್ಕದ್ದಲ್ಲ ಎಂದು ಹೇಳುವ ಖಾಸಗಿ ವಿವಿ ಮಸೂದೆ, ಮತ್ತೊಂದೆಡೆ, ಸರ್ಕಾರದ ಸಂಘಟನೆಗಳಿಗೆ ಹಣಕಾಸು ನೆರವು ಒದಗಿಸುತ್ತಿರುವಂಥದ್ದೇ ಸಂಶೋಧನೆ, ಅಭಿವೃದ್ಧಿ ಮತ್ತಿತರ ಚಟುವಟಿಕೆ ಅಥವಾ ಸರ್ಕಾರದ ನೆರವನ್ನು ಪಡೆಯುವ ಯಾವುದೇ ನಿರ್ದಿಷ್ಟ ಸಂಶೋಧನೆ, ಅಥವಾ ಕಾರ್ಯಕ್ರಮಗಳಿಗಾಗಿ, ವಿವಿಗಳ ಪ್ರಯೋಜನಕ್ಕಾಗಿ ಅನುದಾನದ ಮೂಲಕ ಹಣಕಾಸು ನೆರವು ಒದಗಿಸಬಹುದು. ವಿವಿ ಇತರ ಯಾವುದೇ ಮೂಲದಿಂದ ಆರ್ಥಿಕ ನೆರವನ್ನೂ ಸ್ವೀಕರಿಸಬಹುದು ಎನ್ನುತ್ತದೆ. ಅಂದರೆ, ಸರ್ಕಾರದಿಂದ ಖಾಸಗಿ ವಿವಿಗಳಿಗೆ ಯಥೇಚ್ಛ ಹಣ ಬಿಡುಗಡೆ ಮಾಡುವ ತಂತ್ರಗಳನ್ನು ಉಪಾಯವಾಗಿ

**ಅಭಿನಂದನೆಗಳು**



ಪ್ರೊ॥ ಡಿ. ಆರ್. ಬಳೂರಗಿ ಅವರು ಬರೆದ ನವಕರ್ನಾಟಕ ಪ್ರಕಟಿಸಿರುವ ವಿಜ್ಞಾನ – ಸರಳ ಪರಿಚಯ ಮಾಲಿಕೆಯಲ್ಲಿನ 'ಪರಮಾಣು ನ್ಯೂಕ್ಲಿಯಸ್' ಕೃತಿಗಾಗಿ ಲೇಖಕರಿಗೆ ಕರ್ನಾಟಕ ಸಂಘ, ಶಿವಮೊಗ್ಗ ಇವರು ನೀಡುವ ೨೦೧೨ನೇ ಸಾಲಿನ "ಹಸೂಡಿ ವೆಂಕಟಶಾಸ್ತ್ರಿ ವಿಜ್ಞಾನ ಸಾಹಿತ್ಯ ಪ್ರಶಸ್ತಿ" ನೀಡಿ ಗೌರವಿಸಲಾಗಿದೆ. ಪ್ರೊ॥ ಡಿ. ಆರ್. ಬಳೂರಗಿ ಅವರಿಗೆ ನವಕರ್ನಾಟಕ ಮತ್ತು ಹೊಸತು ಬಳಗದ ವತಿಯಿಂದ ಅಭಿನಂದನೆಗಳು.

ಹೇಳಲಾಗಿದೆ. ಸರ್ಕಾರ ದಿಂದ ಹಣ ಪಡೆಯುವ ಇಂಥ ವಿವಿಗಳು ವಿದ್ಯಾರ್ಥಿ ಗಳಿಂದಲೂ ಉನ್ನತ ಶಿಕ್ಷಣಕ್ಕಾಗಿ ಲಕ್ಷಗಟ್ಟಲೇ ಶುಲ್ಕ, ಡೊನೇಷನ್ ಇತ್ಯಾದಿಯನ್ನೂ ವಸೂಲಿ ಮಾಡುತ್ತವೆ. ಈಗಾಗಲೇ ರಾಜ್ಯದ ಖಾಸಗಿ ವಿವಿಯೊಂದು ಯುಜಿಸಿ ಸೇರಿದಂತೆ ಇತರೆಡೆಯಿಂದಲೂ ರೂ. ೫೦ ಕೋಟಿ ಅನುದಾನ ಪಡೆದಿದೆ. ಆದರೆ, ಇಲ್ಲಿ ಸಾಮಾನ್ಯ ಕುಟುಂಬದ ವಿದ್ಯಾರ್ಥಿಯೊಬ್ಬ ಎಂಬಿಎ ಓದಬೇಕು ಎಂದರೆ ಆತ ಲಕ್ಷಗಟ್ಟಲೇ ಶುಲ್ಕ ಪಾವತಿಸಬೇಕು. ಸಾವಿರ ರೂಪಾಯಿಯ ನೋಟನ್ನೂ ಕಾಣದ ಬಡ ಕುಟುಂಬಗಳಿಗೆ ಲಕ್ಷ ರೂಪಾಯಿಯ ಶುಲ್ಕ ಆಕಾಶದಲ್ಲಿರುವ ಚಂದ್ರನಷ್ಟೇ ದೂರ.

ಸರ್ಕಾರದಿಂದ ಇಷ್ಟೆಲ್ಲಾ ಹಣ ಪಡೆಯುವ ಖಾಸಗಿ ವಿವಿಗಳು ಸರ್ಕಾರಕ್ಕೆ ತೆರಿಗೆಯನ್ನೂ ಸರಿಯಾಗಿ ಪಾವತಿಸುವುದಿಲ್ಲ. ಈಚೆಗಷ್ಟೇ ಕೇಂದ್ರ ಸರ್ಕಾರ ತೆರಿಗೆ ವಂಚಕ ಖಾಸಗಿ ವಿವಿಗಳ ಮೇಲೆ ಕೇಂದ್ರ ಅಬಕಾರಿ ಗುಪ್ತದಳ ನಿರ್ದೇಶನಾಲಯದ ಅಧಿಕಾರಿಗಳಿಂದ ತನಿಖೆ ಕೈಗೊಂಡಿದೆ. ಆದಾಯ ತೆರಿಗೆ ಇಲಾಖೆ ಅಧಿಕಾರಿಗಳೂ ಕೂಡ ಇಂಥ ಖಾಸಗಿ ವಿವಿಗಳ ಮೇಲೆ ಕಣ್ಣಿಟ್ಟಿದ್ದಾರೆ. ಹೀಗೆ ಸರ್ಕಾರದಿಂದಲೇ ಹಣ ಪಡೆದು, ಸರ್ಕಾರಕ್ಕೇ ಕೋಟ್ಯಂತರ ರೂಪಾಯಿ ತೆರಿಗೆ ವಂಚಿಸುವ ಖಾಸಗಿ ವಿವಿಗಳು ನಮಗೆ ಬೇಕೇ ?

ದೇಶದಲ್ಲಿ ಶಿಕ್ಷಣದ ಪ್ರಮಾಣ ಹೆಚ್ಚಿಸಲು ಕೇಂದ್ರ ಸರ್ಕಾರ ವಿವಿಧ ರಾಜ್ಯಗಳಲ್ಲಿ ಕೇಂದ್ರೀಯ ವಿದ್ಯಾಲಯಗಳನ್ನು ಸ್ಥಾಪಿಸಿದೆ. ರಾಜ್ಯದ ಗುಲ್ಬರ್ಗ ದಲ್ಲೂ ಕೇಂದ್ರೀಯ ವಿವಿ ಆರಂಭವಾಗಿದೆ. ಈ ವಿವಿಯ ಕುಲಪತಿ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಸಾಹಿತಿ ಡಾ॥ ಯು. ಆರ್. ಅನಂತಮೂರ್ತಿ ಖಾಸಗಿ ವಿವಿ ಸ್ಥಾಪನೆಗೆ ತೀವ್ರ ವಿರೋಧ ವ್ಯಕ್ತ ಪಡಿಸಿದ್ದಾರೆ. 'ರಾಜ್ಯದಲ್ಲಿರುವ ೧೫ಕ್ಕೂ ಹೆಚ್ಚು ಸರ್ಕಾರಿ ವಿವಿಗಳಿಂದ ಗುಣಮಟ್ಟದ ಕೆಲಸ ತೆಗೆದು ಕೊಳ್ಳುವುದನ್ನು ಬಿಟ್ಟು, ನೀವು ಸರಿಯಾಗಿಲ್ಲ. ಅದಕ್ಕೆ ಖಾಸಗಿಯವರಿಗೆ ಬೆಂಬಲಿಸುತ್ತೇವೆ' ಎಂದು ತಪ್ಪುದಾರಿಯತ್ತ ಹೆಜ್ಜೆ ಹಾಕಿದರೆ ಹೇಗೆ ? ಗುಣಮಟ್ಟದ ಶಿಕ್ಷಣ, ಶಿಕ್ಷಕರು ಇಂದಿಗೂ ಸರ್ಕಾರದ ವ್ಯವಸ್ಥೆಯಲ್ಲಿ ಸಿಗುತ್ತಾರೆ ಎಂದು ಅಭಿಪ್ರಾಯಪಡುತ್ತಾರೆ ಅನಂತಮೂರ್ತಿ.

ಖಾಸಗಿ ವಿವಿಗಳನ್ನು ಸ್ಥಾಪಿಸಲು ಸರ್ಕಾರ ಅನುಮತಿ ನೀಡಿರುವ ಬಹುತೇಕ ಶಿಕ್ಷಣ ಸಂಸ್ಥೆಗಳು ಈ ಹಿಂದೆ ಯುಜಿಸಿಯ ಕಪ್ಪುಪಟ್ಟಿಯಲ್ಲಿದ್ದವು ಎಂಬ ಆರೋಪಗಳೂ ಇವೆ. ಅಷ್ಟೇ ಅಲ್ಲ, ಈಗಾಗಲೇ ಸರ್ಕಾರಿ ವಿವಿಗಳ ಅಧೀನದಲ್ಲಿದ್ದ ಕೆಲ ಖಾಸಗಿ ಶಿಕ್ಷಣ ಸಂಸ್ಥೆಗಳೂ ಖಾಸಗಿ ವಿವಿ ತೆರೆಯಲು ಮುಂದೆ ಬಂದಿವೆ. ಇದರಿಂದ ಸಾರ್ವಜನಿಕ ಸರ್ಕಾರಿ ಶಿಕ್ಷಣ ವ್ಯವಸ್ಥೆಗೆ ಧಕ್ಕೆಯಾಗುತ್ತದೆ.

ಗುಣಮಟ್ಟದ ಶಿಕ್ಷಣಕ್ಕಾಗಿ ಖಾಸಗಿ ವಿವಿ ಸ್ಥಾಪಿಸಲಾಗುತ್ತಿದೆ ಎನ್ನುವ ಸರ್ಕಾರ, ಅಂಥ ವಿವಿ ಗಳಲ್ಲಿ ಮಂತ್ರ-ತಂತ್ರ, ಜ್ಯೋತಿಷ್ಯ, ಕವಡೆ ಶಾಸ್ತ್ರ ಕಲಿಸುವ ಇಲ್ಲವೇ ನಾಯಿ ಸಾಕುವ ತರಬೇತಿಯ ಪಠ್ಯಗಳನ್ನು ರೂಪಿಸಿದೆ. ವೈಚಾರಿಕ ಪ್ರಜ್ಞೆ ಮೂಡಿಸಬೇಕಾದ ಶಿಕ್ಷಣ, ಶತಮಾನಗಳಷ್ಟು ಹಿಂದಿನ ಮನು ಧರ್ಮ ಪ್ರಣೀತ, ಪುರಾಣದ ವಿಷಯಗಳನ್ನು ಮತ್ತೆ ಸ್ಥಾಪಿಸಲು ಹೊರಟರೆ ಉನ್ನತ ಶಿಕ್ಷಣದ ಗುಣಮಟ್ಟ ಏನಾಗಬಲ್ಲದು ಎಂಬುದು ಚಿಂತನಾರ್ಹ.

ಸಾರ್ವಜನಿಕ ವ್ಯವಸ್ಥೆಯಲ್ಲಿ ಶಿಕ್ಷಣವಿದ್ದಲ್ಲಿ ಸಮಾಜದ ಎಲ್ಲಾ ವರ್ಗಕ್ಕೂ ಸಮಾನ ಪ್ರಾತಿನಿಧ್ಯ ದೊರೆಯುತ್ತದೆ. ಶಿಕ್ಷಣ ಖಾಸಗೀಕರಣವಾದಲ್ಲಿ ಕೇವಲ ಹಣವುಳ್ಳವರು ಮಾತ್ರ ಶಿಕ್ಷಣ ಪಡೆಯು ವಂತಾಗುತ್ತದೆ. ಆಗ ಶಿಕ್ಷಣದಿಂದ ಮುಖ್ಯವಾಹಿನಿಗೆ ಬರಬೇಕಾದ ಎಷ್ಟೋ ಸಮುದಾಯಗಳು ಇನ್ನೂ ಕೆಳಮಟ್ಟಕ್ಕೆ ತಳ್ಳಲ್ಪಟ್ಟು, ತುತ್ತು ಅನ್ನಕ್ಕಾಗಿ ಜೀತದಾಳು ಗಳಾಬೇಕಾಗುತ್ತದೆ. 'ಉನ್ನತ ಶಿಕ್ಷಣದಿಂದಷ್ಟೇ ದೇಶದ ಅಭಿವೃದ್ಧಿ ಸಾಧ್ಯ' ಎಂದು ಡಾ॥ ಬಿ. ಆರ್. ಅಂಬೇಡ್ಕರ್ ಅವರ ಮಾತು ಪುಸ್ತಕಗಳಷ್ಟೇ ಉಳಿಯ ಬೇಕಾದೀತು. ಮಠ-ಮಾನ್ಯಗಳಿಗೆ ಕೋಟಿಗಟ್ಟಲೆ ಅನುದಾನ ನೀಡುವ ಸರ್ಕಾರ, ಕನಿಷ್ಠ ಮೂಲ ಅಗತ್ಯವಾದ ಶಿಕ್ಷಣಕ್ಕೂ ಖರ್ಚು ಮಾಡಲು ಹಣವಿಲ್ಲ ಎನ್ನುವುದು ನಿಜಕ್ಕೂ ನಾಚಿಕೆಗೇಡು. ಅಷ್ಟಕ್ಕೂ ಖಾಸಗೀಕರಣದಿಂದಲೇ ಎಲ್ಲವೂ ಸರಿಯಾಗಿ ನಡೆಯುತ್ತದೆ ಎಂದಾದಲ್ಲಿ, ಪ್ರಜಾಪ್ರಭುತ್ವದಲ್ಲಿ ಮತದಾರರಿಂದ ರೂಪುಗೊಳ್ಳುವ ಸರ್ಕಾರವನ್ನೂ ಮುಂದೊಂದು ದಿನ ಖಾಸಗಿಯವೇ ನಡೆಸಿದಲ್ಲಿ ಆಶ್ಚರ್ಯವಿಲ್ಲ !

*ದಾವಣಗೆರೆ* **ಡಾ॥ ಎಂ. ಎಂ. ಕಡಕೋಳ**

**ಕವಿತೆ**

## ಶುದ್ಧ ಸುಳ್ಳು

ನನ್ನದೆನ್ನುವುದೊಂದು ಶುದ್ಧ ಸುಳ್ಳು

ನೆನಪೊಳಗೆ ನಗುವಾಗಿದ್ದ
ನನ್ನ ಕವಿತೆ
ಮಗುವಾಗಿ ಹುಟ್ಟಿದ ಮರುಕ್ಷಣದಲ್ಲೇ
ಹೊರತಾಗಿರುತ್ತದೆ ನನ್ನಿಂದ, ಮತ್ತೆ
ನಾನು ಅದರಿಂದ
ತೊತ್ತಾಗುತ್ತದೆ
ಭಾವಕ್ಕೆ, ಅರ್ಥಕ್ಕೆ ಕೆಲವೊಮ್ಮೆ ಬರೀ ವ್ಯರ್ಥಕ್ಕೆ



ಸಾಕ್ಷಿಯಾಗಿಸಿ ನನ್ನ
ನನ್ನ ಕವಿತೆಯನೇ ಕಾಣಿಕೆಯಾಗಿ ಕೊಟ್ಟು
ನನ್ನ ಶಬ್ದಗಳ ಮೂಲಕ ತಮ್ಮ ಸಂಸಾರ ನೆಟ್ಟು
ಮರದಂತೆ ಮನುಷ್ಯ
ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳ ಹೂ ಬಿಟ್ಟು
ರೆಂಬೆ ರೆಂಬೆಗೂ ಅರ್ಥಾನರ್ಥಗಳ ಗೂಡು ಕಟ್ಟಿ
ಹಾಡು ಕಟ್ಟಿ, ಕೊನೆಗೊಂದು ಬದುಕು ಕಟ್ಟಿ
ನೆನಪುಗಳ ಪತಾಕೆ ಹಾರಿಸಿ
ಹಾರಿ ಹೋಗುವ ಇವರು
ನನ್ನ ಕವಿತೆಯ ಮರ್ಮವೆನ್ನಲೇ ?
ಕವಿತೆ ಹಡೆದೂ ಹೊರಗುಳಿಯುದೇ
ನನ್ನ ಕರ್ಮವೆನ್ನಲೇ ?
ಏನಾದರೂ ಸರಿ
ನನ್ನ ಕವಿತೆ ನಿಮ್ಮ
ಮಂದಿರ, ಮಸೀದಿ, ಚರ್ಚು
ಇಗರ್ಜಿಗಳ ತುಳಿತಕ್ಕೆ ಸಿಕ್ಕು
ಧರ್ಮವಾಗದಿದ್ದರೆ ಸಾಕು
ನನ್ನ ಕವಿತೆ ಎಂದಾದರೂ ನಿನ್ನ
ಮುಂದೆ ಕೈಯೊಡ್ಡಿದರೆ
ಬೊಗಸೆ ಅನ್ನ ಹಾಕು

**ಡಾ॥ ರಾಜಶೇಖರ ಮಠಪತಿ (ರಾಗಂ)**
ಪ್ರೊ॥ ವೈಡಿಡಿ ಜಿಎಫ್‌ಜಿಸಿ
ಬೇಲೂರು - ೫೭೩ ೧೧೫ ಹಾಸನ ಜಿಲ್ಲೆ

ಡಾ|| ಟಿ. ಆರ್. ಚಂದ್ರಶೇಖರ

# ಕರ್ನಾಟಕದ ಹೊಸ ಸರ್ಕಾರದ ಮುಂದಿರುವ ಸವಾಲುಗಳು

*(ಜೂನ್ ಸಂಚಿಕೆಯಿಂದ ಮುಂದುವರಿದ ಲೇಖನ)*




ಭಾಗ–೬

**ಶಿಕ್ಷಣ ಮತ್ತು ಆರೋಗ್ಯ**

ಕಳೆದ ಐದು ವರ್ಷಗಳಲ್ಲಿ ಶಿಕ್ಷಣವನ್ನು ಪಾರಮಾರ್ಥೀಕರಣಕ್ಕೆ ಒಳಪಡಿಸಲು ವ್ಯವಸ್ಥಿತ ಪ್ರಯತ್ನ ನಡೆಯಿತು. ಭಗವದ್ಗೀತೆಯ ಪಾರಾಯಣವನ್ನು ಶಾಲೆಗಳಲ್ಲಿ ಏರ್ಪಡಿಸಲಾಯಿತು. ಆದರೆ ನಮ್ಮ ನಾಡಿನ ಚಿಂತಕರು, ಚಳುವಳಿಗಾರರು ಆಗಿದ್ದ ಮತ್ತು ಕನ್ನಡದಲ್ಲಿ ಕಾವ್ಯವನ್ನು ರಚಿಸಿದ ಬಸವಣ್ಣನ ಬಗ್ಗೆ, ಕನಕದಾಸರ ಬಗ್ಗೆ, ಅಕ್ಕನ ಬಗ್ಗೆ, ಪ್ರವಾದಿ ಮಂಟೆಸ್ವಾಮಿಯ ಬಗ್ಗೆ, ನಾಡಿನ ದಲಿತರ ಮತ್ತು ಹಿಂದುಳಿದ ವರ್ಗಗಳ ಆರಾಧ್ಯ ದೇವತೆ ಎಲ್ಲಮ್ಮನ ಬಗ್ಗೆ, ಮೈಲಾರದ ಬಗ್ಗೆ ಮಾತ್ರ ಯಾವುದೇ ಕಾರ್ಯಕ್ರಮವನ್ನು ಹಾಕಿಕೊಳ್ಳದೆ ಧಾರ್ಮಿಕ ತಾರತಮ್ಯವನ್ನು ಮೆರೆಯಲಾಯಿತು. ನಮ್ಮ ಪ್ರಾಥಮಿಕ ಶಿಕ್ಷಣವು ದಿಕ್ಕು–ದಿಶೆ ಇಲ್ಲದೆ ಸಾಗುತ್ತಿರುವಂತೆ ಕಾಣುತ್ತಿದೆ. ಅಲ್ಲಿ ಪಠ್ಯಪುಸ್ತಕಗಳ ರಚನೆ, ಶಿಕ್ಷಕರ ತರಬೇತಿ, ಕಲೆಯನ್ನು ಶಿಕ್ಷಣದಲ್ಲಿ ಬಳಸಿಕೊಳ್ಳುವ ಕ್ರಮ ಮುಂತಾದವುಗಳ ಬಗ್ಗೆ ಸಮಸ್ಯೆಯಿದೆ. ನಮಗೆ ಕಂಡಂತೆ ಅಲ್ಲಿರುವ ಬಹು ದೊಡ್ಡ ಸಮಸ್ಯೆಯೆಂದರೆ ಪಠ್ಯಪುಸ್ತಕಗಳ ಗುಣಮಟ್ಟ, ಅಲ್ಲಿನ ಭಾಷಾಶೈಲಿ, ಪುಸ್ತಕದ ವಿನ್ಯಾಸ ಮುಂತಾದವುಗಳು ಪ್ರೋತ್ಸಾಹದಾಯಕವಾಗಿಲ್ಲ. ಕನ್ನಡಕ್ಕೆ ಎಂಟು ಜ್ಞಾನಪೀಠ ಪ್ರಶಸ್ತಿಗಳು ಬಂದಿವೆ. ಇದು ನಮ್ಮ ಭಾಷಾ ಶ್ರೀಮಂತಿಕೆಯನ್ನು – ಸಮೃದ್ಧತೆಯನ್ನು ತೋರಿಸುತ್ತದೆ. ಆದರೆ ನಮ್ಮ ಪ್ರಾಥಮಿಕ ಶಾಲಾ ಪಠ್ಯಪುಸ್ತಕಗಳಲ್ಲಿನ ಒಣ ಭಾಷೆಯನ್ನು ಪರಿಶೀಲಿಸಿದರೆ ಕನ್ನಡಕ್ಕೆ ಅತಿ ಹೆಚ್ಚಿನ ಜ್ಞಾನಪೀಠ ಪ್ರಶಸ್ತಿಗಳು ಬಂದಿವೆಯೋ ಇಲ್ಲವೋ ಎಂಬುದರ ಬಗ್ಗೆ ಅನುಮಾನ ಬರುವಂತಿದೆ. ಸರ್ವ ಶಿಕ್ಷಣ ಅಭಿಯಾನ ಅನುಷ್ಠಾನಗೊಂಡ ಮೇಲೆ ಶಿಕ್ಷಕರ ತರಬೇತಿಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ಆದರೆ ಅದು ಕೇವಲ ಒಂದು ವಿಧ್ಯುಕ್ತ ಕ್ರಿಯೆಯಂತಾಗಿದೆಯೇ ವಿನಾ ಅಲ್ಲಿ ಜೀವಂತಿಕೆ ಇಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮ ನಾಡಿನ ವಿಶ್ವವಿದ್ಯಾಲಯಗಳು ಪ್ರಾಥಮಿಕ ಶಿಕ್ಷಣದ ಬಗ್ಗೆ ತೋರುತ್ತಿರುವ ಅನಾದರ ಮತ್ತು ನಿರ್ಲಕ್ಷ್ಯ. ವಿಶ್ವವಿದ್ಯಾಲಯಗಳ ವಿದ್ವಾಂಸರು ಪ್ರಾಥಮಿಕ ಶಾಲಾ ಪಠ್ಯಪುಸ್ತಕಗಳನ್ನು ರಚಿಸುವ ಕೆಲಸ ಮಾಡಬೇಕು. ಯಾವ ರೀತಿಯಲ್ಲಿ ಬರೆದರೆ ಮಕ್ಕಳಿಗೆ ಹಿಡಿಸುತ್ತದೆ, ಯಾವ ರೀತಿಯಲ್ಲಿ ಬೋಧಿಸಿದರೆ ಮಕ್ಕಳಿಗೆ ಆಸಕ್ತಿದಾಯಕವಾಗಿರುತ್ತದೆ ಮುಂತಾದ ಸಂಗತಿಗಳ ಬಗ್ಗೆ ಪ್ರಯೋಗಗಳಾಗಬೇಕು.

ಹೊಸ ಸರ್ಕಾರವು ತಕ್ಷಣ ನಮ್ಮ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಸಮಸ್ಯೆಗಳ ಅಧ್ಯಯನಕ್ಕೆ ಒಂದು ತಜ್ಞರ ಸಮಿತಿಯನ್ನು ನೇಮಿಸಬೇಕು. ಕೇಂದ್ರವು ಏಕಘನಶಿಲಾ ಮಾದರಿಯ ಶಿಕ್ಷಣ ಪದ್ಧತಿಯನ್ನು ರೂಪಿಸುತ್ತಿರುವ ಹಿನ್ನೆಲೆಯಲ್ಲಿ ಮತ್ತು ಸಿಬಿಎಸ್‌ಇ, ಐಸಿಎಸ್‌ಇ ಮುಂತಾದವುಗಳ ದಾಳಿಯಿಂದ ಮತ್ತು ಶಾಲೆಯಲ್ಲಿ ಬೋಧನೆಯ ಭಾಷಾ ಮಾಧ್ಯಮದ ಬಗ್ಗೆ ಇರುವ ಸಮಸ್ಯೆಯ ನೆಲೆಯಲ್ಲಿ ನಮ್ಮ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯು ಗೊಂದಲದ ಗೂಡಾಗಿದೆ. ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಕರ್ನಾಟಕತ್ವ, ಸಾಮಾಜಿಕ ಮೌಲ್ಯಗಳ ಮಹತ್ವ,

ದುಡಿಯುವ ವರ್ಗದ ಸುಧಾರಣೆ ಹೆಸರಿನಲ್ಲಿ ಅವರ ಬದುಕನ್ನು ತೀವ್ರ ಅಭದ್ರತೆಗೆ ಒಳಗಾಗುವಂತೆ ಮಾಡಲಾಗುತ್ತಿದೆ. ನಮ್ಮ ರಾಜ್ಯದಲ್ಲಿ ಈ ವರ್ಗವು ಇಂದು ಬದುಕನ್ನು ಕಟ್ಟಿಕೊಳ್ಳಲು ವಲಸೆಯನ್ನು ಅವಲಂಬಿಸಿದೆ. ಕಳೆದ ದಶಕದಲ್ಲಿ ನಮ್ಮ ರಾಜ್ಯದಲ್ಲಿ ಏರಿಕೆಯಾದ ನಿವ್ವಳ ಜನಸಂಖ್ಯೆ 82.80 ಲಕ್ಷ. ಅದರಲ್ಲಿ ನಗರ ಪ್ರದೇಶದ ಪಾಲು ಶೇ. 68. ಈ ವರ್ಗಕ್ಕೆ ಸಂಬಂಧಿಸಿದ ಸಮಸ್ಯೆಯು ಎಲ್ಲಿ ಮಡುಗಟ್ಟಿಕೊಳ್ಳುತ್ತಿದೆ ಎಂಬುದು ಇದರಿಂದ ತಿಳಿದುಬರುತ್ತದೆ. ಇದಕ್ಕೆ ನಗರ ಪ್ರದೇಶಗಳ ಬೆಳವಣಿಗೆಗೆ ಪ್ರೋತ್ಸಾಹ ನೀಡುವುದರಿಂದ ಇದನ್ನು ನಿವಾರಿಸುವುದು ಸಾಧ್ಯವಿಲ್ಲ. ಬೆಂಗಳೂರು ಬೆಳೆದದ್ದು ಸಾಕು. ಗ್ರಾಮೀಣ ಪ್ರದೇಶದಿಂದ ಜನರು ತಂಡೋಪತಂಡವಾಗಿ ನಗರಗಳಿಗೆ ವಲಸೆ ಬರುವುದನ್ನು ತಡೆಯಬೇಕು. ಅದಕ್ಕೆ ಗ್ರಾಮೀಣ ಪ್ರದೇಶದಲ್ಲಿ ದುಡಿಯುವ ವರ್ಗಕ್ಕೆ ಬದುಕನ್ನು ಕಟ್ಟಿಕೊಳ್ಳುವುದು ಸಾಧ್ಯವಾಗಬೇಕು.

ಜೀವಂತಿಕೆ, ನವನವೋನ್ಮೇಶಶಾಲಿನಿ ಪ್ರಯೋಗಗಳು ಮುಂತಾದವು ಇಲ್ಲವೇ ಇಲ್ಲದಂತಾಗಿಬಿಟ್ಟಿವೆ.

ಅಕ್ಷರ ಮತ್ತು ಶಿಕ್ಷಣ ಜನರಿಗೆ ಯಾಕೆ ಬೇಕು ಎಂಬುದರ ಬಗ್ಗೆ ಅನೇಕ ತಪ್ಪುಕಲ್ಪನೆಗಳಿವೆ. ಅದರಿಂದ ಜನರ ದುಡಿಮೆಯ ಸಾಮರ್ಥ್ಯ ಉತ್ತಮವಾಗುತ್ತದೆ, ರೈತರು ಆಧುನಿಕ ಕೃಷಿಯನ್ನು ಅಳವಡಿಸಿಕೊಳ್ಳುವುದು ಅದರಿಂದ ಸಾಧ್ಯವಾಗುತ್ತದೆ, ಶಿಕ್ಷಣ ಪಡೆದ ಹೆಣ್ಣು ಮಕ್ಕಳು ಒಳ್ಳೆಯ ತಾಯಂದಿರಾಗುತ್ತಾರೆ ಮುಂತಾದ ನೆಲೆಯಲ್ಲಿ ಅದರ ಮಹತ್ವವನ್ನು ಪರಿಭಾವಿಸಿಕೊಳ್ಳಲಾಗಿದೆ. ಅತ್ಯಂತ ಸರಳವಾಗಿ ಹೇಳುವುದಾದರೆ ಜನರಿಗೆ ಶಿಕ್ಷಣ ಯಾಕೆ ಬೇಕು ಎಂದರೆ ಅವರು ಮನುಷ್ಯರಾಗಿರುವುದರಿಂದ ಮತ್ತು ಅದು ಒಂದು ಬಗೆಯ ಘನತೆಯನ್ನು, ಸೌಂದರ್ಯವನ್ನು ಜನರಿಗೆ ತಂದುಕೊಡುತ್ತದೆ ಅನ್ನುವ ಕಾರಣಕ್ಕೆ ಅದು ಬೇಕು. ವರಮಾನ, ಉತ್ಪಾದನೆ, ಬಂಡವಾಳ ಮುಂತಾದವು ಅಭಿವೃದ್ಧಿಯ ಸಾಧನಗಳು. ಅಲ್ಲಿ ಅವುಗಳ ಪಾತ್ರ ಸೀಮಿತವಾದುದು. ಆದರೆ ಅಕ್ಷರ ಸಂಸ್ಕೃತಿ ಮತ್ತು ಶಿಕ್ಷಣ ಅಭಿವೃದ್ಧಿಯ ಸಾಧನವೂ ಹೌದು ಮತ್ತು ಬಹಳ ಮುಖ್ಯವಾಗಿ ಅವು ಅಭಿವೃದ್ಧಿಯ ಅವಿಭಾಜ್ಯ ಅಂಗಗಳು. ಅಮರ್ತ್ಯ ಸೆನ್ ಹೇಳುವ ಹಾಗೆ ಅವು ಅಭಿವೃದ್ಧಿಯ ಅಂತರ್ಗತ ಭಾಗಗಳು. ಈ ನೆಲೆಯಲ್ಲಿ ಶಿಕ್ಷಣದ ಪಾತ್ರವನ್ನು ಪರಿಭಾವಿಸಿಕೊಳ್ಳುವ ಅಗತ್ಯವಿದೆ. ನಮ್ಮ ರಾಜ್ಯದಲ್ಲಿ ಸಾಕ್ಷರತೆಗೆ ಸಂಬಂಧಿಸಿದಂತೆ ಅನೇಕ ಜಿಲ್ಲೆಗಳು ಇನ್ನೂ ಹಿಂದುಳಿದ ಸ್ಥಿತಿಯಲ್ಲಿ ಇವೆ. ರಾಜ್ಯಮಟ್ಟದಲ್ಲಿ ಒಟ್ಟು ಸಾಕ್ಷರತಾ ಪ್ರಮಾಣ ಶೇ. ೭೫.೬೦ರಷ್ಟಿದ್ದರೆ ಯಾದಗಿರಿ ಜಿಲ್ಲೆಯಲ್ಲಿ ೨೦೧೧ರಲ್ಲಿ ಸಾಕ್ಷರತೆ ಪ್ರಮಾಣ ಶೇ. ೫೨.೩೬. ಇಲ್ಲಿನ ಅಂತರ ಶೇ. ೨೩.೨೪ ಅಶ್ಧಂಶಗಳು. ರಾಯಚೂರು, ಗುಲಬರ್ಗಾ ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಸಾಕ್ಷರತಾ ಪ್ರಮಾಣ ಶೇ. ೬೫ಕ್ಕಿಂತ ಕೆಳಮಟ್ಟ ದಲ್ಲಿದೆ. ಮಹಿಳೆಯರ ಸಾಕ್ಷರತೆಯು ಬಳ್ಳಾರಿ, ಬಾಗಲಕೋಟೆ, ವಿಜಾಪುರ, ಗುಲಬರ್ಗಾ, ಕೊಪ್ಪಳ, ರಾಯಚೂರು ಮತ್ತು ಯಾದಗಿರಿ ಜಿಲ್ಲೆಗಳಲ್ಲಿ ಅದು ಶೇ. ೬೦ಕ್ಕಿಂತ ಕೆಳಮಟ್ಟದಲ್ಲಿದೆ. ಪ್ರಾಥಮಿಕ ಶಿಕ್ಷಣದಲ್ಲಿ ಶಾಲೆಯನ್ನು ಬಿಡುವ ಮಕ್ಕಳ ಪ್ರಮಾಣ ಅಗಾಧವಾಗಿದೆ. ನಾಡಿನ ಪ್ರತಿಯೊಂದು ಮಗುವೂ ಹತ್ತನೆಯ ತರಗತಿಯವರೆಗೆ ಓದುವ ವ್ಯವಸ್ಥೆಯನ್ನು ಮಾಡುವುದು ನಮಗೆ ಸಾಧ್ಯವಾಗಿಲ್ಲ. ಮಕ್ಕಳನ್ನು ಪಾಲಕರು ಶಾಲೆಗೆ ಕಳುಹಿಸದಿರುವುದು, ಶಾಲೆಯನ್ನು ಮಕ್ಕಳು ಮಧ್ಯದಲ್ಲಿ ಬಿಡುವುದು ಮುಂತಾದವುಗಳಿಗೆ ಬಡತನವನ್ನು, ಪಾಲಕರ ನಿರ್ಲಕ್ಷ್ಯವನ್ನು ಕಾರಣ ಮಾಡಲಾಗುತ್ತದೆ. ಈ ವಿಷಯದಲ್ಲಿ ಅಧ್ಯಯನಗಳು ತಿಳಿಸುವುದೇನೆಂದರೆ ಮೇಲಿನ ಕಾರಣಗಳ ಜೊತೆಗೆ ಶಾಲಾ ವಾತಾವರಣ, ಬೋಧನೆಯ ಸ್ವರೂಪ, ಪಠ್ಯಪುಸ್ತಕಗಳ ಮಾದರಿ, ಶಿಕ್ಷಕರು ಸಮಾನತೆಗೆ ನೀಡುವ ಮಹತ್ವ ಮುಂತಾದವುಗಳಿಗೆ ಸಂಬಂಧಿಸಿದ ಸಂಗತಿಗಳೂ ಇವೆ.



ಜನಸಂಖ್ಯೆಯ ಬೆಳವಣಿಗೆಯು ಇಳಿಮುಖವಾಗುತ್ತಿರುವ ಹಿನ್ನೆಲೆಯಲ್ಲಿ ಇನ್ನು ಮುಂದೆ ಮೊದಲನೆಯ ತರಗತಿಗೆ ಸೇರುವ ಮಕ್ಕಳ ಸಂಖ್ಯೆಯು ವರ್ಷದಿಂದ ವರ್ಷಕ್ಕೆ ಹೆಚ್ಚಾಗುವುದಿಲ್ಲ. ಉದಾಹರಣೆಗೆ ೧೯೯೧ರಲ್ಲಿ ರಾಜ್ಯದಲ್ಲಿದ್ದ ೦–೬ ವಯೋಮಾನದ ಮಕ್ಕಳ ಸಂಖ್ಯೆ ೭೪.೭೮ ಲಕ್ಷ. ಇದು ೨೦೦೧ರಲ್ಲಿ ೭೧.೮೨ ಲಕ್ಷದಷ್ಟಾಯಿತು. ಮುಂದೆ ೨೦೧೧ರಲ್ಲಿ ಅದು ೬೮.೫೫ ಲಕ್ಷವಾಗಿದೆ. ಇದರಿಂದ ನಾವು ಕಲಿಯಬೇಕಾದ ಪಾಠವೆಂದರೆ ನಮ್ಮ ಪ್ರಾಥಮಿಕ ಶಿಕ್ಷಣದಲ್ಲಿ ಗುಣಮಟ್ಟವನ್ನು ಉತ್ತಮಪಡಿಸುವುದರ ಕಡೆಗೆ ಹೆಚ್ಚು ಹೆಚ್ಚು ಗಮನ ನೀಡಬೇಕಾಗುತ್ತದೆ ಎಂಬುದಾಗಿದೆ. ಅಲ್ಲಿ ಇನ್ನು ಮುಂದೆ ಹೆಚ್ಚು ಕಟ್ಟಡಗಳನ್ನು ಮತ್ತು ತರಗತಿ ಕೊಠಡಿಗಳನ್ನು ಕಟ್ಟಿಸುವ ಪ್ರಮೇಯ ಬರುವುದಿಲ್ಲ. ಹೆಚ್ಚು ಹೆಚ್ಚು ಶಿಕ್ಷಕರನ್ನು ನೇಮಿಸಿಕೊಳ್ಳುವ ಅಗತ್ಯ ಬೀಳುವುದಿಲ್ಲ. ಪ್ರಸ್ತುತ ಸರ್ಕಾರ ಇದರ ಬಗ್ಗೆ ಆಳವಾಗಿ ಯೋಚಿಸುತ್ತದೆ ಎಂದು ಭಾವಿಸಲಾಗಿದೆ. ಅಲ್ಲಿನ ಸುಧಾರಣೆಯ ಬಗ್ಗೆ ಅದು ಗಂಭೀರವಾಗಿ ಚಿಂತಿಸಬೇಕು. ನಮ್ಮ ಪ್ರಾಥಮಿಕ ಶಿಕ್ಷಣ ವ್ಯವಸ್ಥೆಯನ್ನು ಗಟ್ಟಿಯಾದ ನೆಲೆಯಲ್ಲಿ ನಿಲ್ಲಿಸದೆ ವಿಶ್ವಮಟ್ಟದ ವಿಶ್ವವಿದ್ಯಾಲಯಗಳನ್ನು ಕಟ್ಟುವುದು ಸಾಧ್ಯವಿಲ್ಲ ಮತ್ತು ನಮ್ಮಲ್ಲಿರುವ ಯುವಜನತೆಯೇನಿದೆ ಅದನ್ನು ಸಮರ್ಪಕವಾಗಿ ಉಪಯೋಗಿಸುವುದು ಸಾಧ್ಯವಾಗುವುದಿಲ್ಲ. ಈ ವಿಷಯದಲ್ಲಿ ಭಾರತವು ಅನುಕೂಲಕರ ಸ್ಥಾನದಲ್ಲಿದೆ ಎಂದು ಹೇಳ ಲಾಗುತ್ತಿದೆ. ದೇಶದ ಒಟ್ಟು ಜನಸಂಖ್ಯೆಯಲ್ಲಿ ದುಡಿಯುವ ವಯೋಮಾನದ ಜನರ ಪ್ರಮಾಣ ನಮ್ಮ ದೇಶದಲ್ಲಿ ಅತ್ಯಧಿಕವಾಗಿದೆ. ಇದನ್ನು ಸಂಪೂರ್ಣವಾಗಿ ಮತ್ತು ಪರಿಣಾಮಕಾರಿಯಾಗಿ ಬಳಸಿಕೊಳ್ಳುವುದಕ್ಕೆ ಶಿಕ್ಷಣ ವ್ಯವಸ್ಥೆಯು ಭದ್ರವಾಗಿರಬೇಕು. ಈ ದಿಶೆಯಲ್ಲಿ ನಾವು ಯೋಚಿಸುವ ಅಗತ್ಯವಿದೆ. ಉನ್ನತ ಶಿಕ್ಷಣದಲ್ಲಿ ಸರ್ಕಾರದ ಪಾತ್ರವನ್ನು ಮಿತಿಯಲ್ಲಿಟ್ಟುಕೊಂಡರೂ ನಡೆಯುತ್ತದೆ. ಆದರೆ ಪ್ರಾಥಮಿಕ ಶಿಕ್ಷಣದಲ್ಲಿ ಸರ್ಕಾರವು ಮಹತ್ವವಾದ ಪಾತ್ರವನ್ನು ನಿರ್ವಹಿಸಬೇಕಾಗುತ್ತದೆ. ಅಲ್ಲಿ ಖಾಸಗಿ ವಲಯದ ಪಾತ್ರವನ್ನು ಮಿತಿಯಲ್ಲಿಟ್ಟಿರಬೇಕು.

ಇನ್ನು ಆರೋಗ್ಯ ವ್ಯವಸ್ಥೆಯ ಬಗ್ಗೆ ಮತ್ತು ಜನರ ಆರೋಗ್ಯ ಸ್ಥಿತಿಗತಿ ಬಗ್ಗೆ ಅನೇಕ ಸಮಸ್ಯೆಗಳಿವೆ. ಈ ಕ್ಷೇತ್ರದಲ್ಲಿ ಸಾಕಷ್ಟು ಸಾಧನೆ ಮಾಡಲಾಗಿದೆ. ಆದರೆ ಶಿಶು ಮರಣ, ತಾಯಂದಿರ ಮರಣ, ಮಹಿಳೆಯರಲ್ಲಿನ ರಕ್ತಹೀನತೆ (ಅನೀಮಿಯಾ), ಮಕ್ಕಳಲ್ಲಿನ ಅಪೌಷ್ಟಿಕತೆ, ಹೆಣ್ಣುಮಕ್ಕಳಿಗೆ ಸಂಬಂಧಿಸಿದಂತೆ ವ್ಯಾಪಕವಾಗಿರುವ ಬಾಲ್ಯ ವಿವಾಹ, ಸಂತಾನೋತ್ಪತ್ತಿ

ಆರೋಗ್ಯ, ಸಾಂಕ್ರಾಮಿಕ ರೋಗಗಳು ಮುಂತಾದ ವಿಷಯದಲ್ಲಿ ನಾವು ಸಾಧಿಸಬೇಕಾಗಿರುವುದು ಬಹಳಷ್ಟಿದೆ. ಉದಾರೀಕರಣ, ಖಾಸಗೀಕರಣ, ಬಹುರಾಷ್ಟ್ರೀಕರಣ ಮುಂತಾದವುಗಳ ಹಿನ್ನೆಲೆಯಲ್ಲಿ ಹೈಟೆಕ್ ಆಸ್ಪತ್ರೆಗಳ ಬಗ್ಗೆ, ವೈದ್ಯಕೀಯ ಪ್ರವಾಸೋದ್ಯಮದ ಬಗ್ಗೆ, ಮನುಷ್ಯನ ದೇಹದ ಪ್ರತಿಯೊಂದು ಅಂಗದ ಬಗ್ಗೆ ವಿಶೇಷ ಆಸ್ಪತ್ರೆಗಳನ್ನು ತೆರೆಯುವುದರ ಬಗ್ಗೆ ಕೆಲಸ ಭರದಿಂದ ನಡೆದಿವೆ. ನಮ್ಮ ಗಾಮೀಣ ಪ್ರದೇಶದಲ್ಲಿರುವ ಮತ್ತು ನಗರಗಳ ಸ್ಲಮ್‌ಗಳಲ್ಲಿ ವಾಸಿಸುವವರಿಗೆ ಅಗತ್ಯವಾಗಿರುವುದು ಸಣ್ಣ-ಪುಟ್ಟ ರೋಗಗಳಿಗೆ ಕಡಿಮೆ ಖರ್ಚಿನಲ್ಲಿ ಅವರಿರುವ ಸ್ಥಳದಲ್ಲಿ ಆರೋಗ್ಯ ಸೇವೆ. ವೈದ್ಯಕೀಯ ಸೇವೆಯು ಬಡವರಿಗೆ ಎಟುಕಲಾಗದ ಸಂಗತಿಯಾಗಿ ಬಿಟ್ಟಿದೆ. ಇನ್ನು ಔಷಧಿ, ಮಾತ್ರೆಗಳು ಮುಂತಾದವುಗಳ ಬೆಲೆಗಳ ಬಗ್ಗೆ ಏನನ್ನು ಹೇಳದಿರುವುದೇ ವಾಸಿ. ಯಶಸ್ವಿನಿ ಯೋಜನೆಯು ಉತ್ತಮವಾಗಿ ಕೆಲಸ ಮಾಡುತ್ತಿದೆ. ಆದರೆ ಇದನ್ನು ಅನೇಕ ಖಾಸಗಿ ಆಸ್ಪತ್ರೆಗಳು ಹಣ ಮಾಡುವ ದಂಧೆಯನ್ನಾಗಿ ಪರಿವರ್ತಿಸಿ ಬಿಟ್ಟಿವೆ. ಈ ಬಗ್ಗೆ ಈಗ ಅಧಿಕಾರಕ್ಕೆ ಬಂದಿರುವ ಸರ್ಕಾರ ಎಚ್ಚರವಹಿಸಬೇಕು.

**ಗ್ರಾಮ ಪಂಚಾಯಿತಿ ಮಟ್ಟದಲ್ಲಿ 'ಆರೋಗ್ಯ ಆಂದೋಳನ'**

ಪ್ರತಿಯೊಂದು ಸಣ್ಣ-ಪುಟ್ಟ ರೋಗಗಳಿಗೆ, ಸೋಂಕುಗಳಿಗೆ, ಗಾಯಗಳಿಗೆ ಜನರು ವೈದ್ಯಕೀಯ ಸೇವೆಗಾಗಿ ನಗರಗಳಿಗೆ ಹೋಗುವ ವಾಡಿಕೆಯಿದೆ. ಇದನ್ನು ನಮ್ಮ ಸರ್ಕಾರ ತಪ್ಪಿಸಬೇಕು. ಅದಕ್ಕಾಗಿ ಪ್ರತಿ ಗ್ರಾಮ ಪಂಚಾಯಿತಿ ಮಟ್ಟದಲ್ಲಿ ಪ್ರತಿ ತಿಂಗಳಿಗೊಮ್ಮೆ ತಜ್ಞ ವೈದ್ಯರನ್ನು ಒಳಗೊಂಡ ವೈದ್ಯಕೀಯ ಶಿಬಿರಗಳನ್ನು ನಡೆಸುವ ಬೃಹತ್ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕು. ಇದನ್ನು ಆಂದೋಳನ ಮಾದರಿಯಲ್ಲಿ ನಡೆಸಬೇಕು. ಇದಕ್ಕಾಗಿ ಸರ್ಕಾರವು ಆಶಾ, ಆರೋಗ್ಯ ಸಹಾಯಕ, ಸಹಾಯಕಿಯರು, ಅಂಗನವಾಡಿ ಕಾರ್ಯ ಕರ್ತೆಯರ ನೆರವನ್ನು ಪಡೆಯಬಹುದು. ಆರೋಗ್ಯ ತಪಾಸಣೆಯ ಜೊತೆಗೆ ಅಲ್ಲಿ ಅಪೌಷ್ಟಿಕತೆ, ಅನೀಮಿಯಾ, ಸಮತೋಲನ ಆಹಾರ, ಮಕ್ಕಳ ಹಕ್ಕುಗಳು, ಮಹಿಳೆಯರ ಹಕ್ಕುಗಳು, ಕೌಟುಂಬಿಕ ದೌರ್ಜನ್ಯ ಮುಂತಾದವುಗಳ ಬಗ್ಗೆ ಪ್ರಾತ್ಯಕ್ಷಿಕಗಳ ಮೂಲಕ ಅರಿವು ಮೂಡಿಸಬಹುದು. ಇಂದು ಅಧಿಕಾರಕ್ಕೆ ಬಂದಿರುವ ಕಾಂಗ್ರೆಸ್ ಸರ್ಕಾರವು ಇದನ್ನು ಬಹಳ ಗಂಭೀರವಾಗಿ ಪರಿಗಣಿಸಬೇಕು. ಇದರಿಂದ ನಾಡಿನ ದಲಿತ ವರ್ಗಕ್ಕೆ ಮತ್ತು ಹಿಂದುಳಿದ ವರ್ಗಕ್ಕೆ ಅನುಕೂಲವಾಗುತ್ತದೆ. ಈ ವರ್ಗಗಳ ವರಮಾನವನ್ನು ಉಳಿಸುವ ಪರಿಣಾಮವನ್ನು ಸದರಿ ಕಾರ್ಯಕ್ರಮ ಉಂಟುಮಾಡುತ್ತದೆ. ಉಚಿತವಾಗಿ ಸಾಮಾನ್ಯ ಔಷಧಿಗಳನ್ನು ಇಲ್ಲಿ ವಿತರಿಸಬಹುದು.

**ಭಾಗ-೭**

**ದುಡಿಯುವ ವರ್ಗದ ಬವಣೆ**

ಕಳೆದ ಇಪ್ಪತ್ತು ವರ್ಷಗಳಿಂದ ನಡೆದಿರುವ ಉದಾರೀಕರಣ ಪರ್ವದಲ್ಲಿ ಅತ್ಯಂತ ನಿರ್ಲಕ್ಷ್ಯಕ್ಕೆ, ದಮನಕ್ಕೆ ದುಡಿಯುವ ವರ್ಗ ಒಳಗಾಗಿದೆ. ಈ ವರ್ಗವನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಮೊದಲನೆಯದು ಸಂಘಟಿತ ವಲಯದಲ್ಲಿ ಮತ್ತು ಅನೇಕ ಬಗೆಯ ಭದ್ರತೆಯಲ್ಲಿ ಕೆಲಸ ಮಾಡುತ್ತಿರುವ ವರ್ಗ. ಎರಡನೆಯದು ಅಸಂಘಟಿತ ಮತ್ತು ಯಾವ ಬಗೆಯ ಭದ್ರತೆಯೂ ಇಲ್ಲದೆ ದುಡಿಯುತ್ತಿರುವ ವರ್ಗ. ಸಂಘಟಿತವರ್ಗ ಗುತ್ತಿಗೆ ಪದ್ಧತಿಯಿಂದ, ಸರಕಾರಗಳ ಮಾಲಿಕ ಪರವಾದ ನೀತಿಗಳಿಂದ ತತ್ತರಿಸಿಹೋಗಿದೆ. ಎರಡನೆಯ ಗುಂಪಿನಲ್ಲಿ ನಮ್ಮ ದಲಿತರು ಮತ್ತು ಹಿಂದುಳಿದ ವರ್ಗಗಳ ದುಡಿಮೆಗಾರರು ನೆಲೆಸಿದ್ದಾರೆ. ಈ ವರ್ಗ ಪ್ರಸ್ತುತ ಅಧಿಕಾರಕ್ಕೆ ಬಂದಿರುವ ಸರ್ಕಾರದ ಬೆನ್ನೆಲು ಬಾಗಿದೆ. ಈ ವರ್ಗಗಳ ಬದುಕನ್ನು ಉತ್ತಮ ಪಡಿಸುವುದೆಂದರೆ ಅದು ಬಡತನವನ್ನು ಕಡಿಮೆ ಮಾಡಿದಂತಾಗುತ್ತದೆ. ಅಸಂಘಟಿತ ವಲಯ ದಲ್ಲಿ ದುಡಿಯುವ ವರ್ಗದಲ್ಲಿ ಮಹಿಳೆಯರ





ಪ್ರಮಾಣ ಶೇ. ೬೦ರಷ್ಟಾಗುತ್ತದೆ. ಅಂದರೆ ಈ ವರ್ಗದ ಅಭಿವೃದ್ಧಿಯೆಂದರೆ ಅದು ಮಹಿಳೆಯರ ಸಬಲೀಕರಣ ಕಾರ್ಯಕ್ರಮವೂ ಆಗುತ್ತದೆ. ಅಧ್ಯಯನಗಳು ಮತ್ತೆ ಮತ್ತೆ ದೃಢೀಕರಿಸುತ್ತಿರುವಂತೆ ಮತ್ತು ಜನಗಣತಿಯಲ್ಲಿ ಕಂಡುಬರುವಂತೆ ಎಲ್ಲಿ ದುಡಿಮೆಯು ಅಭದ್ರತೆಯಿಂದ ಕೂಡಿರುತ್ತದೆಯೋ, ಎಲ್ಲಿ ಕೂಲಿ ಕನಿಷ್ಠಮಟ್ಟದಲ್ಲಿರುತ್ತದೋ ಮತ್ತು ಎಲ್ಲಿ ಉದ್ಯೋಗ ತಾತ್ಪೂರ್ತಿಕವಾಗಿ ಇರುತ್ತದೋ ಅಲ್ಲಿ ಮಹಿಳೆಯರು ಬೃಹತ್ ಪ್ರಮಾಣದಲ್ಲಿರುತ್ತಾರೆ.

ದುಡಿಯುವ ವರ್ಗದ ಸುಧಾರಣೆ ಹೆಸರಿನಲ್ಲಿ ಅವರ ಬದುಕನ್ನು ತೀವ್ರ ಅಭದ್ರತೆಗೆ ಒಳಗಾಗುವಂತೆ ಮಾಡಲಾಗುತ್ತಿದೆ. ನಮ್ಮ ರಾಜ್ಯದಲ್ಲಿ ಈ ವರ್ಗವು ಇಂದು ಬದುಕನ್ನು ಕಟ್ಟಿಕೊಳ್ಳಲು ವಲಸೆಯನ್ನು ಅವಲಂಬಿಸಿದೆ. ಕಳೆದ ದಶಕದಲ್ಲಿ ನಮ್ಮ ರಾಜ್ಯದಲ್ಲಿ ಏರಿಕೆಯಾದ ನಿವ್ವಳ ಜನಸಂಖ್ಯೆ ೮೨.೮೦ ಲಕ್ಷ. ಅದರಲ್ಲಿ ನಗರ ಪ್ರದೇಶದ ಪಾಲು ಶೇ. ೬೮. ಈ ವರ್ಗಕ್ಕೆ ಸಂಬಂಧಿಸಿದ ಸಮಸ್ಯೆಯು ಎಲ್ಲಿ ಮಡುಗಟ್ಟಿಕೊಳ್ಳುತ್ತಿದೆ ಎಂಬುದು ಇದರಿಂದ ತಿಳಿದುಬರುತ್ತದೆ. ಇದಕ್ಕೆ ನಗರ ಪ್ರದೇಶಗಳ ಬೆಳವಣಿಗೆಗೆ ಪ್ರೋತ್ಸಾಹ ನೀಡುವುದರಿಂದ ಇದನ್ನು ನಿವಾರಿಸುವುದು ಸಾಧ್ಯವಿಲ್ಲ. ಬೆಂಗಳೂರು ಬೆಳೆದದ್ದು ಸಾಕು. ಗ್ರಾಮೀಣ ಪ್ರದೇಶದಿಂದ ಜನರು ತಂಡೋಪತಂಡವಾಗಿ ನಗರಗಳಿಗೆ ವಲಸೆ ಬರುವುದನ್ನು ತಡೆಯಬೇಕು. ಅದಕ್ಕೆ ಗ್ರಾಮೀಣ ಪ್ರದೇಶದಲ್ಲಿ ದುಡಿಯುವ ವರ್ಗಕ್ಕೆ ಬದುಕನ್ನು ಕಟ್ಟಿಕೊಳ್ಳುವುದು ಸಾಧ್ಯವಾಗಬೇಕು.

ಅತ್ಯಂತ ದುರದೃಷ್ಟದ ಸಂಗತಿಯೆಂದರೆ ನಮ್ಮ ಉನ್ನತ ಮತ್ತು ಮಧ್ಯಮ ವರ್ಗಗಳು ದುಡಿಯುವ ವರ್ಗವನ್ನು ಸೋಮಾರಿಗಳೆಂದು, ಮದ್ಯವ್ಯಸನಿ ಗಳೆಂದು, ಸರ್ಕಾರದ ಹಂಗಿನಲ್ಲಿ ಬದುಕುತ್ತಿರುವವರೆಂದು ದಿನ ಬೆಳಗಾದರೆ ಹೀಯಾಳಿಸುತ್ತಿರುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ – ಕೃಷಿಯಲ್ಲಿ ಕೂಲಿಯಾಳುಗಳೇ ದೊರೆಯುವುದು ದುರ್ಬಲವಾಗುತ್ತಿದೆ ಎಂದು ಹೇಳಲಾಗುತ್ತಿದೆ. ಇವೆಲ್ಲ ಉಳ್ಳವರ ಅಸೂಯಾಪರ ಮಾತುಗಳು. ನಮ್ಮ ದುಡಿಯುವ ವರ್ಗವು ಹಗಲು-ರಾತ್ರಿ, ಮಳೆಯಲ್ಲಿ, ಬಿಸಿಲಿನಲ್ಲಿ ದುಡಿಯದಿದ್ದರೆ ನಮ್ಮ ರಾಜ್ಯದಲ್ಲಿ ೨೪೦ ಲಕ್ಷ ಟನ್ನು ಆಹಾರ ಉತ್ಪಾದನೆಯಾಗುತ್ತಿತ್ತೇ ? ನಮ್ಮ ಥಳಥಳ ಹೊಳೆಯುವ ರಸ್ತೆಗಳನ್ನು, ಅಣೆಕಟ್ಟೆಗಳನ್ನು, ಗಗನಚುಂಬಿ ಕಟ್ಟಡಗಳನ್ನು ಕಟ್ಟಿದವರಾರು ? ನಮ್ಮ ಉನ್ನತ ಮತ್ತು ಮಧ್ಯಮ ವರ್ಗದ ವಾದವನ್ನು ಒಪ್ಪಿಕೊಂಡುಬಿಟ್ಟರೆ ನಮ್ಮ ದುಡಿಯುವ ವರ್ಗವು ಶಾಶ್ವತವಾಗಿ ಕೂಲಿಯಾಳು ಗಳಾಗಿ ಬಿದ್ದಿರಬೇಕು ಎಂದಾಗುತ್ತದೆ. ಇದು ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾದ ಸಂಗತಿ. ಆದ್ದರಿಂದ ಇಂದಿನ ಸರ್ಕಾರವು ಭೂರಹಿತ ದಿನಗೂಲಿ ದುಡಿಯುವ ವರ್ಗದ ಹಿತಾಸಕ್ತಿಯನ್ನು ತನ್ನ ಆದ್ಯತೆಯನ್ನಾಗಿ ಪರಿಗಣಿಸಬೇಕು. ಈ ದಿಶೆಯಲ್ಲಿ ಅದು ಕಾರ್ಯಪ್ರವೃತ್ತವಾಗುತ್ತದೆ ಎಂದು ಜನರು ನಂಬಿದ್ದಾರೆ. ಜನರ ನಂಬಿಕೆ ಯನ್ನು ಉಳಿಸಿಕೊಳ್ಳುವ ಹಾಗೆ ಮತ್ತು ಜನರ ಆಸೆ-ಆಕಾಂಕ್ಷೆಗಳಿಗೆ ಪ್ರತಿಸ್ಪಂದಿಸುವ ಹಾಗೆ ಆಡಳಿತ ವನ್ನು ನಡೆಸಬೇಕಾದ ಜವಾಬುದಾರಿ ಅದರ ಮೇಲಿದೆ.

**ಡಾ॥ ಟಿ. ಆರ್. ಚಂದ್ರಶೇಖರ**

ನಂ. ೩೪೦/೧, 'ವಚನ', ಸೊಸೈಟಿ ರಸ್ತೆ, ಅಮರಾವತಿ, ಹೊಸಪೇಟೆ – ೫೮೩ ೨೦೧



# ಸುದ್ದಿಯಲ್ಲಿ ಪ್ಲೂಟೋ

**ನಭಾವಲೋಕನ**

೧೯೩೦ರಲ್ಲಿ ಕ್ಲೈಡ್ ಟಾಮ್ ಬೋ ಹೊಸ ಚುಕ್ಕೆಯೊಂದನ್ನು ಗ್ರಹ ಎಂದು ಗುರುತಿಸಿದಾಗ ಖಗೋಳ ವಿಜ್ಞಾನಿಗಳಿಗೆ ಹೊಸ ಹುಮ್ಮಸ್ಸು ದೊರಕಿತು. ಒಂಭತ್ತನೆಯ ಗ್ರಹ ಯುರೇನಸ್ ಮತ್ತು ನೆಪ್ಚೂನ್ ಗ್ರಹಗಳೆರಡರ ಚಲನೆಯ ಸಣ್ಣ ವ್ಯತ್ಯಾಸಗಳನ್ನು ವಿವರಿಸಬಲ್ಲುದು ಎಂದು ಅವರ ನಿರೀಕ್ಷೆ. ಆದರೆ ಅದು ಸುಳ್ಳಾಯಿತು. ಪ್ಲೂಟೋ ಪುಟ್ಟ ಗ್ರಹ – ಯುರೇನಸ್, ನೆಪ್ಚೂನ್‌ಗಳಂತಹ ದೈತ್ಯಗಳನ್ನು ಕ್ಷೋಭೆಗೊಳಿಸುವಷ್ಟು ಶಕ್ತಿ ಅದಕ್ಕೆ ಇರಲಿಲ್ಲ. ಅದೇನೇ ಇರಲಿ ಒಂದು ಮೀಟರ್‌ನಷ್ಟು ಗಾತ್ರದ ದೂರದರ್ಶಕದಿಂದಲೂ ಪತ್ತೆ ಮಾಡಲು ಕಷ್ಟವಾಗುವ ಚುಕ್ಕೆ ಎನ್ನಬಹುದು. ಅದರ ಕಕ್ಷೆ ದೀರ್ಘಾಕಾರದ್ದು. ಆದ್ದರಿಂದ ಭೂಮಿಯಿಂದ ಅದರ ದೂರ ವ್ಯತ್ಯಾಸವಾಗುತ್ತಲೇ ಇರುತ್ತದೆ. ಗರಿಷ್ಠ ೭೫೦೦,೦೦೦,೦೦೦ ಕಿ.ಮೀ. ಕನಿಷ್ಠ ೪೨೯೦,೦೦೦,೦೦೦ ಕಿ.ಮೀ. ಈ ಸೊನ್ನೆಗಳನ್ನು ಅಳಿಸಿ ೭.೫ ಬಿಲಿಯನ್ ಮತ್ತು ೪.೨೯ ಬಿಲಿಯನ್ ಕಿ.ಮೀ. ಎನ್ನಬಹುದು. ಈಗ ಅದರ ದೂರ ೪.೭೯ ಬಿಲಿಯನ್ ಕಿ.ಮೀ. ಜುಲೈ ೨ ರಂದು ಅದರ ವಿಯುತಿ. ಅಂದರೆ ಅದರ ದೂರ ಭೂಮಿಯಿಂದ ಕನಿಷ್ಠ ೪.೮ ಬಿಲಿಯನ್ ಬದಲು ೪.೬೪ ಎನ್ನಬಹುದು. ಈ ವ್ಯತ್ಯಾಸದ ಕಾರಣ ಅದು ಪ್ರಖರವಾಗಿ ಕಾಣುವ ಸಂಭವ ಇಲ್ಲ.

ಇನ್ನೂ ಒಂದು ವಿಶೇಷವಿದೆ. ಪ್ಲೂಟೋದ ಕಕ್ಷೆ ಭೂಕಕ್ಷಾತಲಕ್ಕೆ ಓರೆಯಾಗಿದೆ. ಆದ್ದರಿಂದ ಅದು ಉಳಿದ ಗ್ರಹಗಳು ಮತ್ತು ಚಂದ್ರದ ನೇರಕ್ಕೆ ಬರುವುದು ವಿರಳ. ಈ ವರ್ಷ ಚಂದ್ರ ಅದರ ಮುಂದೆ ಹೋಗುವ ಅಪರೂಪದ ಆಚ್ಛಾದನೆಗಳು ನಡೆಯಲಿವೆ. ಈಗಾಗಲೇ ಏಪ್ರಿಲ್, ಮೇ, ಜೂನ್ ತಿಂಗಳುಗಳಲ್ಲಿ ನಡೆದಿವೆ. ಜುಲೈ ಮತ್ತು ಆಗಸ್ಟ್ ತಿಂಗಳುಗಳಲ್ಲಿಯೂ ನಡೆಯಲಿದೆ. ಆಚ್ಛಾದನೆಗಳಿಂದ ಕೆಲವೊಂದು ವಿಶೇಷ ವಿಷಯಗಳು ತಿಳಿಯುತ್ತವೆ. ಉದಾಹರಣೆಗೆ ಯುರೇನಸ್ ಗ್ರಹಕ್ಕೆ ಉಂಗುರಗಳಿವೆ ಎಂದು ಪತ್ತೆಯಾದದ್ದೇ ಹೀಗೆ. ಈಗ ದೊಡ್ಡ ದೊಡ್ಡ ದೂರದರ್ಶಕಗಳು ಚಂದ್ರ ಪ್ಲೂಟೋವನ್ನು ಮರೆ ಮಾಡುವ ಸಂದರ್ಭದಲ್ಲಿ ಹೊಸ ಉಪಗ್ರಹಗಳನ್ನು ಕಂಡು ಹಿಡಿಯಬಹುದು (ಈಗಾಗಲೇ ಐದು ಪತ್ತೆಯಾಗಿವೆ). ಇದು ಬರಿ ಕಣ್ಣಿಗೆ ಕಾಣುವ ನೋಟ ಅಲ್ಲ. ಸಣ್ಣ ದೂರ ದರ್ಶಕಗಳಿಗೂ ನಿಲುಕುವುದಿಲ್ಲ. ಹೊಸ ಸುದ್ದಿಗೆ ಮುನ್ಸೂಚನೆ ಅಷ್ಟೇ.



೧೬ರ ಸಂಜೆ ಚಿತ್ರಾ ಮತ್ತು ಶನಿ ನಡುವೆ ಅರ್ಧ ಚಂದ್ರ

ಸಂಜೆಯ ಆಕಾಶದಲ್ಲಿ ಎರಡು ಗ್ರಹಗಳಿವೆ. ಶುಕ್ರ ಮತ್ತು ಶನಿ. ಪಶ್ಚಿಮದಲ್ಲಿ ಕಾಣುವ ಶುಕ್ರನನ್ನು ಗುರುತಿಸಲು ಏನೂ ಕಷ್ಟಪಡಬೇಕಾಗಿಲ್ಲ. ೧೧ ರ ಸಂಜೆ ರೇಖಾ ಚಂದ್ರ ಇದರ ಪಕ್ಕದಲ್ಲಿಯೇ ಕಾಣುವುದು. ಶನಿಗ್ರಹವನ್ನು ಗುರುತಿಸಲು ೧೬ರ ಸಂಜೆ ಸೂಕ್ತ ಸಮಯ. ಅರ್ಧ ಚಂದ್ರನ ಎರಡೂ ಪಕ್ಕದಲ್ಲಿ ಒಂದೊಂದು ಚುಕ್ಕೆಗಳಿವೆ. ಮಿನುಗುವ ಚುಕ್ಕೆ ಚಿತ್ರಾ ನಕ್ಷತ್ರ. ಮಿನುಗದ ಚುಕ್ಕೆಯೇ ಶನಿ.

ತಿಂಗಳ ಕೊನೆಗೆ ಬುಧ ಗ್ರಹವೂ ಸಂಜೆ ಕಾಣುವುದು. ಪಶ್ಚಿಮದಲ್ಲಿ ದಿಗಂತದ ಅಂಚಿನಲ್ಲಿ ಕಾಣುವುದು.

ಮಂಗಳ ಮತ್ತು ಗುರುಗ್ರಹಗಳು ಮುಂಜಾವು ಪೂರ್ವದಲ್ಲಿ ಕಾಣುವುವು. ೨೨ ರಂದು ಅತಿ ಸಮೀಪದಲ್ಲಿ ಒಂದನ್ನೊಂದು ಹಾದು ಹೋಗುವುವು.

ಸಂಜೆಯ ಆಕಾಶದಲ್ಲಿ ನೆತ್ತಿಯ ಮೇಲೆ ಕಾಣುವ ಎರಡು ಚುಕ್ಕೆಗಳಲ್ಲಿ ಒಂದು ಚಿತ್ರಾ ಇನ್ನೊಂದು ಶನಿ. ಇವೆರೆಡಕ್ಕೆ ಸ್ವಲ್ಪ ಉತ್ತರದಲ್ಲಿರುವ ಕೆಂಪು ನಕ್ಷತ್ರವೇ ಸ್ವಾತಿ. ಶುಕ್ರಗ್ರಹದಿಂದ ನೆತ್ತಿಯವರೆಗೆ ವಿಸ್ತರಿಸಿರುವ ಪುಂಜವೇ ಸಿಂಹ. ಆಗ್ನೇಯ ದಿಕ್ಕಿನಲ್ಲಿ ಇರುವುದು ವೃಶ್ಚಿಕ ರಾಶಿ – ಆಕಾಶ ಶುಭ್ರವಾಗಿರುವ ಸಂದರ್ಭದಲ್ಲಿ ಇದರ ಸೌಂದರ್ಯವನ್ನು ಆಸ್ವಾದಿಸಬಹುದು. ಇದರ ಉತ್ತರಕ್ಕೆ ಉರಗಧರ (ಒಫಿಯೂಕಸ್), ಭೀಮ (ಹರ್ ಕ್ಯುಲಿಸ್) ಕಾಣುತ್ತದೆ. ಪೂರ್ವದ ಅಂಚಿನಲ್ಲಿ ಗರುಡ (ಅಕ್ವಿಲಾ) ಉದಯಿಸಿರುತ್ತದೆ. ಅದರ ದಕ್ಷಿಣಕ್ಕೆ ಧನು ರಾಶಿ ಇದೆ. ಉತ್ತರದಲ್ಲಿ ಸಪ್ತರ್ಷಿಮಂಡಲ ಸ್ಪಷ್ಟವಾಗಿ ಕಾಣುತ್ತದೆ.

ದೀರ್ಘವೃತ್ತ ಆಕಾರದ ಪಥದಲ್ಲಿ ಚಲಿಸುವ ಭೂಮಿ ಕೆಲವೊಮ್ಮೆ ಸೂರ್ಯನಿಗೆ ಅತಿ ಸಮೀಪವಾಗಿ ಕೆಲವೊಮ್ಮೆ ಅತಿ ದೂರವಾಗಿ ಇರುತ್ತದೆ. ಜುಲೈ ೫ರಂದು ಅಂತರ ಗರಿಷ್ಠವಾಗಿರುತ್ತದೆ.

೧೯೯೨ರಲ್ಲಿ ಬಂದು ಹೋದ ಸ್ವಿಫ್ಟ್ – ಟಟಲ್ ಧೂಮಕೇತುವಿನ ತುಣುಕುಗಳು ಪ್ರತಿ ವರ್ಷದ ಆಗಸ್ಟ್‌ನಲ್ಲಿ ಉಲ್ಕೆಗಳಾಗಿ ಬೀಳುತ್ತವೆ. ಇದರ ಚಟುವಟಿಕೆ ಜುಲೈ ಕೊನೆಯ ವಾರದಲ್ಲಿಯೇ ಪ್ರಾರಂಭವಾಗುವುದು. ಮುಂಜಾವಿನಲ್ಲಿ ಈಶಾನ್ಯ ದಿಕ್ಕಿನಿಂದ ಹೊರಟಂತೆ ಉಲ್ಕೆಗಳು ಕಾಣುವುವು.

**ಜುಲೈ ತಿಂಗಳ ಖಗೋಳ ದಿನಚರಿ:**

೨ ಪ್ಲೂಟೋ ಗ್ರಹದ ವಿಯುತಿ
೫ ಭೂಮಿ – ಸೂರ್ಯರ ಅಂತರ ಗರಿಷ್ಠ
೬ ಮಂಗಳ – ಚಂದ್ರ ಜೋಡಿ*
೭ ಚಂದ್ರ – ಭೂಮಿ ನಡುವೆ ಗರಿಷ್ಠ ಅಂತರ
೮ ಅಮಾವಾಸ್ಯೆ ೧೨:೪೪ ಕ್ಕೆ
೯ ಶನಿಗ್ರಹದ ಹಿನ್ನಡೆ ಮುಕ್ತಾಯ; ಬುಧ ಗ್ರಹದ ಯುತಿ
೧೧ ಶುಕ್ರ – ಚಂದ್ರ ಜೋಡಿ*
೧೬ ಚಾಂದ್ರಮಾಸದ ಮೊದಲ ಪಾದ; ಶನಿ, ಚಿತ್ರಾ ನಡುವೆ ಅರ್ಧ ಚಂದ್ರ
೨೧ ಚಂದ್ರ – ಭೂಮಿ ಅಂತರ ಕನಿಷ್ಠ
೨೨ ಮಂಗಳ – ಗುರು ನಡುವೆ ಕನಿಷ್ಠ ಕೋನ * ಹುಣ್ಣಿಮೆ ೨೩:೪೬ಕ್ಕೆ
೨೯ ಚಾಂದ್ರಮಾಸದ ಕೊನೆಯ ಪಾದ
೩೦ ಬುಧ ಗ್ರಹದ ಗರಿಷ್ಠ ಕೋನೋನ್ನತಿ*

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

**ಡಾ|| ಬಿ. ಎಸ್. ಶೈಲಜಾ**, ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೧




# ಹೊಸ ಸರ್ಕಾರದ ಮುಂದಿರುವ ಸವಾಲುಗಳು

**ಪಾ**ಕಿಸ್ತಾನದಲ್ಲಿ ಮೊದಲ ಬಾರಿಗೆ ನಾಗರಿಕ ಸರಕಾರದ ಆಶ್ರಯದಲ್ಲಿ ಸಾರ್ವತ್ರಿಕ ಚುನಾವಣೆಗಳು ನಡೆದು ಹೊಸ ಸರಕಾರ ಅಧಿಕಾರಕ್ಕೆ ಬಂದಿದೆ. ಮೇ ತಿಂಗಳ ಮೊದಲ ವಾರದಲ್ಲಿ ಪಾಕಿಸ್ತಾನ ಪೀಪಲ್ಸ್ ಪಾರ್ಟಿ ನೇತೃತ್ವದ ಸರಕಾರ ನಡೆಸಿದ ಚುನಾವಣೆಗಳಲ್ಲಿ ಶೇ. ೫೫.೦೨ರಷ್ಟು ಮತದಾರರು ಭಾಗವಹಿಸಿದ್ದುದು ಒಂದು ದಾಖಲೆಯೆ. ಹಾಗೆಯೆ ಮೊದಲ ಬಾರಿಗೆ ನಾಗರಿಕ ಸರಕಾರವೊಂದು ತನ್ನ ಐದು ವರ್ಷಗಳ ಅಧಿಕಾರಾವಧಿಯನ್ನು ಪೂರೈಸಿದುದು ಒಂದು ದಾಖಲೆ. ಅದೇ ಬಗೆಯಲ್ಲಿ ನವಾಜ್ ಷರೀಫ್ ನೇತೃತ್ವದ ಪಾಕಿಸ್ತಾನ ಮುಸ್ಲಿಮ್ ಲೀಗ್ ಪಕ್ಷ ಆಡಳಿತಾರೂಢ ಪಾಕಿಸ್ತಾನ ಪೀಪಲ್ಸ್ ಪಾರ್ಟಿಯನ್ನು ಚುನಾವಣೆಗಳಲ್ಲಿ ಮೂಲೆಗೊತ್ತಿ ಅತ್ಯಧಿಕ ಸ್ಥಾನಗಳನ್ನು ಪಡೆದು ಅಧಿಕಾರಕ್ಕೇರಿರುವುದೂ ಕೂಡ ದಾಖಲೆಯೇ. ಪಾಕಿಸ್ತಾನದ ಇತಿಹಾಸದಲ್ಲಿ ನಾಗರಿಕ ಸರಕಾರದಿಂದ ಅಧಿಕಾರದ ಹಸ್ತಾಂತರ ದೇಶದಲ್ಲಿ ಪ್ರಜಾಪ್ರಭುತ್ವ ಪರಂಪರೆ ಬೆಳೆಯುವ ಸೂಚನೆಗೆ ನಾಂದಿಯಾಗಿದೆ. ಎರಡು ಕಾರಣಗಳಿಂದ ಇದನ್ನು ಪುಷ್ಟೀಕರಿಸಬಹುದು. ಮೊದಲನೆಯದು ಮಿಲಿಟರಿ ಹಸ್ತಕ್ಷೇಪವಿಲ್ಲದೆ ಚುನಾವಣೆಗಳು ನಡೆದದ್ದು. ಎರಡನೆಯದು ಉಗ್ರಗಾಮಿಗಳ ಉಪಟಳ ಹಾಗೂ ತಾಲಿಬಾನ್‌ಗಳು (ತೆಹ್ರೀಕ್–ಎ–ತಾಲಿಬಾನ್ ಪಾಕಿಸ್ತಾನ ಸಂಘಟನೆ) ನೀಡಿದ್ದ ದಾಳಿಗಳ ಎಚ್ಚರಿಕೆಯನ್ನು ನಿರ್ಲಕ್ಷಿಸಿ ಜನ ಮತಗಟ್ಟೆಗೆ ಬಂದು ಮತ ಚಲಾಯಿಸಿದ್ದು.

ಪಾಕಿಸ್ತಾನ ಮುಸ್ಲಿಮ್ ಲೀಗ್‌ನ ನಾಯಕ ನವಾಜ್ ಷರೀಫ್ ಪ್ರಧಾನಿಯಾಗಿ ಅಧಿಕಾರ ಸ್ವೀಕರಿಸಿದ್ದಾರೆ. ಪಾಕಿಸ್ತಾನದ ರಾಜಕೀಯದಲ್ಲಿ ಇವರದು ಹೊಸಮುಖವೇನಲ್ಲ. ೧೯೯೦ರ ದಶಕದಲ್ಲಿ ಎರಡು ಸಲ ಪ್ರಧಾನಿಯಾಗಿದ್ದಾತ ಮತ್ತು ೧೯೮೦ರ ದಶಕದಲ್ಲಿ ಹಣಕಾಸಿನ ಸಚಿವರಾಗಿ, ಪಾಕಿಸ್ತಾನದ ಅತಿಮುಖ್ಯ ಪ್ರಾಂತ ಪಂಜಾಬ್‌ನ ಮುಖ್ಯಮಂತ್ರಿಯಾಗಿ ಸೇವೆ ಸಲ್ಲಿಸಿದ್ದಾತ. ಅವರ ಮುಂದಿರುವ ಸವಾಲುಗಳು ಬೆಟ್ಟದಷ್ಟು. ಅದನ್ನು ಹೇಗೆ ನಿವಾರಿಸಿಯಾರು ಎನ್ನುವುದನ್ನು ಕಾದು ನೋಡಬೇಕಾಗಿದೆ. ಸದ್ಯದ ಪರಿಸ್ಥಿತಿಯಲ್ಲಿ ಪಾಕಿಸ್ತಾನದ ಎಡಪಂಥೀಯರ ಅಭಿಪ್ರಾಯದಲ್ಲಿ ನವಾಜ್ ಷರೀಫ್ ಜನತೆ ಭರವಸೆ ಇರಿಸಿಕೊಳ್ಳಬಹುದಾದ ವ್ಯಕ್ತಿ. ಶ್ರೀಮಂತ ಕುಟುಂಬದಿಂದ ಬಂದಿರುವ ಇವರು ಮೂಲತಃ ಉದ್ದಿಮೆದಾರ. ೧೯೭೦ರಲ್ಲಿ ಇವರ ಕುಟುಂಬಕ್ಕೆ ಸೇರಿದ್ದ ಲೋಹೋದ್ಯಮವನ್ನು ಪಿಪಿಪಿ (ಪಾಕಿಸ್ತಾನ ಪೀಪಲ್ಸ್ ಪಾರ್ಟಿ) ಸರಕಾರ ರಾಷ್ಟ್ರೀಕರಣ ಮಾಡಿತ್ತು. ಷರೀಫರ ಪ್ರಯತ್ನದಿಂದ ಅದು ಮರಳಿ ಕುಟುಂಬಕ್ಕೆ ಬಂದಿತು. ಆಗ ಅವರು ಮಿಲಿಟರಿ ಸರ್ವಾಧಿಕಾರಿಯ ಬೆಂಬಲಿಗರಾಗಿದ್ದರು. ೧೯೯೦–೧೯೯೩ರಲ್ಲಿ ಪ್ರಧಾನಿಯಾಗಿದ್ದ ಷರೀಫ್ ಪಾಕಿಸ್ತಾನವನ್ನು ಇಸ್ಲಾಮಿಕ್ ಕ್ಯಾಲಿಫೇಟ್ ಆಗಿ ಮಾಡಲು ಮತ್ತು ಷರಿಯ ನಿಯಮಗಳನ್ನು ಜಾರಿಗೆ ತರಲು ಪ್ರಯತ್ನಿಸಿದ್ದರು. ೧೯೯೭ರಲ್ಲಿ ಪ್ರಧಾನಿಯಾದಾಗ ಜನರಲ್ ಮುಷರಫ್‌ನನ್ನು ಅಧಿಕಾರಕ್ಕೆ ತಂದದ್ದೂ ಮತ್ತೆ ಆತನಿಂದಲೇ ಪದಚ್ಯುತರಾದದ್ದು ಇವರೆ. ಭಾರತದ ಅಂದಿನ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿಯವರನ್ನು ಲಾಹೋರಿನಲ್ಲಿ ಭೆಟ್ಟಿಯಾಗಿ ಮಾತುಕತೆ ನಡೆಸಿದ್ದು ಈತನೆ. ಅನಂತರ ಕಾರ್ಗಿಲ್ ಯುದ್ಧ ನಡೆದದ್ದೂ ಈತನ ಅಧಿಕಾರಾವಧಿಯಲ್ಲೇ. ಪದಚ್ಯುತರಾದ ಷರೀಫ್ ಅವರನ್ನು ಬಂಧಿಸಿದ ಜನರಲ್ ಮುಷರಫ್ ಆತನನ್ನು ಪಾಕಿಸ್ತಾನದಿಂದ ಹೊರಹಾಕಿದ. ಏಳು ವರ್ಷ ಕಾಲ ದೇಶಭ್ರಷ್ಟನಾಗಿ ಸೌದಿ ಅರೇಬಿಯ ಮತ್ತು ಇಂಗ್ಲೆಂಡಿನಲ್ಲಿ ನೆಲೆಸಿದ್ದ ಈತ ದೇಶಕ್ಕೆ ಮರಳಿದ್ದು ೨೦೦೭ರಲ್ಲಿ. ಆನಂತರ ಜರುಗಿದ ಚುನಾವಣೆಗಳಲ್ಲಿ ಬಹುಮತ ದೊರಕದೇ ಹೋದದ್ದರಿಂದ ವಿರೋಧ ಪಕ್ಷದ ನಾಯಕರಾಗಿದ್ದರು. ಪಿಪಿಪಿ ಅಧಿಕಾರದ ಐದು ವರ್ಷಗಳಲ್ಲಿ ಸರಕಾರವನ್ನು ಪದಚ್ಯುತಗೊಳಿಸಲು ಸೇನೆಯ ಜೊತೆ ಕೈಜೋಡಿಸದೇ ಇದ್ದದ್ದು ಷರೀಫರ ಬದಲಾದ ಧೋರಣೆಗೆ ಸಾಕ್ಷಿ ಎನ್ನಬಹುದು. ನಾನು ಬದಲಾಗಿದ್ದೇನೆ. ಕಾರಾಗೃಹವಾಸ ಮತ್ತು ಅನ್ಯದೇಶಗಳಲ್ಲಿ ಅಲೆದಾಟದಿಂದ ಪಾಠ ಕಲಿತಿದ್ದೇನೆ ಎಂದು ಅವರೇ ಹೇಳಿಕೊಂಡಿದ್ದಾರೆ. ಮುಂದಿನ ದಿನಗಳಲ್ಲಿ ಅವರ ನಡೆ ಅದನ್ನು ಸಾಬೀತುಗೊಳಿಸಬೇಕು. ಬಲಪಂಥೀಯ, ಇಸ್ಲಾಮಿಕ್‌ವಾದಿಯಾದ ಈತ ಎಷ್ಟರಮಟ್ಟಿಗೆ ಪಾಕಿಸ್ತಾನದಲ್ಲಿ ಜನತಂತ್ರದ ಅಡಿಪಾಯ ಭದ್ರಗೊಳಿಸಲು, ದೇಶದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು, ನೆರೆಯ ದೇಶಗಳೊಂದಿಗೆ ಸಂಬಂಧಗಳನ್ನು ಕುದುರಿಸಲು ಕ್ರಮ ವಹಿಸುತ್ತಾರೆ ಎನ್ನುವುದರ ಮೇಲೆ ನಿರೀಕ್ಷೆಗಳು ಎಲ್ಲವೂ ಅವಲಂಬಿತವಾಗಿವೆ.

ಪಾಕಿಸ್ತಾನದ ಇತಿಹಾಸದಲ್ಲಿ ನಾಗರಿಕ ಸರ್ಕಾರದ ಆಡಳಿತಕ್ಕಿಂತ ಮಿಲಿಟರಿ ಸರ್ವಾಧಿಕಾರಿ ಆಡಳಿತವೇ ಹೆಚ್ಚು. ಅರವತ್ತಾರು ವರ್ಷಗಳ ಅದರ ಅಸ್ತಿತ್ವದಲ್ಲಿ

ನಲವತ್ತಕ್ಕೂ ಹೆಚ್ಚುಕಾಲ ಮಿಲಿಟರಿ ಆಡಳಿತ ಇತ್ತು. ನಾಗರಿಕ ಸರಕಾರ ಮಧ್ಯೆ ಮಧ್ಯೆ ಎರಡು ಮೂರು ವರ್ಷಗಳ ಆಡಳಿತ ನಡೆಸಿದ್ದುವು ಅಷ್ಟೆ. ಹಾಗಾಗಿ ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವ ಬೇರೂರಲು ಅವಕಾಶವೇ ಲಭಿಸಲಿಲ್ಲ. ಈ ದೇಶವು ಅಸ್ತಿತ್ವಕ್ಕೆ ಬಂದದ್ದೇ ಅಸಹಜವಾಗಿ. ಮತಧರ್ಮದ ಆಧಾರದ ಮೇಲೆ ದೇಶವಿಭಜನೆ ಮಾಡಿದ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ತರಾತುರಿಯಲ್ಲಿ ಪಾಕಿಸ್ತಾನ ಸ್ಥಾಪಿಸಿದರು. ಇದರಿಂದಾದ ಅನಾಹುತ, ಪಂಜಾಬ್, ಬಂಗಾಳ ವಿಭಜನೆಯಿಂದಾಗಿ ಕೋಡಿ ಹರಿದ ನೆತ್ತರು, ಲಕ್ಷಾಂತರ ಮಂದಿ ನಿರಾಶ್ರಿತರು, ಸಂಭವಿಸಿದ ನಷ್ಟ, ಸಾವು–ನೋವುಗಳ ಗಾಯ ಎರಡೂ ದೇಶಗಳಲ್ಲಿ ಈಗಲೂ ಮಾಯ್ದಿಲ್ಲ. ಹಾಗೆ ಹಿಂಸಾಚಾರದಲ್ಲಿ ಅಸ್ತಿತ್ವಕ್ಕೆ ಬಂದ ಪಾಕಿಸ್ತಾನ ಉದ್ದಕ್ಕೂ ಹಿಂಸೆಯನ್ನೇ ಅನುಭವಿಸಿದೆ ಎನ್ನಬೇಕು. ಈಗಲೂ ದೇಶ ಇಸ್ಲಾಮಿಕ್ ತೀವ್ರವಾದಿಗಳ ಮತ್ತು ತಾಲಿಬಾನ್‌ಗಳ ಉಪಟಳವನ್ನು ಅನುಭವಿಸುತ್ತಿದೆ. ಅಸ್ತಿತ್ವಕ್ಕೆ ಬಂದ ಕಾಲು ಶತಮಾನದೊಳಗೇ ಮತ್ತೊಂದು ವಿಭಜನೆಯನ್ನು ಕಂಡ ದೇಶ ಅದು. ತಾಯ್ನಾಡಿನಿಂದ ದೂರದಲ್ಲಿದ್ದ ಪೂರ್ವ ಪಾಕಿಸ್ತಾನ ಸ್ವತಂತ್ರ ರಾಷ್ಟ್ರ ಬಂಗ್ಲಾ ದೇಶವಾಗಿ ಹೊಮ್ಮಿದ್ದು ಈಗ ಇತಿಹಾಸ.

ಸ್ವತಂತ್ರ ರಾಷ್ಟ್ರವಾಗಿ ಸ್ಥಾಪನೆಗೊಂಡ ಪಾಕಿಸ್ತಾನ ಪ್ರಾರಂಭದಿಂದಲೂ ಬ್ರಿಟಿಷ್ ಮತ್ತು ಅಮೆರಿಕನ್ ಸಾಮ್ರಾಜ್ಯಶಾಹಿಗಳ ಆಡುಂಬೊಲ. ಶೀತಯುದ್ಧದ ಕಾಲದಲ್ಲಿ ಅಮೆರಿಕದ ಕಮ್ಯುನಿಸಮ್ ವಿಸ್ತರಣೆಯನ್ನು ತಡೆಯುವ ರಣತಂತ್ರದಲ್ಲಿ ಪಾಕಿಸ್ತಾನ ಸಹಭಾಗಿ. ಆಯಕಟ್ಟಿನ ಸ್ಥಳದಲ್ಲಿ, ಎಂದರೆ ಅಫ್ಘಾನಿಸ್ತಾನ, ಸೋವಿಯೆತ್ ಒಕ್ಕೂಟ ಮತ್ತು ಚೀಣಾಗಳ ಗಡಿಗಳಿಗೆ ಸಾಮೀಪ್ಯ ಹೊಂದಿದ್ದ ಪಾಕಿಸ್ತಾನ ಸಾಮ್ರಾಜ್ಯಶಾಹಿಗಳಿಗೆ ಗಟ್ಟಿನೆಲೆ. ೧೯೫೦ರ ದಶಕದಲ್ಲಿ ಬ್ರಿಟನ್ ಮತ್ತು ಅಮೆರಿಕಗಳು ಹೊಸೆದ ಮಿಲಿಟರಿ ಕೂಟಗಳಲ್ಲಿ ಪಾಕಿಸ್ತಾನಕ್ಕೆ ಪ್ರಮುಖ ಸ್ಥಾನ. ಆಗ ಈ ಭೂಭಾಗದಲ್ಲಿ ಸಮಾಜವಾದಿ ದೇಶಗಳು ಮತ್ತು ಹೊಸದಾಗಿ ಸ್ವತಂತ್ರಗೊಂಡ ದೇಶಗಳ ಮೇಲೆ ನಿಗಾ ಇರಿಸಲು ಸ್ಥಾಪನೆಗೊಂಡಿದ್ದ 'ಸೆಂಟೋ' ಮತ್ತು 'ಸಿಯಾಟೊ' ಕೂಟಗಳು ಈಗ ಇಲ್ಲ. ಆದರೂ ಪಾಕಿಸ್ತಾನ ಈಗಲೂ ಅಮೆರಿಕದ ಪ್ರಾಮುಖ್ಯವಾದ ಸೈನಿಕನೆಲೆ ಮತ್ತು ನಂಬಿಕೆಯ ನಿಷ್ಠಾವಂತ ಅನುಯಾಯಿ. ಕೋಟಿಗಟ್ಟಲೆ ಡಾಲರುಗಳನ್ನು, ಶಸ್ತ್ರಾಸ್ತ್ರಗಳನ್ನೂ ಹರಿಸಿರುವ ಅಮೆರಿಕಾಗೆ ಪಾಕಿಸ್ತಾನ ಆಶ್ರಿತ ರಾಷ್ಟ್ರ. ಅಮೆರಿಕ ದೇಶದ ಸಾರ್ವಭೌಮತ್ವವನ್ನು ಅತಿಕ್ರಮಿಸಿದರೂ ಏನೂ ಮಾಡಲಾಗದಂಥ ಸ್ಥಿತಿ ಈಗಲೂ. ಪಾಕಿಸ್ತಾನದಲ್ಲಿ ಅಡಗಿದ್ದ ಭಯೋತ್ಪಾದಕ ಒಸಾಮಾ ಬಿನ್ ಲಾಡೆನ್ ಮೇಲೆ ದಾಳಿ ನಡೆಸಿ ಹತ್ಯೆ ಮಾಡಿದ್ದು, ತಾಲಿಬಾನ್ ಉಗ್ರಗಾಮಿಗಳನ್ನೂ ಹತ್ತಿಕ್ಕಲು ನಡೆಸುತ್ತಿರುವ ಸ್ವತಶ್ಚಲಿಡ್ರೋನ್ ದಾಳಿ ಅದಕ್ಕೆ ಉದಾಹರಣೆ. ಅಧಿಕಾರಸ್ಥ ಪ್ರಧಾನಿ ನವಾಜ್ ಷರೀಫ್ ಡ್ರೋನ್ ದಾಳಿ ನಿಲ್ಲಿಸುವಂತೆ ಕರೆ ನೀಡಿದ್ದಾರೆ. ಅಮೆರಿಕ ಕೇಳುತ್ತದೆಯೇ? ಇಂದಿನ



ಆರ್ಥಿಕ ಪರಿಸ್ಥಿತಿ ಗಮನಿಸಿದರೆ ಅಮೆರಿಕದ ಮೇಲೆ ಅವಲಂಬನೆಯಿಂದ ಪಾಕಿಸ್ತಾನ ತಪ್ಪಿಸಿಕೊಳ್ಳಲಾಗದು. ಮತ್ತೆ ಪಾಕಿಸ್ತಾನದ ಸೇನಾನಿಗಳು ಯಾವತ್ತೂ ಅಮೆರಿಕದ ಪರವಾಗಿದ್ದಾರೆ. ಅವರನ್ನು ಮೀರಿ ಹೋಗುವುದು ನಾಗರಿಕ ಸರಕಾರಕ್ಕೆ ಸಾಧ್ಯವಿಲ್ಲದ ಪರಿಸ್ಥಿತಿ ಇದೆ. ಪಟ್ಟಭದ್ರ ಹಿತಾಸಕ್ತಿಗಳು ಪಾಕಿಸ್ತಾನದ ಸೇನೆಯಲ್ಲಿ ಬೇರೂರಿಬಿಟ್ಟಿವೆ. ಭಾರತದೊಂದಿಗೆ ಸಂಬಂಧಗಳನ್ನು ಸುಧಾರಿಸುವ ಬಗ್ಗೆ ನವಾಜ್ ಷರೀಫ್ ವ್ಯಕ್ತಗೊಳಿಸಿದ ಆಶಯಕ್ಕೆ ಸೇನಾಧಿಕಾರಿಗಳು ಆತುರಬೇಡ ಈ ವಿಷಯದಲ್ಲಿ ಎಂದು ಈಗಾಗಲೇ ಎಚ್ಚರಿಸಿರುವುದನ್ನು ಗಮನಿಸಬೇಕು. ನವಾಜ್ ಷರೀಫರ ಪಕ್ಷದ ಬೆಂಬಲಿಗರಲ್ಲಿ ಹೆಚ್ಚು ಮಂದಿ ಮೂಲಭೂತವಾದಿಗಳೆನ್ನುವುದನ್ನು ಮರೆಯುವಂತಿಲ್ಲ.

ಭಾರತದ ಮಟ್ಟಿಗೆ ಪಾಕಿಸ್ತಾನದಲ್ಲಿ ಜನತಂತ್ರ ಸರಕಾರದ ಸ್ಥಾಪನೆ ಸ್ವಾಗತಾರ್ಹ. ಜನಬೆಂಬಲದಿಂದ ಅಧಿಕಾರಕ್ಕೇರಿರುವವರೊಂದಿಗೆ ವ್ಯವಹರಿಸುವುದು ಸುಲಭ. ಆದರೆ ಅನಿರೀಕ್ಷಿತವಾದ ಬೆಳವಣಿಗೆಯನ್ನೋ ಪವಾಡಸದೃಶವಾದ ಬೆಳವಣಿಗೆಯನ್ನೋ ಸಂಬಂಧಗಳ ಸುಧಾರಣೆಯಲ್ಲಿ ಅಪೇಕ್ಷಿಸಲಾಗದು. ಕಳೆದ ಐದು ವರ್ಷಗಳಲ್ಲಿ ನಾಗರಿಕ ಆಡಳಿತ ವಿದ್ದಾಗ್ಯೂ ಹೇಳಿಕೊಳ್ಳುವಂಥ ಪ್ರಗತಿ ಏನೂ ಸಾಧ್ಯವಾಗಲಿಲ್ಲ. ಇದುವರೆಗೆ ನಡೆದಿರುವ ಮಾತುಕತೆ ಮಾತುಕತೆಗಳಾಗಿಯೇ ಉಳಿದಿವೆ. ಮೂರು ಯುದ್ಧಗಳು, ಕೊಸರಿಗೆ ಕಾರ್ಗಿಲ್ ಯುದ್ಧ ಎರಡೂ ದೇಶಗಳ ಮಧ್ಯೆ ಆಗಿದೆ. ಆಗಾಗ್ಗೆ ಗಡಿಯಲ್ಲಿ ಸಣ್ಣಪುಟ್ಟ ಘರ್ಷಣೆಗಳು ನಡೆಯುತ್ತಲೇ ಇರುತ್ತವೆ. ಯಥಾಸ್ಥಿತಿ ಮುಂದುವರಿಯುತ್ತಿದೆ ಎನ್ನುವುದಕ್ಕಿಂತ ದಾಯಾದಿ ಮಾತ್ಸರ್ಯ ಮುಂದುವರಿಯುತ್ತಿದೆ ಎನ್ನುವುದೇ ವಾಸಿ. ಎರಡು ಮುಖ್ಯವಾದ ಪ್ರಶ್ನೆಗಳು ಇತ್ಯರ್ಥವಾಗುವವರೆಗೆ ಸಂಬಂಧಗಳು ಸುಧಾರಣೆಯಾಗದು. ಈ ಎರಡೂ ಪ್ರಶ್ನೆಗಳು ರಾಷ್ಟ್ರೀಯವಾಗಿ, ಭಾವನಾತ್ಮಕ ವಾಗಿ ಪ್ರಮುಖವಾದ್ದಾಗಿದೆ; ಅವನ್ನು ಎರಡೂ ದೇಶದ ತೀವ್ರಗಾಮಿಗಳೂ ಬೇಕಾದಂತೆ ಬಳಸಿಕೊಳ್ಳಲು ಅನುಕೂಲವಾಗಿದೆ. ಮೊದಲನೆಯದು ಕಾಶ್ಮೀರದ ಪ್ರಶ್ನೆ, ಎರಡನೆಯದು ಭಾರತದಲ್ಲಿ ಪಾಕ್ ಪ್ರೇರಿತ ಭಯೋತ್ಪಾದನೆ. ಕಾಶ್ಮೀರದ ಪ್ರಶ್ನೆ ಇಂದು ನಿನ್ನೆಯದಲ್ಲ ಎರಡೂ ದೇಶಗಳ ಹುಟ್ಟಿನಿಂದಲೇ ಬಂದದ್ದು. ಅತ್ಯಂತ ಜಟಿಲವಾದ, ಭಾವನಾತ್ಮಕವಾದ ಈ ಸಮಸ್ಯೆಯನ್ನು ಬಗೆಹರಿಸಬೇಕಾದರೆ ಎರಡೂ ಕಡೆ ರಾಜಕೀಯ ಇಚ್ಛಾಶಕ್ತಿ, ಮುತ್ಸದ್ದಿತನ ಅಗತ್ಯ. ಯುದ್ಧದಿಂದ ಪ್ರಶ್ನೆ ಬಗೆ ಹರಿಯದು ಎನ್ನುವುದು ಎರಡೂ ನ್ಯೂಕ್ಲಿಯರ್ ಶಸ್ತ್ರಸಜ್ಜಿತ ರಾಷ್ಟ್ರಗಳಿಗೆ ಮನವರಿಕೆಯಾಗಿದೆ. ನೇರವಾದ ಮಾತುಕತೆಗಳಿಂದ ಮಾತ್ರವೆ ಅದನ್ನು ಬಗೆಹರಿಸಲು ಸಾಧ್ಯ. ಮೂರನೆಯವರ ಮಧ್ಯಸ್ಥಿಕೆಯಿಂದಂತೂ ಸಾಧ್ಯವಿಲ್ಲ. ಎರಡೂ ದೇಶಗಳು ಪ್ರಯತ್ನ ಮುಂದುವರಿಸಬೇಕಾಗಿದೆ. ಇನ್ನು ಭಯೋತ್ಪಾದನೆಯ ಪ್ರಶ್ನೆ. ಪಾಕಿಸ್ತಾನದ ರಾಜಕೀಯದಲ್ಲಿ ಐಎಸ್‌ಐ (ಪಾಕಿಸ್ತಾನ ಗೂಢಚರ್ಯೆ ಸಂಸ್ಥೆ) ಪ್ರಾಬಲ್ಯ ಕಮ್ಮಿಯಾಗಿ, ನಿಯಂತ್ರಣಕ್ಕೊಳಪಡದೆ ಈ ಸಮಸ್ಯೆ ಜೀವಂತ. ಭಾರತದ ಪಾರ್ಲಿಮೆಂಟಿನ ಮೇಲೆ ನಡೆದ ಹಲ್ಲೆ, ಮುಂಬೈ ಮತ್ತಿತರ ಜನನಿಬಿಡ ನಗರಗಳಲ್ಲಿ ನಡೆದಿರುವ ಬಾಂಬು ದಾಳಿಗಳನ್ನು ಭಾರತದ ಜನ ಮರೆಯಲಾರರು. ಈ ಪ್ರಕರಣಗಳಲ್ಲಿ ಐಎಸ್‌ಐ ಕೈವಾಡದ ಬಗ್ಗೆ ಭಾರತ ಸರಕಾರ ಸಾಕ್ಷ್ಯಾಧಾರಗಳನ್ನು ಒದಗಿಸಿದ್ದರೂ ಪಾಕಿಸ್ತಾನ ಆಡಳಿತ ಒಪ್ಪಿಕೊಳ್ಳಲು ತಯಾರಾಗಿಲ್ಲ. ನವಾಜ್ ಷರೀಫ್ ಸರಕಾರ ಸೂಕ್ತಕ್ರಮ ಕೈಗೊಂಡು ಭಯೋತ್ಪಾದನಾ ಕೃತ್ಯಗಳು ಮುಂದೆ ನಡೆಯದಂತೆ ನೋಡಿಕೊಳ್ಳಬೇಕಾಗಿದೆ. ಮುಂದಿನ ದಿನಗಳಲ್ಲಿ ಪಾಕಿಸ್ತಾನದ ನಡೆ–ನುಡಿಗಳನ್ನು ಗಮನಿಸಬೇಕಾಗಿದೆ. ಪಾಕಿಸ್ತಾನದ ನೂತನ ಪ್ರಧಾನಿ ಭಾರತಕ್ಕೆ ಹೊಸಬರೇನಲ್ಲ. ಭಾರತದೊಂದಿಗೆ ದ್ವಿಪಕ್ಷೀಯ ಸಂಬಂಧಗಳನ್ನೂ ವೃದ್ಧಿಪಡಿಸಲು ಅವರು ಸಾಕಷ್ಟು ಪ್ರಯತ್ನಿಸಿದ್ದಾರೆ. ಜಟಿಲವಾದ ಸಮಸ್ಯೆಗಳಿದ್ದಾಗ್ಯೂ ಪರಿಸ್ಥಿತಿ ತಿಳಿಗೊಳಿಸಲು ಇತರ ಕ್ಷೇತ್ರಗಳಲ್ಲಿ ಸಂಬಂಧಗಳನ್ನು ವರ್ಧಿಸಲು ಕ್ರಮ ಕೈಗೊಳ್ಳುವುದು ಅಗತ್ಯ. ನವಾಜ್ ಷರೀಫ್ ಸರಕಾರ ಆ ದಿಶೆಯಲ್ಲಿ ಅಡಿಯಿರಿಸಲಿ ಎಂದು ಆಶಿಸೋಣ. ಅವರು ಕೈಗೊಳ್ಳುವ ಕ್ರಮಗಳಿಗೆ ಭಾರತ ಅನುಕೂಲವಾಗಿ ಪ್ರತಿಕ್ರಿಯಿಸುವುದೆಂದು ಹೇಳಬಹುದು.

ಅಸ್ಥಿರ ಪಾಕಿಸ್ತಾನಕ್ಕಿಂತ ಸುಸ್ಥಿರ ಪಾಕಿಸ್ತಾನ ಸ್ವಾಗತಾರ್ಹ. ನೆರೆಯ ಅಫ್ಘಾನಿಸ್ತಾನದ ಮುಂದಿನ ಬೆಳವಣಿಗೆಗಳು ಭಾರಿ ಪರಿಣಾಮ ಬೀರಲಿವೆ. ಅಮೆರಿಕದ ಆಕ್ರಮಣದಲ್ಲಿರುವ ಅಫ್ಘಾನಿಸ್ತಾನದಲ್ಲಿ ತಾಲಿಬಾನ್ ಪ್ರಾಬಲ್ಯ ಹೆಚ್ಚಿರುವುದನ್ನೂ ಗಮನಿಸಬೇಕು. ಅಲ್ಲದೆ ಪಾಕಿಸ್ತಾನದಲ್ಲೇ ಉಗ್ರಗಾಮಿಗಳು, ತಾಲಿಬಾನ್‌ಗಳು ಪ್ರಬಲರಾಗಿದ್ದಾರೆ. ಇದರ ಜೊತೆಗೆ ಕುಸಿದಿರುವ ಆರ್ಥಿಕ ಪರಿಸ್ಥಿತಿ, ನಿರುದ್ಯೋಗ ಮುಂತಾದ ಪ್ರಶ್ನೆಗಳನ್ನು ಪಾಕಿಸ್ತಾನದ ಸರಕಾರ ಎದುರಿಸಬೇಕಾಗಿದೆ. ನವಾಜ್ ಷರೀಫ್ ಸರಕಾರದ ಮುಂದಿರುವ ಸವಾಲುಗಳು ನೂರಾರು. ಅವನ್ನು ಅವರು ಹೇಗೆ ನಿಭಾಯಿಸುತ್ತಾರೆ? ಇದೇ ಯಕ್ಷ ಪ್ರಶ್ನೆ.

ಸೀಯಾರ್ಕೆ
'ಚೌಬೀನ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

ಎರಡು ಹೆಣ್ಣು ಹುಟ್ಟಿದ ಮ್ಯಾಲೆ ಈಕಿಗೆ "ಸಾಕು ಇಷ್ಟಕ್ಕ ಸಮಾಧಾನಪಟ್ಟು ಕೊಳ್ಳೋಣ, ಆಪರೇಷನ್ ಮಾಡಿಸಿಕೊಂಡುಬಿಡು" ಎಂದು ಸಲಹೆ ನೀಡಿದೆ. 'ಆಯ್ತು' ಎಂದು ನನ್ನ ಒತ್ತಾಯಕ್ಕೆ ಒಪ್ಪಿಗೆ ಏನೋ ನೀಡಿದಳು. ಯಾವ ಶರವೇಗದಾಗ ಅವ್ವನ ಕಿವಿಯಾಗ ಬಡದಿತ್ತೋ, ಮನೆಗೆ ಬರುತ್ತಿದ್ದಂತೆ ಅವ್ವ ಎರಡನೇ ಮೊಮ್ಮಗಳ ಮುಖಾನ ನೋಡಾಕನ ರೆಡಿ ಇಲ್ಲದ 'ಘೋ' ಎಂದು ಅಳತೊಡಗಿದ್ಲು. "ರಂಡೆಗಂಡ, ವಂಶನ ನಿರ್ವಂಶ ಮಾಡಬೇಕಂತ ಮಾಡಿ ಏನು ? ನಿಮ್ಮಪ್ಪ ಹುಟ್ಟಿ ಬರಬಾರದೇನೋ ಸನ್ಯಾಸಿ ? ಆಪರೇಷನ್ ಮಾಡಸ್ತಿಯ...? ನೀನು ಹಿಂಗ ಮಾಡೋಂಗಿತ್ತು ಅಂದ್ರ, ನಾನು ಊಟ ನೀರು ಬಿಟ್ಟು ಕೂಡುತಿನಿ" ಎಂದು ಪಟ್ಟುಹಿಡಿದಳು. ಅದರಾಗ ಜೊತಿಗಿದ್ದ ಪದ್ದು ಬಾಯಿ ಹಾಕಿ, "ನಾನು ಹೇಳಿದ್ನಿರೀ ಮಾಮಿ, ಸರಕಾರಿ ನೌಕರಿ ಅದ! ಯಾಕ ಚಿಂತಿ ಮಾಡತಿದಿ" ಅಂದ್ರೂನೂ! "ಸರಕಾರಿ ನೌಕ್ರಿದ್ರ ಹೆಗ್ಗಣ ಹಡದಂಗ ಹಡದುಬಿಡಬೇಕೇನು ? ಎರಡಕ್ಕರ ಮುಗಿಸಿದ್ರ ಎರಡು ನೂರು ರೂಪಾಯೆರ ಹೆಚ್ಚಿಗೆ ಸಿಗತ್ತ ಅಂತನಾ! ಎಷ್ಟ ಆಸಿರಿ ಇವುಂದು" ಅಂತ ಅವ್ವನ ಮುಂದ ಒದರಿದ ಕೂಡಲೇ, "ಭಾಡ್ಯಾ... ನಿನ್ನ ಹಣೆಬರಹಕ್ಕ ಎಷ್ಟು ದುಡದ್ರು ಸಾಲವಲ್ತು. ಇಡೀ ನನ್ನ ಪೆನಸನ್ ಎಲ್ಲಾ ತೋಗೊಂತಿ, ಎರಡು ನೂರು ಕಡಿಮೆ ಬಿತ್ತನೂ" ಎಂದ್ಲು. ದೊಡ್ಡ ಶ್ಯಾಣ್ಯಾರ ಮುಂದ ಹೇಳಿದೆ ಅಂತ ಸುಮ್ಮನಾದೆ.

ಅಮ್ಮನ ಹಠ ಅಂದ್ರ ಹಠ. ಗುರಿ ಇಟ್ಟ ಮ್ಯಾಲ ಹಣ್ಣ ಕೀಳತನ ಬಿಡೋಳಲ್ಲ. ಆಯ್ತು ಬೇರೆ ದಾರಿ ಹುಡುಕೋಣ ಎಂದು ನಿರ್ಧಾರವನ್ನ ತಾತ್ಕಾಲಿಕವಾಗಿ ಬದಲಿಸಿದೆ. ಬದಲಿಸಿದ ಮೇಲೂ ಆಪರೇಷನ್ ಮಾಡಿಸುವ ಅವಕಾಶ ಸಿಗಲಿಲ್ಲ. ಇಕಿಗೂ ಅಷ್ಟ ಬೇಕಾಗಿತ್ತು. ಇಟ ಸಣ್ಣ ವಿಷಯ ಮನದಾಗ ಇರಬೇಕಾದ್ದು ಇಡೀ ಊರಿಗೆ ಅದೇಂಗ ಗೊತ್ತಾತೋ ? ಆ ಹೆಣ್ಣು ಜೀವ ಸೃಷ್ಟಿಸಿದ ಶಕ್ತಿನ ಹೇಳಬೇಕು! ಹೊರಗ ಹೋಗೂದ ಕಳುವಾತು. ಮಾತಾಡಿಕೊಳ್ಳುವವರ ಆಹಾರವಾದೆ. "ನೀನು ಬಾಳ ಶ್ಯಾಣೆ ಇದ್ದಿದಿ ಅಂತ ತಿಳಕೊಂಡಿದ್ವೆಪ, ಇಂತ ಪಾಪಗೇಡಿ ಕೆಲಸಕ್ಕಿಳಿತಾನ ಅಂತ ಅನಕೊಂಡಿರಲಿಲ್ಲ" ಅಂತ ಮುಖ ತಿವುದು ಹೇಳೋರ್ಯಾರೊ, "ಆ... ಭಾರಿಪ ನೀನು, ಎರಡ ಹೆಣ್ಣಿಗೆ ಅರಳಿಬಿಡೋದ. ಯಾಕ ಮುಂದುವರೆಕ ಧೈರ್ಯ ಇಲ್ಲನು ?" ಅಂತ ಲೇವಡಿ ಮಾಡವನ್ಯಾವುನೋ.

"ಹೆಣ್ಣ ಹುಟ್ಟಿವೆ ಅಂತ ಚಿಂತೆ ಮಾಡಬೇಡಪ, ಇವತ್ತು ಹೆಣ್ಣಿಂದು ಎಷ್ಟು ಡಿಮ್ಯಾಂಡು ಅದ ಅಂತ ಗೊತ್ತದಲ್ಲೊ ? ತಿರುಗಿ ಕೊಟ್ಟು ತೊಗೊಳೊ ಕಾಲ ಬಂದಾದ" ಅಂತ ಧೈರ್ಯ ಹೇಳೋರ್ಯಾರ್ಯಾರೋ!

ಅಲ್ಲದ ನಾ ಮರೆತು ಫೋನ ಮಾಡದೆ ಇದ್ದವರು ಮುದ್ದಾಂ ಫೋನ್ ಮಾಡಿ "ಏನಪ ಹೆಣ್ಣ ಹಡದರ ತಿಳಸಬಾರದಂತದನು, ನಿನ್ನ ದುಃಖದಾಗ ನಾವು ಭಾಗಿಗಳಪ" ಅಂತಾನೂ ಸಂತಾಪದ ತರಹ ಸೂಚಿಸಿದ್ರು.

**ಗುಂಡುರಾವ್ ದೇಸಾಯಿ**






ಆಪರೇಷನ್ ಪ್ಲಾನು ಫೇಲ್ ಆತು ಅಂತ ಹಾಂಗ ಬಿಡಾಕಾಗುತ್ತೇ! ಪರ್ಯಾಯ ಮಾರ್ಗ ಹುಡುಕಾಕತ್ತಿದೆ. ಕೆಲ ದಿನ ಪ್ಲಾನಿಂಗ ಮಾಡೋಣ ಅಂದಾಗ ಇಕಿನೂ 'ಎಸ್ ಎಸ್' ಎಂದ್ಲು, ಹಾಂಗ ಮುಂದುವರೆದಿತ್ತು ಬದುಕು. ಮೂರು ವರ್ಷ ಕಳಿದಿರಲಿಲ್ಲ ಸ್ಟಾರ್ಟ ಆಯ್ತು ಅವ್ವಂದು. ಕೂಸಿನ ಮುಂದ, "ತಮ್ಮನ್ನ ಜಲ್ದಿ ಕರಕಳಂಗಿಲ್ಲೇನು ? ತಮ್ಮನ್ನ ಜಲ್ದಿ ಕರಕಳಂಗಿಲ್ಲೇನು ?" ಎಂದು ಜಿಗದು ಜಿಗದು ನಮಗ ಕೇಳಾಂಗ ಮಾತಾಡತಿದ್ಲು. ಈಕಿಗೆ "ಅವ್ವ ಹಾಂಗ ಅಂತಿರ್ಲಿ, ಇದೊಂದು ವರ್ಷ ತಡೆಮ" ಅಂತ ಮುಂದಾಕೆಂತ ಬಂದೆ. ಎರಡನೇ ಮಗಳು ಹುಟ್ಟಿ ನಾಲ್ಕು ವರ್ಷ ಆದ ಮೇಲೆ ಸಂಕ್ರಮಣ ಕಾಲ ನನ್ನ ಪಾಲಿಗೆ ಶುರುವಾತು. ಅವ್ವ ನಾ ಇಲ್ಲದಾಗ ಈಕಿಗೆ ಕಿರಿಕಿರಿ ಹಚ್ಚಾಕಿ, ಈಕಿ ನಾನು ಒಂಟಿ ಇದ್ದಾಗ ಕಿವಿ ಚುಚ್ಚಾಕಿ. "ಶೀಘ್ರವೇ ನಿಮ್ಮ ಭರವಸೆಗಳನ್ನು ಈಡೇರಿಸುತ್ತೇನೆ" ಎಂದು ರಾಜಕಾರಣಿಗಳ ತರಹ ಆಶ್ವಾಸನೆ ನೀಡಿದೆ. ವರಕೌಟ ಆಗ್ಲಿಲ್ಲ. ಆಕಿಗೂ ಗೊತ್ತಾಗಿತ್ತು ನನ್ನ ಮನಸಿನ್ಯಾಗಿಂದು. ಇನ್ನೊಂದ ಸಾಧ್ಯನ ಇಲ್ಲ ಅಂದ್ಲು. "ಇನ್ನ ತುಸು ದಿವಸ ಪ್ಲಾನಿಂಗ್ ಅಷ್ಟ" ಅಂದೆ 'ನೋ ನೋ' ಅಂದ್ಲು.

ನಾನು 'ನೋ ನೋ' ಅಂದಾಗ ಮನಿ ವಾತಾವರಣನೂ ಅನೌನ್ಸ್ ಆಯ್ತು. ಮೌನ ಮೌನ ಮೌನ ಎಲ್ಲಿತನ ನೋಡಬೇಕರಿ, ನಾನು ಒಂದು ನಿರ್ಧಾರಕ್ಕ ಬಂದೆ. ಅಂತರ್ಜಾಲವನ್ನ ತಡಕ್ಯಾಡಿ ಎಲ್ಲರಿಗೂ ಸಂತೋಷ ಕೊಡುವ, ನನಗೆ ಮಾತ್ರ ದುಃಖ ತರಿಸುವಂತಹ ಬ್ಲಾಕ ಪಿರೀಡನ್ನು ಹುಡಕಿ ಪಕ್ಕ ಮಾಡಿಕೊಂಡು ಫಾಲೋ ಅಪ್ ಮಾಡಿಕೊಂತ ಹೊಂಟೆ.

ಅಂತರ್ಜಾಲದ ಮಾಹಿತಿ ಕೃಪಾಕಟಾಕ್ಷದಿಂದ ಎಲ್ಲಾ ಸುಸೂತ್ರವಾಗಿ ನಡೆದಿತ್ತು. ಆರು ತಿಂಗಳ ಕಳದ್ರೂ ಫಲಿತಾಂಶ ಸಿಗಲಿಲ್ಲ. ಮನ್ಯಾಗ ಅನುಮಾನ ಸ್ಟಾರ್ಟ ಆಯ್ತು ?

"ಇವರಿಗೆ ಎರಡು ವರ್ಷದ ಹಿಂದ ಹರ್ನಿಯಾ ಆಪರೇಷನ್ ಆಗಿತ್ತು ! ಆ ಟೈಮಿನ್ಯಾಗೇನಾರಾ...?" ಅಂತ ಪ್ರಶ್ನೆ ಮಾಡಿದ್ರು. "ಇದ್ರೂ ಇರಬಹುದು" ಅಂದೆ.

ಅದು ಅವ್ವನ ತನನೂ ಹೋಯ್ತು. ಅವ್ವ ಆಣಿ ಮಾಡಿಸಿ ಕೇಳಿದ್ಲು. 'ಇಲ್ಲಮ್ಮ ತಾಯಿ' ಅಂದೆ.

'ಖರೇ ಹೇಳು ರಂಡೆಗಂಡ. ಏನರ ಮಾಡಿ ಕೊಂಡಿಯೇನು ?' "ಇಲ್ಲ ಮಹರಾಳ" ಅಂದ್ರೂ ಕೇಳವಳ್ಳು, ಯಾಕರ ಹಾಂಗ ಹೇಳಿದೆನೂ ಎಂದು ಹಪಹಪಿಸುವಾಂಗ ಮಾಡಿದ್ಲು. ಸಹೋದರಿ ಕೂಡ ಕೆದಕಾಕ ಪ್ರಯತ್ನಿಸಿದಳು. ನನಗೂ ಅನುಮಾನ ಸ್ಟಾರ್ಟ ಆಯ್ತು. ಎಲ್ಲೇರ ಸಿದ್ಧಣ್ಣ ಡಾಕಟ್ರು ಅನಸ್ತೇಷಿಯಾ ಕೊಟ್ಟಾಗ ನರ ಕಟ್ಟು ಮಾಡ್ಯಾರೇನು...! ಅಂತ. ಹಾಂಗಾಗಿದ್ರ ಛಲೋನ ಆತು ಅಂತ ಸುಮ್ಮನಾಗಿದ್ದೆ.

ಇದ್ದಕ್ಕಿದ್ದಂಗ ಇಕಿ ಒಂದು ಸೋಮವಾರದಿಂದ ಉಪವಾಸ ಸ್ಟಾರ್ಟ ಮಾಡಿದ್ಲು. "ಇದು ಏನೆ ಹೊಸ ವರಾತ" ಎಂದೆ. "ಸೋಳಾ ಸೋಮವಾರ ವ್ರತ" (೧೬ ಸೋಮವಾರ ಈಶ್ವರನನ್ನು ಹುತ್ತಿನ ಮಣ್ಣಿನಿಂದ ಮಾಡಿ ಉಪವಾಸವಿದ್ದು ಪೂಜಿಸುವ ವ್ರತ) ಅಂದ್ಲು. ನನಗ ಮೈ ಉರಿತು. "ದೇವರ ಮೂಲಕ ನನಗ ಸವಾಲು ಹಾಕ್ತಿಯಾ ? ನೌನ, ನೀನಾ ಪೇಷಂಟ ಇದ್ದಾಂಗ ಇದ್ದಿ, ಹಾಳ ಉಪವಾಸ ಮಾಡಿಕೊಂತ ಮತ್ತೇನಾಗಬೇಕಂತ ಮಾಡಿದಿ" ಅಂತ ದಬಾಯಿಸಿದೆ. ಆಕಿ ಜುಮ್ಮ ಅನ್ನಲಿಲ್ಲ. ಅವ್ವಂದು ಸಪೋರ್ಟ ಇತ್ತಲ್ಲ. ಅಷ್ಟೂ ಸೋಮವಾರ ಮಾಡಿದ್ಲು. ಅದರಾಗ ಆ ವ್ರತ ಮಾಡಿದ್ರ, ಪಕ್ಕ ಅನಕೊಂಡ ರಿಜಲ್ಟ ಅಂತ ! ನಾನು ಮತ್ತಷ್ಟ ಜಾಗರೂಕನಾದೆ. ನಿತ್ಯ ಇಂಟರನೆಟ್ ಜಾಲಾಡಕತಿದೆ. ಎಚ್ಚರ ತಪ್ಪಬಾರದು ಅಂತ ! ಒಂದು ಮಾಸದಾಗ ಈಕಿಗೆ ಆರಾಮ ತಪ್ಪಿದಂಗ ಆಗಿ, ಡೇಟ್ ಫರಕ ಆಗಿ ನಾನು ಪೆಕರ ಆಗಿಬಿಟ್ಟೆ. ನಾನು ಲೆಕ್ಕಾಚಾರದಾಗ ಇದ್ದೆ ನನ್ನ ಲೆಕ್ಕ ಕೈ ಕೊಟ್ಟಿತೋ ? ಆಕಿನ ವ್ರತ ಕೈಹಿಡಿತೋ ? ಅಷ್ಟರಾಗ ವ್ರತನೂ ಮುಗದಿತ್ತು. ತವರಮನಿಗೆ ಹೋದಾಗ ಫೋನ್ ಮಾಡಿ ನಕ್ಕೋತ 'ಗುಡ್ ನ್ಯೂಜರ್ರಿ' ಅಂದ್ಲು. ನಾನು ಸತ್ಯನಪ ಅಂದೆ. "ನನ್ನ ವ್ರತ ಮುಗಿಯಾಕ ಈಶಪ್ಪ ದಯಮಾಡಿದನರಿ" ಎಂದ್ಲು. ನನ್ನ ನಂಬಿಕೆಯ ವಿಜ್ಞಾನ ಕೈಕೊಟ್ಟಿತ್ತಲ್ಲ ಅಂತ ಕೈಕೈ ಹಿಚಿಗಿಕೊಂಡೆ. ಕೂಡಲೇ 'ಬಾ ಊರಿಗೆ' ಅಂತ ಬುಲಾವ್ ಮಾಡಿದೆ. ಜುಂ ಅನ್ನಲಿಲ್ಲ. ಅವ್ವಗ ಹೇಳಿದೆ, "ನಿನಗ ಅಡಿಗೆ ಮಾಡಕ ತ್ರಾಸಾಗತ್ತ ಬರಕ ಹೇಳು" ಅಂತ. "ನನಗೇನು ತ್ರಾಸ ಆಗಲ್ಲ ಆಕಿ ಅಲ್ಲೆ ಇರಲೇಳು" ಅಂದ್ಲು. ಒಂದು ದಿವಸ ಊರಿಗೆ ಹೋದ್ರ ಆಕಿನ ದಬಾಯಸ್ತಿದ್ದ, ಯಾಕರ ಊರಿಗೆ ಹೋಗಿದ್ನೋ ? ಅನ್ನುಕೊಳ್ಳೊಂಗ ಮಾಡುತ್ತಿದ್ದ ನನ್ನವ್ವ...ಹೆತ್ತವ್ವ ಹೇಳೊ ಮಾತಾ ! ಅಂತ ಗಾಬರಿಯಾಗಿ ವಾಸ್ತವನಾ ? ಕನಸಾ ? ಅಂತ ಚಿವಟಿಕೊಂಡು ಖಾತ್ರಿ ಮಾಡಿಕೊಂಡೆ. ನನಗ ಮುಜುಗರ ಸ್ಟಾರ್ಟ ಆಯ್ತು. ಕೇಳಿದವರಿಗೆಲ್ಲ, ಧಿಮಾಕ ಬಡದು ಹೇಳಿದ್ದೆ ಸ್ವಾಪ ಮಾಡಿನಪಂತ. ಮುಂದಾಗುವ ಅವಮಾನಗಳನ್ನು ನೆನಸಿಕೊಂಡು ಬಂದು ಕೂಡಲೇ ಕೈತೊಗೊಂಡೆ ಮೊದಲು ತಗಸು ಅಂತ. "ಅಯ್ಯ ! ತಗಸಾಕ ಬರಲ್ರೀ ಆಗಲೇ ಟೈಮಿರಿ ಹೋಗ್ಯಾದ" ಅಂತ ಅಂದ್ಲು. ಡಾಕ್ಟ್ರನ್ನ ಕೇಳಿ ಪಕ್ಕಾ ಮಾಡಿಕೊಂಡೆ, ಮ್ಯಾಲೆ ಅವರಿಂದ ಸ್ವಲ್ಪ ಏನು, ಭರ್ತಿ ಉಗಿಸಿಕೊಂಡೆ. ಎರಡು ತಿಂಗಳ ತವರಿನಾಗ ಇದ್ದು ತಿಂಡಿ ಮುರಿಯಾಕ ಬಂದಿದಿ ಎಂದು ಮನಸು ಕುದಿತಿತ್ತು. ತಡಕಳಾರದ ಹೊರಹಾಕತಿದ್ದೆ. ಕೊನಿಗೆ ಒಂದು ಗಟ್ಟಿ ನಿರ್ಧಾರ ಮಾಡಿ ನನ್ನ ಹಣೆಬರಹನ ಸುದ್ದಿಲ್ಲ. ಬಂದದ್ದು ಬರಲಿ. ನನ್ನ ಮಾತುಗಳು ಅವಳ ಹೊಟ್ಟೆಯಾಗಿನ ಜೀವಕ್ಕ ತ್ರಾಸ ಆಗುಹಾಂಗ ಮಾಡಬಾರದು ಅಂತ ಸಂಕಟನ ತಡಕೊಂಡೆ. ಮನಸಿನಲ್ಲಿ ಒಂದ ಯಾತನೆ, ಹೊರಗಿನ ಸ್ನೇಹಿತರ ಒಂದು ಕಾಟ. "ಏನೇನ ಬಾಳ ಬಿಗದಿದಿ ಅಲ್ಲಪ, ಏನು ಇದು ? ಅಂತ ರೇಗಸಕ ಸುರು ಮಾಡಿದಾಗ, "ಆಪರೇಷನ್ ಫೇಲಾಗಿ ಬಿಟ್ಟಾದೋ" ಅಂತ ಬಾಣ ಬಿಟ್ಟು ಪಾರಾದೆ.

ಸಮಯ ಸಮೀಪಸಾಕತ್ತಿತು. ಒಂದು ಅಂತೂ ನಿರ್ಧಾರ ಮಾಡಿದ್ದೆ, ಏನಾದ್ರೂ ಆಗಲಿ ಸ್ವೀಕರಿಸೋಣ ಅಂತ. ಎಷ್ಟಾದ್ರೂ ಹುಲುಮಾನವ ರಲ್ಲವೇ ನಾವು ? ಮನಸಲ್ಲಿ ತಳಮಳ ಇದ್ದೆ ಇತ್ತು. ಒಂದು ದಿವಸ ಮಧ್ಯರಾತ್ರಿ ಡೆಲವರಿನೂ ಆಯ್ತು. ಸಿಸ್ಟರ್ ಬಂದು "ಈಶಪ್ಪ ಕೈಬಿಡಲಿಲ್ರಿ ಮೇಷ್ಟ್ರ" ಅಂದ್ರು. ನಾನು 'ಏನಾಯ್ತ್ರಿ ?' ಎಂದೆ. 'ಅದೇರಿ ?' ಅಂದ್ಲು. 'ಹಾಂ !' ಅಂದೆ. "ಯಾಕ ಗಾಬರಿ ಆಗ್ತಿರಿ. ಪುತ್ರ ಹುಟ್ಯಾನ" ಅಂತ ಅಂದ್ರು. ನನಗ ನಂಬಕಾಗವಲ್ತು. ವಾರ್ಡಿಗೆ ಬಂದಮ್ಯಾಗ ಹೋಗಿ ಮೊದಲ ಬುಡುಕಿನಿಂದ ನೋಡಿಕೊಂತ ಬಂದೆ. ಪಕ್ಕಾ ಆತು ಆದ್ರೂ ಬಿಡಲಿಲ್ಲ. ಆಕಿ ನಗತಿದ್ಲು. ಅದೇಂಗ ಅವ್ವಗ ಶರವೇಗದಾಗ ಸುದ್ದಿ ಮುಟ್ಟಿತ್ತೋ ಮನಿ ಮುಟ್ಟಷ್ಟಿಗೆ ಎಲ್ಲ ರೆಡಿಮಾಡಿ "ಒಯ್ಯಪ್ಪ, ಬಾಣಂತಿಗೆ ಮಗುವಿಗೆ ಕೊಡಪ" ಅಂತ ಏನೇನೋ ಕಟ್ಟು ರೆಡಿ ಮಾಡಿಕೊಟ್ಟಳು. ಜಗವಿದು ನಾಟಕ ರಂಗ ಅನಕೊಂಡೆ. ಮರುದಿನ ಸುದ್ದಿ ಮುಟ್ಟಸಬೇಕಲ್ಲ. ನನಗ ಮುಜುಗರ ಅದಕ ಬೆಳಿಗ್ಗೆ ಹೊತ್ತೇರಿದ ಮ್ಯಾಗನ ಕೆಲಸ ಶುರು ಹಚ್ಚಿಕೊಂಡೆ. "ಛಲೋ ಆತಪ. ಅಪ್ಪ ಹುಟ್ಟಿಬಂದ ಅಂತ" ಹಿತೈಷಿಗಳು ಖುಷಿಪಟ್ರು. ಮಾವನೊಬ್ಬ ಮುದ್ದಾಂ ಫೋನ ಮಾಡಿ "ಅಂತೂ ಸಾಧಿಸಿ ಬಿಟ್ಟೆಪ್ಪ. ಹ್ಞಾಂ... ಗುರಿ ಸಾಧಿಸಿಬಿಟ್ಟೆಪ್ಪ. ನೀ ಏನಂತ ತೋರಿಸಿಬಿಟ್ಟೆಪ್ಪಾ. ಗುಡ್, ಗುಡ್ ಕಿಪ ಇಟ್ ಅಪ್" ಅಂದ. ಏನೋ ದೊಡ್ಡ ನ್ಯಾಷನಲ್ ಅವಾರ್ಡ ಪಡುದೋರಿಗೆ ಹೇಳೊತರ. ನನಗ ಮಾತು ಬಾರಲಿಲ್ಲ. ಹೊರಗಿನವರಿಗೆ ಯಾರಿಗೂ ಹೇಳಿರಲಿಲ್ಲ. ಏನ್ರೀ ? ಮೇಷ್ಟ್ರ ಅಂದ್ರು. ನಾನು ಎಲ್ಲಾ ಈಶ್ವರ ಅರ್ಥಾತ ಶಿವನಾಟಪ ಅಂದೆ. ಕೆಲವರು "ಮೇಷ್ಟ್ರಾಗಿ ನಾಚಿಗಿ ಬರತ್ತೇನ್ರೀ ?" ಅಂದ್ರು, ಸಮರ್ಥಿಸಿಕೊಳ್ಳಾಕ ಆಗವಲ್ತು "ನನ್ನದೇನದ, ಎಲ್ಲಾ ಶಿವನಾಟ" ಅಂದೆ. 'ಮತ್ತೇನ್ರೀ ಮೇಷ್ಟ್ರ ! ಎದಿನ ಹೊಡದು ಸತ್ತುಹೋಗತ್ತಿದ್ದವರು ಉಳಕಂಡ್ರಿ. ಅದಕ ಶಾಂತಿ ಇಲ್ಲನೂ' ಅಂತ ಕೆಲವರು ಸಾಣಿ ಹಿಡದ್ರು. 'ಅವರಿಗೆ ಅಂತ ಪಾರ್ಟಿ ಕೊಟ್ಟರಿ ಅಂದ ಮ್ಯಾಗ, ನಾವೇನು ತಪ್ಪು ಮಾಡಿದಿವ್ರೀ' ಅಂತ ಉಳಿದವರು ನುಣ್ಣಗ ಮಾಡಿದ್ರು. ಎಲ್ಲಾ ಶಿವನಾಟ 'ಆಗಲಿ' ಅಂದೆ. ಮೊನ್ನೆ ನನ್ನ ಪುಸ್ತಕ ಬಿಡುಗಡೆಗೆ ಅಂಕಣಕಾರರಾದ ಎನ್. ರಾಮನಾಥ ಅವರು ಬಂದಾಗ 'ಎಷ್ಟ್ರೀ ಮಕ್ಕಳು ?' ಅಂದ್ರು. ನಾನು ನಾಚಿಕೆಯಿಂದ, 'ಟು ಪ್ಲಸ್ ಒನ್' ಅಂದೆ. "ಏನ್ರೀ ಈ ತುಟ್ಟಿ ಕಾಲದಾಗ ಇಷ್ಟು ಧಾರಾಳತನ ! ಅದಕ್ಕರಿ ಮೇಷ್ಟ್ರುಗಳಿಗೆ ರಜೆ ಕಡಿಮೆ ಮಾಡಬೇಕು" ಅಂದ್ರು. ನಾನು ಎಲ್ಲರಿಗೂ ಹೇಳಿದಾಂಗೆ ಎಲ್ಲ ಶಿವನಾಟರಿ ಅಂದೆ. ಅವರು 'ಹಾಂ !' ಅಂದ್ರು. "ಹೌದ್ರಿ ಎಲ್ಲಾ ಮ್ಯಾಲಿನ ತಂದೆ" ಅಂದೆ. ವಿಷಯ ಕೇಳಿ ಬಿದ್ದು ಬಿದ್ದು ನಕ್ಕರು.

ನಂತರ ಜಿಜ್ಞಾಸೆ ಸ್ಟಾರ್ಟ ಆಯ್ತು. ಈ ದಿಗ್ವಿಜಯದ ಕ್ರೇಡಿಟ್ಟು ಯಾರಿಗೆ ಸಲ್ಲಬೇಕು ಅಂತ. ಮನಿಗೆ ಹೊತ್ತಾಗಿ ಹೋದಾಗ ಅವ್ವ ಇರಲಿಲ್ಲ ಅಂತ ಕಾಣುತ್ತೆ. ಹತ್ತ-ಹದಿನೈದು ಜನ ಹೆಣ್ಣುಮಕ್ಕಳು ಸೇರಿ ಕಿರೀಟ ತೊಡಸಾಕ ಹತ್ತಿದ್ರು. "ಪಾಪ ಅತ್ತಿ ಸೊಸೆ ಹನುಮಪ್ಪಗ, ಯಂಕಪ್ಪಗ ಬಾಳ ನಡಕೊಂತಿದ್ರು. ಖರೆನ ಅದು ಆಗೇ ಬಿಡ್ತು" ಅಂದ್ಲು ಒಬ್ಬಾಕಿ. "ಅದೂನು ಸರೆ, ಆದರ ಜೊತಿಗಿ ಆ ಈಶಪ್ಪನೂ ಕಾರಣ" ಅಂದ್ಲು ಇನ್ನೊಬ್ಬಾಕಿ. 'ಅದೇಂಗಾಗತ್ತ, ಅವರೇನು ಸುಮ್ಮನೆ ಕೊಟ್ಟರೇನು ? ಪಾಪ ಇವರು ಎಷ್ಟು ತ್ರಾಸ ಪಟ್ರು' ಎಂದ್ಲು ಮತ್ತೊಬ್ಬಾಕಿ. ಹಿಂಗ ಅವರ ಗಂಭೀರ ಚರ್ಚದಾಗ ನಾನು ಅಡ್ಡಬಂದು "ಹೌದೂ...! ಹಾಂಗಾದ್ರ, ನಂದೇನು ?" ಅಂತ ಅಡ್ಡಬಾಯಿ ಹಾಕಿದೆ. ಬೆಕ್ಕಿನಂಗ ಪುಸಕ್ಕನ ನಾನು ಬಂದದಕ ಸೇರಿದ ವರೆಲ್ಲ ನಕ್ಕೋತ ದುಬುದುಬು ಎದ್ದುಹೋದ್ರು.

**ಗುಂಡುರಾವ್ ದೇಸಾಯಿ**
ಮಸ್ಕಿ - ೫೮೪೧೨೪
ರಾಯಚೂರು ಜಿಲ್ಲೆ

# ಅಮೆರಿಕೆಯಲ್ಲಿ ಔಡಲಾಸ್ತ್ರದ ಪ್ರಯೋಗ ! ಜೈವಿಕ ಭಯೋತ್ಪಾದನೆಯ ಆರಂಭದ ಸೂಚನೆಯೆ?

**ಡಾ॥ ಸಿದ್ದರಾಜು, ಕೊತ್ತತ್ತಿ**

ದೇವರು, ಧರ್ಮ ಹಾಗೂ ಜನಾಂಗ ಶ್ರೇಷ್ಠತೆಯ ಅಹಮಿಕೆಯಿಂದಾಗಿ ಮಾನವ ಕಾಲ ಕಾಲಕ್ಕೆ ತನ್ನ ಸಂಕುಲವನ್ನೇ ನಾಶಗೊಳಿಸಲು ವಿಭಿನ್ನ ಬಗೆಯ ಶಸ್ತ್ರಾಸ್ತ್ರಗಳನ್ನು ಸಮರಾಂಗಣದಲ್ಲಿ ಬಹಳ ಹಿಂದಿನಿಂದಲೂ ಬಳಸುತ್ತಲೇ ಬಂದಿದ್ದಾನೆ. ಎರಡನೇ ಮಹಾಯುದ್ಧದಲ್ಲಿ ಜಪಾನಿನ ಮೇಲೆ ಅಮೆರಿಕಾ ಪ್ರಯೋಗಿಸಿದ ಅಣುಬಾಂಬುಗಳ ಭೀಕರ ಪರಿಣಾಮಗಳ ಬಗ್ಗೆ ನಾವೆಲ್ಲಾ ಓದಿದ್ದೇವೆ ಹಾಗೂ ಚಿತ್ರಗಳಲ್ಲಿ ನೋಡಿದ್ದೇವೆ. ಯುದ್ಧೋತ್ತರ ಕಾಲಘಟ್ಟದಲ್ಲಿ ವಾರ್ಸಾ ಕೂಟ ರಾಷ್ಟ್ರಗಳು ಹಾಗೂ ನ್ಯಾಟೋ ಗುಂಪಿನ ರಾಷ್ಟ್ರಗಳ ನಡುವೆ ಬಹು ಕಾಲ ನಡೆದ ಶೀತಲ ಯುದ್ಧವೂ ಈಗ ಇತಿಹಾಸ. ಎರಡನೇ ಮಹಾಯುದ್ಧದಲ್ಲಿ ಉಪಯೋಗಿಸಿದ ಅಣ್ವಸ್ತ್ರಗಳಿಗಿಂತಲೂ ಹಲವು ಪಟ್ಟು ಸಾಮರ್ಥ್ಯದ ವಿನಾಶಕಾರಿ ಅಣ್ವಸ್ತ್ರಗಳನ್ನು ಜಗತ್ತಿನ ಬಲಿಷ್ಠ ರಾಷ್ಟ್ರಗಳು ತಮ್ಮ ಬತ್ತಳಿಕೆಯಲ್ಲಿ ಇಟ್ಟುಕೊಂಡಿವೆ. ಇದು ಸಾಲದೆಂಬಂತೆ ಎರಡನೇ ಮಹಾಯುದ್ಧ ಕಾಲದಿಂದಲೇ ಸಮೂಹ ನಾಶ ಸಾಮರ್ಥ್ಯದ ರಾಸಾಯನಿಕ ಅಸ್ತ್ರಗಳನ್ನು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಈ ರಾಷ್ಟ್ರಗಳು ತೊಡಗಿಸಿ ಕೊಂಡಿವೆ. ಈ ಅಸ್ತ್ರಗಳ ಗುಂಪಿಗೆ ಮತ್ತೊಂದು ತೆರನಾದ ಅಸ್ತ್ರಗಳು ಕಿರಾತಕ ರಾಷ್ಟ್ರಗಳ ಗೌಪ್ಯ ಪ್ರಯೋಗಾಲಯಗಳಲ್ಲಿ ಅಭಿವೃದ್ಧಿಯಾಗುತ್ತಿವೆ, ಅವೇ ಜೈವಿಕ ಅಸ್ತ್ರಗಳು. ಇಲ್ಲಿ ಜೀವಿಗಳು ಹಾಗೂ ಅವುಗಳಿಂದ ಉತ್ಪನ್ನವಾದ ವಿಷವೇ ಎದುರಾಳಿಗಳ ನಾಶಕ್ಕೆ ಬಳಕೆಯಾಗುತ್ತವೆ. ಆಂಥ್ರಾಕ್ಸ್, ಪ್ಲೇಗ್, ಸಿಡುಬು, ಎಬೊಲದಂತಹ ಸಾಂಕ್ರಾಮಿಕ ರೋಗಕಾರಕ ಜೀವಾಣುಗಳನ್ನು ಆಧುನಿಕ ರಣಾಂಗಣದಲ್ಲಿ ಅಮಾನವೀಯ ಹಾಗೂ ಅಪಾಯಕಾರಿ ಸೈನಿಕರನ್ನಾಗಿ ಬಳಸಲು ಸಿದ್ಧತೆ ನಡೆಸಲಾಗುತ್ತಿದೆ. ಈ ಜೈವಿಕ ಅಸ್ತ್ರಗಳ ಸಾಮರ್ಥ್ಯ ಎಷ್ಟು ಅಗಾಧವಾದುದೆಂದರೆ ನ್ಯೂಯಾರ್ಕ್ ನಗರದ ಬಹುಮಹಡಿ ಕಟ್ಟಡವೊಂದರ ೨೦ನೇ ಮಹಡಿಯ ಮೇಲಿನಿಂದ ಉದುರಿಸಿದ ೨.೨ ಕೆ.ಜಿ. ಗಳಷ್ಟು ಆಂಥ್ರಾಕ್ಸ್ ಜೀವಕಣಗಳು ೧,೨೦,೦೦೦ ಜನಗಳನ್ನು ಕೊಲ್ಲಬಲ್ಲವು ಅಥವಾ ರೋಗಗ್ರಸ್ತರನ್ನಾಗಿ ಮಾಡಬಲ್ಲವು. ೨೦೦೧ರ ಸೆಪ್ಟೆಂಬರ್ ಮಾಹೆಯಲ್ಲಿ ಭಯೋತ್ಪಾದಕರು ಎನ್.ಬಿ.ಸಿ ಚಾನೆಲ್‌ನ ವಾರ್ತಾ ನಿರೂಪಕನಿಗೆ ಹಾಗೂ ನಂತರದ ದಿನಗಳಲ್ಲಿ ನ್ಯೂಯಾರ್ಕ್ ಪೋಸ್ಟ್ ಮತ್ತು ಎಬಿಸಿ ನ್ಯೂಸ್‌ನ ಕಛೇರಿಗಳಿಗೆ ಆಂಥ್ರಾಕ್ಸ್ ಜೀವಕಣಗಳಿಂದ ಲೇಪಿತವಾದ ಅಂಚೆಯನ್ನು ಕಳುಹಿಸಿ ಈ ಮಾರಕ ಅಸ್ತ್ರಗಳು ಈಗ ಭಯೋತ್ಪಾದಕರ ಕೈ ತಲುಪಿರುವುದಕ್ಕೆ ಪುರಾವೆ ಒದಗಿಸಿದ್ದರು.

ಹಿಂದೆ ರೋಗಕಾರಕ ಸೂಕ್ಷ್ಮಾಣು ಜೀವಿಗಳು (ಬ್ಯಾಕ್ಟೀರಿಯಾ ಮತ್ತು ವೈರಸ್‌ಗಳು) ಮತ್ತು ಅವುಗಳು ಬಿಡುಗಡೆ ಮಾಡುವ ವಿಷವನ್ನು ಜೈವಿಕ ಅಸ್ತ್ರಗಳೆನ್ನಲಾಗುತ್ತಿತ್ತು. ಆದರೆ ನಮ್ಮಲ್ಲಿ ತಲೆಗೆ ಹಚ್ಚಿಕೊಳ್ಳಲು ತಂಪಾದ ಎಣ್ಣೆಯನ್ನು ನೀಡುವ ಔಡಲ ಅಥವಾ ಹರಳಿನಿಂದ ತಯಾರಾದ ವಿಷ ಕೂಡ ಈ ಉದ್ದೇಶಕ್ಕೆ ಬಳಕೆಯಾಗುತ್ತಿರುವುದರಿಂದ ಜೈವಿಕ ಅಸ್ತ್ರಗಳ ವ್ಯಾಪ್ತಿ ಇಂದು ರೋಗಕಾರಕ ಸೂಕ್ಷ್ಮಾಣು ಜೀವಿಗಳ ವಲಯದಾಚೆಗೂ ಕೂಡ



ಹರಳು ಬೀಜಗಳು

ಹರಳು ಹಣ್ಣಿನ ಗೊಂಚಲು

ವಿಸ್ತರಿಸಿಕೊಂಡಿದೆ. ಅಮೆರಿಕಾ ಸಂಯುಕ್ತ ಸಂಸ್ಥಾನಗಳ ಮಿಸಿಸಿಪ್ಪಿಯ ಸೆನೆಟರ್ ಸೆನ್ ರೊಗರ್ ವಿಕ್ಕರ್‌ರವರನ್ನು ಒಳಗೊಂಡಂತೆ ವಾಷಿಂಗ್ಟನ್ ಡಿ.ಸಿ.ಯ ಕೆಲವು ರಾಜಕಾರಣಿಗಳಿಗೆ ಇದೇ ಏಪ್ರಿಲ್ ೧೬ರಂದು ಬರೆದಿತ್ತೆನ್ನಲಾದ ಪತ್ರಗಳಲ್ಲಿ ರಿಸಿನ್ ಎಂಬ ವಿಷ ಲೇಪನವಾಗಿರುವುದು ಪತ್ತೆಯಾದ ಮೇಲೆ ವಾಷಿಂಗ್ಟನ್‌ನ ಸರ್ಕಾರಿ ಅಧಿಕಾರಿಗಳು ಸೆನೆಟ್‌ಗೆ ಬರುವ ಪತ್ರಗಳ ಮೇಲೆ ನಿರ್ಬಂಧ ವಿಧಿಸಿದರು. ವಿಶ್ವದ ದೊಡ್ಡಣ್ಣ ಅಮೆರಿಕಾವನ್ನು ತಬ್ಬಿಬ್ಬುಗೊಳಿಸಿರುವ ಈ ರಿಸಿನ್ ಎಂಬ ವಿಷ ಯಾವುದು? ಹಿಂದೊಮ್ಮೆ ಆಂಥ್ರಾಕ್ಸ್ ರೋಗಕಾರಕ ಜೀವಾಣು ಲೇಪಿತ ಪತ್ರಗಳನ್ನು ಸುದ್ದಿವಾಹಿನಿಗಳಿಗೆ ಕಳುಹಿಸುವುದರ ಮೂಲಕ ಜೈವಿಕ ಅಸ್ತ್ರಗಳ ಬಳಕೆಗೆ ಮುಂದಾಗಿದ್ದ ಭಯೋತ್ಪಾದಕರು ಇದೀಗ ಹೊಸ ಬಗೆಯ ಜೈವಿಕ ಅಸ್ತ್ರದ ಬಳಕೆಗೆ ಮುಂದಾಗಿದ್ದಾರೆಯೆ! ಅಂದ ಹಾಗೆ ಏನಿದು ಈ ರಿಸಿನ್?

ಅಮೆರಿಕೆಯ ರೋಗತಡೆ ಮತ್ತು ನಿಯಂತ್ರಣ ಕೇಂದ್ರದ ಪ್ರಕಾರ ರಿಸಿನ್ ಔಡಲ (ಹರಳು) ಬೀಜಗಳಲ್ಲಿ ಸ್ವಾಭಾವಿಕವಾಗಿ ಕಂಡುಬರುವ ಒಂದು ವಿಷವಸ್ತು. ಔಡಲ ಬೀಜಗಳಿಂದ ಎಣ್ಣೆ ತೆಗೆದ ನಂತರ ಬಿಸಾಡುವ ತ್ಯಾಜ್ಯದಿಂದ ಇದನ್ನು ಪಡೆಯಬಹುದಾಗಿದೆ. ಈ ರಿಸಿನ್ ಎಷ್ಟು ವಿಷಕಾರಿ ಎಂದರೆ ಮಂಗಗಳ ಮೇಲೆ ಮಾಡಿದ ಪ್ರಯೋಗಗಳ ಅನುಸಾರ ಉಸಿರಾಟದ ಮೂಲಕ ದೇಹವನ್ನು ಸೇರಿದ ಕೇವಲ ೩ ಮಿ.ಗ್ರಾಂಗಳಷ್ಟು ರಿಸಿನ್ ಪ್ರಾಯದ ಮಂಗವೊಂದಕ್ಕೆ ಮಾರಣಾಂತಿಕವಾಗಬಲ್ಲದು. ಈ ವಿಷವು ದೇಹದ ಜೀವಕೋಶಗಳ ರೈಬೊಸೋಮ್‌ಗಳ ಮೇಲೆ ಪ್ರಭಾವಬೀರಿ ಪ್ರೋಟೀನ್ ತಯಾರಿಕೆಯನ್ನೇ ಸ್ಥಗಿತಗೊಳಿಸಿಬಿಡುವುದರಿಂದ ಜೀವಕ್ರಿಯೆಗಳಿಗೆ ಅಗತ್ಯವಾದ ಪ್ರೋಟೀನ್‌ಗಳೇ ಇಲ್ಲವಾದಂತಾಗಿ ವಿಷಪ್ರಾಶನವಾದವರಲ್ಲಿ ಸಾವನ್ನು ಉಂಟುಮಾಡುತ್ತದೆ.

**ರಿಸಿನ್ ವಿಷ ಪ್ರಯೋಗದ ಲಕ್ಷಣಗಳು**

ರಿಸಿನ್ ವಿಷ ಪ್ರಯೋಗದ ಲಕ್ಷಣಗಳು ರಿಸಿನ್ ವಿಷ ಎಷ್ಟು ಪ್ರಮಾಣದಲ್ಲಿ ದೇಹ ಪ್ರವೇಶಿಸಿದೆ ಎಂಬುದರ ಮೇಲೆ ಅವಲಂಬಿತವಾಗಿರುತ್ತದೆ. ಉಸಿರಾಟದ ಮೂಲಕ ದೇಹವನ್ನು ಸೇರಿದವರಲ್ಲಿ ಉಸಿರಾಟದ ತೊಂದರೆಗಳು, ಜ್ವರ, ಕೆಮ್ಮು ಮತ್ತು ತಲೆಸುತ್ತಿನಂತಹ ಲಕ್ಷಣಗಳು ಕಾಣಿಸಿಕೊಳ್ಳಬಹುದು. ಅದೇ ವಿಷ ಜೀರ್ಣಾಂಗ ವ್ಯವಸ್ಥೆಯನ್ನು ಸೇರಿದರೆ ವಾಂತಿ, ಭೇದಿ, ನಿರ್ಜಲೀಕರಣದ ಜತೆಗೆ ಮೆದುಳಿಗೆ ಹಾನಿಯನ್ನೂ ಉಂಟುಮಾಡಬಹುದು. ರಿಸಿನ್ ವಿಷದ ಪರಿಣಾಮಗಳು ದೇಹವು ಇದಕ್ಕೆ ಒಡ್ಡಿಕೊಂಡ ನಂತರದ ೪ರಿಂದ ೨೪ ಗಂಟೆಗಳ ನಡುವೆ ಕಾಣಿಸಿಕೊಂಡು ೩ರಿಂದ ೬ ದಿನಗಳಲ್ಲಿ ಸಾವು ಸಂಭವಿಸಬಹುದು.



ದೊಡ್ಡಣ್ಣನ ನಿದ್ದೆಗೆಡಿಸಿರುವ ಜೈವಿಕ ಭಯೋತ್ಪಾದನೆ

ಔಡಲದ ಎಲೆಗಳನ್ನು ಹೆಚ್ಚಾಗಿ ತಿಂದ ಅಥವಾ ಎಣ್ಣೆ ತೆಗೆದ ಔಡಲದ ಹಿಂಡಿಗೆ ಬಾಯಿ ಹಾಕಿದ ಜಾನುವಾರುಗಳು ಅಸ್ವಸ್ಥಗೊಳ್ಳುವುದು ಹಳ್ಳಿಗಾಡಿನಲ್ಲಿ ಸಾಮಾನ್ಯ ವಿಷಯವೇ. ಹೀಗಾಗಿ ನಮ್ಮ ಗ್ರಾಮಾಂತರ ಪ್ರದೇಶದ ಜನಗಳು ಈ ಬಗ್ಗೆ ಬಹಳ ಎಚ್ಚರಿಕೆ ವಹಿಸುತ್ತಾರೆ. ಔಡಲ ಬೀಜಗಳನ್ನು ಹೆಚ್ಚು ಪ್ರಮಾಣದಲ್ಲಿ ತಿನ್ನುವುದರಿಂದ ಅಥವಾ ಸಂಸ್ಕರಿತ ರಿಸಿನ್ ಸೇವನೆಯಿಂದ ವ್ಯಕ್ತಿಯಲ್ಲಿ ವಿಷಪ್ರಾಶನದ ಪರಿಣಾಮ ಉಂಟಾಗಬಹುದು. ಆದರೆ ಧೂಮ ಕಣಗಳ ರೂಪದಲ್ಲಿ ಉಸಿರಾಟದ ಮೂಲಕ ದೇಹ ಪ್ರವೇಶಿಸಿದ ರಿಸಿನ್ ಹೆಚ್ಚು ಮಾರಣಾಂತಿಕವಾದ ಜೈವಿಕ ಭಯೋತ್ಪಾದನಾ ಏಜೆಂಟ್ ಆಗಿ ಕಾರ್ಯ ನಿರ್ವಹಿಸುತ್ತದೆ. ಚರ್ಮದ ಮೂಲಕ ದೇಹದೊಳಕ್ಕೆ ಪ್ರವೇಶವಾಗದ ಹೊರತು ರಿಸಿನ್ ಕೇವಲ ಸ್ಪರ್ಶ ಮಾತ್ರದಿಂದಲೇ ಒಬ್ಬ ವ್ಯಕ್ತಿಯನ್ನು ಕೊಲ್ಲಲಾರದು.

ಜೈವಿಕ ಸಮರದ ವಸ್ತುವಾಗಿ ರಿಸಿನ್‌ಗೆ ಬಹುದೊಡ್ಡ ಇತಿಹಾಸವೇ ಇದೆ. ಅಮೆರಿಕೆಯ ಯುದ್ಧ ಇಲಾಖೆಯು ೧೯೧೮ರಲ್ಲೇ ರಿಸಿನ್ ಬಾಂಬ್‌ನ್ನು ಅಭಿವೃದ್ಧಿಪಡಿಸುವ ಬಗ್ಗೆ ಬ್ರಿಟಿಷ್ ವಿಜ್ಞಾನಿಗಳೊಡಗೂಡಿ ಕಾರ್ಯೋನ್ಮುಖವಾಗಿತ್ತಾದರೂ, ಅದನ್ನು ಸಮರಾಂಗಣದಲ್ಲಿ ಬಳಸುವ ಸಾಹಸ ಮಾಡಲಿಲ್ಲ. ೧೯೪೦ರಲ್ಲಿ ಅಮೆರಿಕೆಯ ಮಿಲಿಟರಿಯು ಉಸಿರಾಟದ ಮೂಲಕ ದೇಹ ಪ್ರವೇಶಿಸಬಲ್ಲ ರಿಸಿನ್ ಪುಡಿಯನ್ನು ತಯಾರಿಸುವ ಪ್ರಯೋಗಗಳನ್ನು ನಡೆಸಿತ್ತು. ಇರಾಕ್ ೧೯೮೦ರಲ್ಲಿ ತನ್ನ ಯುದ್ಧ ಫಿರಂಗಿಗಳಿಗೆ ರಿಸಿನ್ ಪುಡಿಯನ್ನು ತುಂಬಿಸಿ ಜೈವಿಕ ಸಮರಕ್ಕೆ ಸಿದ್ಧತೆ ಮಾಡಿಕೊಂಡಿತ್ತು ಎಂಬ ಪುಕಾರು ಇದೆ. ೧೯೭೮ರಲ್ಲಿ ಬ್ರಿಟನ್‌ನಲ್ಲಿ ಬಲ್ಗೇರಿಯಾದ ಪತ್ರಕರ್ತ ಜಿಯೋರ್ಗಿ ಮರ್ಕೊವ್‌ನ ಹತ್ಯೆಗೆ ಕೂಡ ಇದೇ ವಿಷ ಬಳಸಿರುವುದಾಗಿ ಸಂಶಯಿಸಲಾಗಿದೆ. ೨೦೦೩ ಹಾಗೂ ೨೦೦೪ರಲ್ಲಿ ಅಂದಿನ ಅಮೆರಿಕೆಯ ಸೆನೆಟ್‌ನಲ್ಲಿ ಬಹುಮತ ಬೆಂಬಲಿತ ನಾಯಕ ಬಿಲ್‌ಫ್ರಿಸ್ಟ್‌ಗೆ ಅಂಚೆ ವಿತರಿಸುತ್ತಿದ್ದ ದಕ್ಷಿಣ ಕರೋಲಿನ ಅಂಚೆ ಕಛೇರಿಯ ಕೊಠಡಿಯಲ್ಲಿ ಹಾಗೂ ಶ್ವೇತಭವನಕ್ಕೆ ಕಳುಹಿಸಲಾಗಿದ್ದ ಪತ್ರವೊಂದರಲ್ಲಿ ಈ ವಿಷವನ್ನು ಪತ್ತೆ ಹಚ್ಚಲಾಗಿತ್ತು. ಆದರೆ ಈ ಪ್ರಕರಣಗಳಲ್ಲಿ ಯಾರಿಗೂ ಆರೋಗ್ಯ ಸಮಸ್ಯೆಯಾಗಲೀ ಅಥವಾ ಪ್ರಾಣಹಾನಿಯಾಗಲೀ ಸಂಭವಿಸಲಿಲ್ಲ ಎಂಬುದು ಬೇರೆ ವಿಷಯ. ೧೯೯೦ರ ದಶಕದ ಮಧ್ಯಭಾಗದಲ್ಲಿ ಮಿನಿಸೊಟ ದೇಶಾಭಿಮಾನಿ ಸಮಿತಿಯೆಂಬ ಆತಂಕವಾದಿ ಗುಂಪಿನ ಸದಸ್ಯರು ರಿಸಿನ್ ಬಳಕೆ ಮಾಡಿ ಕಾನೂನುಪಾಲನೆ ಅಧಿಕಾರಿಗಳನ್ನು ಕೊಲ್ಲುವ ಪಿತೂರಿ ಮಾಡಿದ್ದುದು ಸಾಬೀತಾಯಿತು. ಈ ಮಾರಕಾಸ್ತ್ರವು ಈಗ ಅಲ್ ಖೈದಾದಂತಹ ಭಯೋತ್ಪಾದಕ ಗುಂಪುಗಳ ಬಳಿ ಕೂಡ ಇರುವುದಾಗಿ ಭಾವಿಸಲಾಗಿದೆ.



ಜೈವಿಕ ಅಸ್ತ್ರಪ್ರಯೋಗದ ನಂತರ, ಶುದ್ಧೀಕರಣ ಕಾರ್ಯಾಚರಣೆ

ಅಮೆರಿಕೆಯಲ್ಲಿ ರಿಸಿನ್ ಮತ್ತು ಇತರೆ ರೋಗಕಾರಕಗಳ ಪತ್ತೆಗಾಗಿ ದೇಶಾದ್ಯಂತ ಬಲವಾದ ಕಣ್ಗಾವಲು ವ್ಯವಸ್ಥೆ ಇದೆ. ಒಂದು ವೇಳೆ ಸಂಗ್ರಹಿಸಿದ ಮಾದರಿಯಲ್ಲಿ ರಿಸಿನ್ ಇರುವುದು ಕಂಡುಬಂದರೆ ಅದನ್ನು ತಕ್ಷಣವೇ ಪ್ರಯೋಗಾಲಯಗಳಿಗೆ ಕಳುಹಿಸಿ ಆಂಟಿಬಾಡಿ ಪರೀಕ್ಷೆ/ಡಿ.ಎನ್.ಎ. ಪರೀಕ್ಷೆಯಂತಹ ಮುಂದುವರಿಕೆ ತಪಾಸಣೆಗೆ ಒಳಪಡಿಸಲಾಗುತ್ತದೆ. ಏಪ್ರಿಲ್ ೧೬ರ ಪ್ರಕರಣದಲ್ಲಿ ರಿಸಿನ್ ಇರುವುದನ್ನು ಮೇರಿಲ್ಯಾಂಡ್ ಪ್ರಯೋಗಾಲಯ ದೃಢಪಡಿಸಿತ್ತು.

ರಿಸಿನ್ ವಿಷಕ್ಕೆ ಸೂಕ್ತ ಪ್ರತಿವಿಷ ಸದ್ಯಕ್ಕೆ ಲಭ್ಯ ಇಲ್ಲ. ನ್ಯೂಜೆರ್ಸಿಯ ಸೊಲಿಜೆನಿಕ್ಸ್ ಆಫ್ ಪ್ರಿನ್ಸ್‌ಟನ್ ಎಂಬ ಕಂಪನಿಯೊಂದು ರಿಸಿನ್ ವಿರುದ್ಧದ ವ್ಯಾಕ್ಸಿನೇಷನ್ ಅಭಿವೃದ್ಧಿಪಡಿಸಲು ಯತ್ನಿಸಿತಾದರೂ ಅದು ತುಂಬ ಆರಂಭಿಕ ಹಂತದ ಕ್ಲಿನಿಕಲ್ ಪರೀಕ್ಷೆಗಳಲ್ಲಿ ಮಾತ್ರ ಪ್ರಗತಿ ತೋರಿದುದರಿಂದ ಅಮೆರಿಕೆಯ ಆಹಾರ ಮತ್ತು ಔಷಧಿ ಆಡಳಿತ ಅದಕ್ಕೆ ಮಾನ್ಯತೆ ನೀಡಲಿಲ್ಲ. ಈ ವ್ಯಾಕ್ಸಿನ್ ಮುಂಚಿತವಾಗಿಯೇ ರಿಸಿನ್ ವಿರುದ್ಧದ ರಕ್ಷಕ




ಆಂಟಿಬಾಡಿಗಳನ್ನು ಉತ್ಪತ್ತಿ ಮಾಡಿಬಿಡುತ್ತದೆ. ವಿಷಕ್ಕೆ ದೇಹ ಒಡ್ಡಿಕೊಂಡ ೪ ಗಂಟೆಗಳ ನಂತರ ರಿಸಿನ್ ವಿಷ ಪ್ರಯೋಗದ ಗುಣಲಕ್ಷಣಗಳನ್ನು ಹಿಂದಿನ ಸ್ಥಿತಿಗೆ ಕೊಂಡೊಯ್ಯಲು ಸಾಧ್ಯವಾಗದಿರುವುದರಿಂದ ರಿಸಿನ್ ಪತ್ತೆಯಾದ ತಕ್ಷಣ ದಾಳಿಗೊಳಗಾದ ವ್ಯಕ್ತಿಗಳ ಜೀವ ಉಳಿಸಲು ಈ ವ್ಯಾಕ್ಸಿನ್ ಅಷ್ಟಾಗಿ ಪ್ರಯೋಜನಕ್ಕೆಬಾರದು. ಪ್ರಸ್ತುತ ಅಮೆರಿಕೆಯ ಅಲರ್ಜಿ ಮತ್ತು ಸೋಂಕು ರೋಗಗಳ ರಾಷ್ಟ್ರೀಯ ಸಂಸ್ಥೆಯು ರಿಸಿನ್ ವಿಷಪ್ರಯೋಗದ ಚಿಕಿತ್ಸೆಗೆ ಮದ್ದಿನ ಸಂಶೋಧನೆಗೆ ಸೂಕ್ತ ಹಣಕಾಸು ನೆರವು ಒದಗಿಸಿ ಕಾರ್ಯಪ್ರವೃತ್ತವಾಗಿದೆ.

ಅದೇನೇ ಇರಲಿ ಅತ್ಯಂತ ಪ್ರಬಲ ಕಣ್ಗಾವಲು ವ್ಯವಸ್ಥೆ ಹೊಂದಿರುವ ಜಗತ್ತಿನ ದೊಡ್ಡಣ್ಣ ಅಮೆರಿಕೆಯ ಭದ್ರಕೋಟೆಯನ್ನು ಭೇದಿಸಿ ಅದರ ನಿದ್ದೆಗೆಡಿಸಿರುವ ರಿಸಿನ್ ಎಂಬ ಔಡಲಾಸ್ತ್ರದ ಮೂಲ ಮಾತ್ರ ತಲೆಗೆ ಹಚ್ಚಿಕೊಂಡರೆ ತಂಪು ಮಾಡಿ ಸೊಂಪಾದ ನಿದ್ದೆ ತರುವ ಎಣ್ಣೆ ತಯಾರಿಸಲು ನಾವೆಲ್ಲಾ ಬಳಸುವ ಹಾಗೂ ನಮ್ಮ ಹಳ್ಳಿಗಳ ಹಿತ್ತಲಿನಲ್ಲಿ ಸಾಮಾನ್ಯವಾಗಿ ಕಾಣಸಿಗುವ ಎರಂಡ, ಔಡಲ ಎಂದು ಕರೆಯಲ್ಪಡುವ ಹರಳು ಗಿಡ. ಆಯುರ್ವೇದ ಚಿಕಿತ್ಸೆಯಲ್ಲಿ ರೋಗಚಿಕಿತ್ಸೆಗೆ ಬಳಕೆಯಾಗುವ ಇದನ್ನು ಭಯೋತ್ಪಾದಕರು ರೋಗವುಂಟುಮಾಡಲು ಬಳಸುತ್ತಿರುವುದು ಮಾತ್ರ ನೋವು ತರುವ ಸಂಗತಿ. ಆಂಥ್ರಾಕ್ಸ್ ರೋಗಕಾರಕ ಜೀವಾಣು ಲೇಪಿತ ಪತ್ರಗಳನ್ನು ಸುದ್ದಿ ವಾಹಿನಿಗಳಿಗೆ ಕಳುಹಿಸಿ ಕೋಲಾಹಲವುಂಟುಮಾಡಿದ್ದ ಭಯೋತ್ಪಾದಕರು ಈಗ ಮತ್ತೊಮ್ಮೆ ಅಮೆರಿಕೆಯ ರಾಜಕಾರಣಿಗಳಿಗೆ ರಿಸಿನ್ ವಿಷಲೇಪಿತ ಪತ್ರಗಳನ್ನು ರವಾನಿಸುವುದರ ಮೂಲಕ ಅಪಾಯಕಾರಿ ಜೈವಿಕಾಸ್ತ್ರಗಳು ತಮ್ಮ ಬಳಿ ಇರುವುದನ್ನು ಖಚಿತಪಡಿಸಿದ್ದಾರೆ. ಅಮೆರಿಕೆಯ ಯುದ್ಧ ಇಲಾಖೆಯು ೧೯೪೮ರಲ್ಲಿ ಹಿಂದೊಮ್ಮೆ ರಿಸಿನ್ ಬಾಂಬ್‌ನ್ನು ಅಭಿವೃದ್ಧಿಪಡಿಸಲು ಬ್ರಿಟಿಷ್ ವಿಜ್ಞಾನಿಗಳೊಡಗೂಡಿ ಕಾರ್ಯೋನ್ಮುಖವಾಗಿತ್ತೆಂಬ ಸುದ್ದಿ ಇದೆ. ಈಗ ಭಯೋತ್ಪಾದಕರು ಅದನ್ನು ಕೈಗೆತ್ತಿಕೊಂಡು ತಿರುಮಂತ್ರ ಹೇಳುತ್ತಿದ್ದಾರೆ. ಹಾಗೆಂದು ಬೇರೆಯವರು ಸುಮ್ಮನೆ ಕುಳಿತುಕೊಳ್ಳುವಂತೆಯೂ ಇಲ್ಲ. ಏಕೆಂದರೆ ಹಿಂಸೆಯನ್ನೇ ಬದುಕಿನ ಮಾರ್ಗವನ್ನಾಗಿ ಸ್ವೀಕರಿಸಿದ ಕರಾಳ ಮನಸ್ಸಿನ ಭಯೋತ್ಪಾದಕರಿಗೆ ದೇಶ, ಭಾಷೆ, ಧರ್ಮಗಳ ಭೇದಭಾವವಿರುವುದಿಲ್ಲ. ಆದುದರಿಂದ ಈ ಜೀವ ವಿರೋಧಿ ಪ್ರವೃತ್ತಿಯ ವಿರುದ್ಧ ಜಗತ್ತಿನ ಎಲ್ಲಾ ರಾಷ್ಟ್ರಗಳು ಸಂಘಟಿತ ಹೋರಾಟ ನಡೆಸಬೇಕಾಗಿದೆ. ಅಲ್ಲದೆ ಇಂತಹ ಅಪಾಯಕಾರಿ ಅಸ್ತ್ರಗಳ ಬಳಕೆಯ ಸಂದರ್ಭದಲ್ಲಿ ಕೈಗೊಳ್ಳಬೇಕಾದ ಕ್ರಮಗಳು ಹಾಗೂ ನಾಗರಿಕರ ರಕ್ಷಣೆಯ ಬಗ್ಗೆ ಪೊಲೀಸ್ ಹಾಗೂ ನಾಗರಿಕರನ್ನು ಸಜ್ಜುಗೊಳಿಸ ಬೇಕಾಗಿರುವುದು ಕೂಡ ಇಂದಿನ ತುರ್ತು ಅಗತ್ಯತೆಯಾಗಿದೆ.

**ಡಾ॥ ಸಿದ್ದರಾಜು, ಕೊತ್ತತ್ತಿ**
ನಂ. ೧೩೨೪/೨೫೫ಎ, ೨ನೇ ಅಡ್ಡರಸ್ತೆ, ನೆಹರು ನಗರ, ಮಂಡ್ಯ ಜಿಲ್ಲೆ

## "ನಾ ಮಾಡುವ ಮತ"

**ನಾ** ಮಾಡುವ ಮತ,
ಕೇಳುವುದಿಲ್ಲ ಕಿವಿಗೆ,
ಕಾಣುವುದಿಲ್ಲ ಕಣ್ಣಿಗೆ,
ಜ್ವಾಲಾಮುಖಿಯಂತೆ ಬೆಂಕಿಯೊಂದಿಗೆ
ಭರ್ರೆಂದು ಕಾಡ್ಗಿಚ್ಚು ಹೊತ್ತಿಸುತ್ತದೆ.
ಅದು ಭಂಡ ರಾಜಕಾರಣಿಗಳನ್ನು ದಹಿಸುತ್ತದೆ.

ನಾ ಒತ್ತುವ ಮತ,
ಹಾಲು ಕೆನೆಯಾಗಿ,
ಬೆಣ್ಣೆಯಾಗಿ ಕರಗಿಸಿಕೊಂಡು
ಆಗುವುದಿಲ್ಲ ಮಧುರ ತುಪ್ಪ ,
ಹೆಬ್ಬಂಡೆಗಳು ಬಿರಿದು ಆರ್ಭಟಿಸುವಂತೆ,
ಸುನಾಮಿಗೆ ಸಿಕ್ಕು ಗೋಡೆಗಳುರುಳುವಂತೆ,
ತೀರಾ ಕರ್ಕಶ, ಅಘೋರ.
ಅದು ಹದಗೆಟ್ಟ ವ್ಯವಸ್ಥೆಯನ್ನು ಮಂಥಿಸುತ್ತದೆ.



ನಾ ಚಲಾಯಿಸುವ ಮತ,
ನಾಜೂಕಾಗಿ ವಂಚಿಸಿ,
ಬಾಯಲ್ಲಿಯೇ ಅಡಗಿ,
ಮನದಲ್ಲಿಯೇ ಹೂತುಹೋಗುವುದಿಲ್ಲ.
ಬಿರುಗಾಳಿಯಂತೆ ಬೀಸಿ
ಥಳಥಳಿಸಿ ಝಳಪಿಸುವ ಖಡ್ಗವಾಗಿ ನುಗ್ಗುತ್ತದೆ.
ಅದು ನಮ್ಮ ನಾಯಕರಿಗೆ
ಮಾರ್ಗದರ್ಶಿಯಾಗುತ್ತದೆ.

ನಾ ಹಾಕುವ ಮತ,
ಚಂದ್ರನ ಬೆಳದಿಂಗಳಂತೆ ಮುದವಾಗಿರುವುದಿಲ್ಲ,
ನಕ್ಷತ್ರವಾಗಿ ಕಣ್ಣಣಿಸುವುದಿಲ್ಲ,
ಬರಸಿಡಿಲಾಗಿ ಸೀಳಿ ಆರ್ಭಟಿಸುತ್ತದೆ.
ಅದು ಅಮಾನವೀಯ ವ್ಯವಸ್ಥೆಯನ್ನ
ಎಚ್ಚರಿಸುತ್ತದೆ.

**ವೆಂಕಟೇಶ ಕೆ. ಜನಾದ್ರಿ**
ಕೇರಾಫ್ ದಿಲೀಪ್ ಟೆಲ್‌ಕರ್, ೧೦-೨-೫೫/೨
ಸಂಗಮೇಶ್ವರ ನಗರ, ಗುಲಬರ್ಗಾ - ೫೮೫೧೦೩

# ಆಧುನಿಕೋತ್ತರವಾದವೂ ಸಿ.ಎಸ್. ಎಲ್. ಸಿ. ಚಿಂತನಾಕ್ರಮವೂ



**ಕೆ. ಪ್ರಕಾಶ್**

**ಮ**ಡೆಸ್ನಾನದ ಬಗ್ಗೆ ಚರ್ಚೆ, ಕೆ. ವಿ. ಅಕ್ಷರ ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಯಲ್ಲಿ (ಜನವರಿ ೧೮, ೨೦೧೧) ಬರೆದ 'ಹರಕೆ ಹರಾಜು – ಯಾವುದು ಸಹಜ? ಯಾವುದು ಅವಮಾನ?' ಎಂಬ ಲೇಖನದಲ್ಲಿ ಕುಕ್ಕೆ ಸುಬ್ರಹ್ಮಣ್ಯದಲ್ಲಿ ನಡೆಯುವ ಮಡೆಸ್ನಾನ ಹಾಗೂ ಐಪಿಎಲ್ ಹರಾಜು ಇವೆರಡನ್ನೂ ತೌಲನಿಕವಾಗಿ ಅಕ್ಷರ ವಿಮರ್ಶಿಸಿದ್ದರು. ಬ್ರಾಹ್ಮಣರು ಉಂಡ ಎಂಜಲೆಲೆಯ ಮೇಲೆ ಶೂದ್ರರು ಉರುಳಾಡಿದ್ದು ಮತ್ತು ಐಪಿಎಲ್‌ನಲ್ಲಿ ಆಟಗಾರರನ್ನು ಹರಾಜು ಹಾಕಿದ್ದು ಇವೆರಡರಲ್ಲಿ ಯಾವುದು ಹೆಚ್ಚು ಆದ್ಯತೆಯ ಸುದ್ದಿಯಾಗಬೇಕಿತ್ತು ಎಂಬ ಪ್ರಶ್ನೆಯನ್ನು ಎತ್ತಿದ್ದರು – "...ಸ್ವತಃ ಅವಮಾನವನ್ನು ಅನುಭವಿಸುತ್ತಿದ್ದಾನೆಂದು ಹೇಳಲಾಗುವಾತನೇ ತನಗೆ ಅವಮಾನವಾಗುತ್ತಿದೆ ಎಂಬುದನ್ನು ಒಪ್ಪಿಕೊಳ್ಳದೆಹೋದರೆ, ಅದನ್ನು ಅವಮಾನ ಎಂದು ಕರೆಯುವುದು ಕಷ್ಟವೇ ಸರಿ... ಹರಕೆ ಮತ್ತು ಹರಾಜುಗಳಲ್ಲಿ ಒಂದು ಅವಮಾನವಾಗಿಯೂ ಇನ್ನೊಂದು ಸಹಜವಾಗಿಯೂ ಕಂಡರೆ, ಅದರ ಹಿಂದೆ ಐತಿಹಾಸಿಕವಾದ ಹಲವು ಕಾರಣಗಳಿವೆ; ನಮ್ಮ ವಸಾಹತುಶಾಹಿ ಗತಕಾಲವು ನಮ್ಮ ಗ್ರಹಿಕೆಯನ್ನು ನಿರೂಪಿಸಿದ ಒಂದು ವಿಶಾಲ ಕಥನವೇ ಅದರ ಹಿಂದಿದೆ... ಆತ್ಯಂತಿಕವಾಗಿ ತನಗೆ ಅವಮಾನ ಆಗುತ್ತಿದೆಯೋ ಇಲ್ಲವೋ ಎಂಬುದನ್ನು ತೀರ್ಮಾನಿಸುವಾತ ಸ್ವತಃ ಆ ಅವಮಾನಿತನೇ ಆಗಿರಬೇಕೇ ಹೊರತು, ಆತನ ಪರವಾಗಿ ಇನ್ನೊಬ್ಬರು 'ಅವನಿಗೆ ಅವಮಾನವಾಗುತ್ತಿದೆ' ಎಂದು ತೀರ್ಮಾನಿಸಲಾಗದು..."

ಈ ಲೇಖನಕ್ಕೆ ವಿರೋಧವಾಗಿ ಬಂದ ಪ್ರತಿಕ್ರಿಯೆಗಳೂ ಸಹ ಗಮನಾರ್ಹವಾದವುಗಳು. ಸಂಪಾದಕೀಯ ಬ್ಲಾಗಿನಲ್ಲಿ, "...ಪೂಜೆ, ವ್ರತ, ಹರಕೆ ಎಲ್ಲವೂ ವೈಯಕ್ತಿಕ ಆಚರಣೆಗಳು. ಅವು ನಂಬಿಕೆಗಳನ್ನು ಆಧರಿಸಿದ್ದು. ಅವುಗಳ ಕುರಿತು ಯಾರಿಗೂ ತಂಟೆ, ತಕರಾರಿಲ್ಲ. ತಕರಾರಿರುವುದು ಒಂದು ಸಮುದಾಯದವರು ಉಂಡು ಎದ್ದ ಮೇಲೆ, ಆ ಎಲೆಗಳ ಮೇಲೆ ಉಳಿದ ಸಮುದಾಯಗಳ ಜನರು ಉರುಳಾಡುವ ಅಸಹ್ಯದ ಕುರಿತು. ಅದು ಕೇವಲ ನಂಬಿಕೆಯ ಪ್ರಶ್ನೆ ಮಾತ್ರವಲ್ಲ. ಅಕ್ಷರ ಅವರು ಹೇಳುವ ಮಾನಾವಮಾನಗಳ ಪ್ರಶ್ನೆ, ಮನುಷ್ಯ ಘನತೆಯ ಪ್ರಶ್ನೆ, ವಿವಿಧ ಹಂತಗಳಲ್ಲಿ ಒಡೆದು ಚೂರಾಗಿರುವ ಸಮಾಜವನ್ನು ಸಮಾನವಾಗಿ ಬದುಕುವಂತೆ ಪ್ರೇರೇಪಿಸುವ ಕಾಲದ ಅಗತ್ಯದ ಪ್ರಶ್ನೆ, ಆಧುನಿಕ ಯುಗದ ಪ್ರಲೋಭನೆಗಳಿಗೆ ಒಳಗಾಗಿ ಮುಗ್ಧ ಜನರು ಅಸಹಾಯಕರಾಗಿ ಹುಡುಕಿಕೊಳ್ಳುತ್ತಿರುವ ಅಪಮಾರ್ಗಗಳ ಪ್ರಶ್ನೆ..."

ಎಚ್. ಎಸ್. ಶಿವಪ್ರಕಾಶ್ ಅವರು ಸಂಪಾದಕೀಯ ಬ್ಲಾಗಿನಲ್ಲಿ ಬರೆಯುತ್ತಾ, "...ಅಕ್ಷರ ಅವರ ದಾರಿಯನ್ನು ಹಿಡಿದು ಇನ್ನಷ್ಟು ಮುಂದೆಹೋಗಿ ಅದು ನಮ್ಮನ್ನು ಎಲ್ಲಿಗೆ ತಲುಪಿಸುತ್ತೆ, ನೋಡೋಣ... ಅಥವಾ ಅಕ್ಷರ ಅವರೇ ಖಂಡಿಸಿರುವ ಐಪಿಎಲ್ ಹರಾಜಿನ ಚಿತ್ರವನ್ನು ಹೀಗೆ ಭಾವಿಸಿಕೊಳ್ಳಿ:

ಹರಾಜು ಮಾಡಿಕೊಂಡ ಕ್ರಿಕೆಟಿಗರು ತಮ್ಮ ಕೊರಳಿಗೆ ತಾವು ಪಡೆದ ಬೆಲೆಯ ಫಲಕಗಳನ್ನು ಹಾಕಿಕೊಂಡು, ಟಿ.ವಿ. ಕ್ಯಾಮರಾಗಳ ಮುಂದೆ ಪೋಜು ಕೊಡುತ್ತಿದ್ದಾರೆ. ಅಭಿಮಾನಿಗಳು ಅವರನ್ನು ಅಭಿನಂದಿಸುತ್ತಿದ್ದಾರೆ. ಇದನ್ನು ಖಂಡಿಸಲು ನಾವು ಯಾರು? ಆ ಫಲಕಗಳು ಹೆಮ್ಮೆಯ ಸಂಕೇತಗಳೆಂದು ಅವರು ತಿಳಿದಿರಬಹುದಲ್ಲವೆ? ಅವರ ಅಭಿಮಾನಿಗಳೂ ಹಾಗೇ ತಿಳಿದಿದ್ದಾರೆ. ಆ ಸಮಾರಂಭದ ಶೋಭೆಯನ್ನು ಹೆಚ್ಚಿಸಲು ಬಂದ ಶಿಲ್ಪಾ ಶೆಟ್ಟಿ, ವಿಜಯ ಮಲ್ಯ ಅವರೂ ಹಾಗೇ ತಿಳಿದಿದ್ದಾರೆ. ಇದೇನು ಬೈಲಹೊಂಗಲದ ದನದ ಜಾತ್ರೆಯ ಥರದ ಹರಾಜಲ್ಲ. ಸ್ವಂತ ಇಚ್ಛೆಯಿಂದ ಕ್ರಿಕೆಟಿಗರು ತಮ್ಮ ಕ್ರಯವನ್ನು ಪಡೆದುಕೊಂಡಿದ್ದಾರೆ. ಇದು ಮನಮೋಹನ ಯುಗದ, ಯಡಿಯೂರಪ್ಪ ಯುಗದ ಎಲ್ಲ ಭಾರತೀಯರು, ವಿಶೇಷವಾಗಿ ಮುಕ್ಕೋಟಿ ಕನ್ನಡಿಗರು ಹೆಮ್ಮೆಪಡಬೇಕಾದ ವಿಷಯ. ...ಹೀಗಾಗಿ ಮೇಲ್ಕಾಣಿಸಿದ ಯಾವ ಚಿತ್ರಗಳೂ ಖಂಡನೀಯವಲ್ಲ. ನಾವು ಅಪಮಾನ, ಖಂಡನೀಯ ಅಂತ ತಪ್ಪಾಗಿ ಭಾವಿಸುವುದಕ್ಕೆ ಗುರಿಯಾದ ಆ ಎಲ್ಲರೂ ನಮ್ಮ ಮೆಚ್ಚುಗೆಗೆ ಪಾತ್ರರು.

ಹೀಗೇ ಮುಂದುವರಿಯೋಣ. ದಲಿತರಿಗೆ ಮಲ ತಿನ್ನಿಸಿದ ಘಟನೆಯನ್ನೂ ನಾವು ಖಂಡಿಸಬೇಕಿಲ್ಲ. ಪರಜಾತಿಯ ಹುಡುಗನ ಜೊತೆ ಮದುವೆಯಾಗಿದ್ದಕ್ಕೆ ಒಬ್ಬ ಹುಡುಗಿಯನ್ನು ಮನೆಯವರು ಕೊಲೆ ಮಾಡಿದ ಘಟನೆಯನ್ನೂ ಖಂಡಿಸಬಾರದು. ಕೊಂದವರ ನಂಬಿಕೆಗಳನ್ನೂ ನಾವು ಗೌರವಿಸೋಣ. ಎಳೇ ಹುಡುಗಿಯನ್ನು ನರಬಲಿ ಕೊಟ್ಟವರನ್ನೂ ಬೈಯಬಾರದು. ಯಾಕೆಂದರೆ ಹುಡುಗಿ ಸ್ವರ್ಗಕ್ಕೆ ಹೋಗಿ ಸುಖವಾಗಿರುತ್ತಾಳೆ. ಹಳ್ಳಿಯಿಂದ ದಿಲ್ಲಿಯವರೆಗೆ ನಡೆಯುವ ಕೊಲೆಗಳು, ಮಾನಭಂಗಗಳು, ಹಲ್ಲೆಗಳು, ಶೋಷಣೆಯ ನಾನಾ ರೂಪಗಳು, ಎಮ್‌ಎಲ್‌ಎ, ಎಮ್‌ಪಿಗಳ ಹರಾಜು ಎಲ್ಲವೂ ಸಮರ್ಥನೀಯ..."

ಈ ವಾದವನ್ನು ಮುಂದುವರಿಸುತ್ತಾ ಜಿ. ರಾಜಶೇಖರ್ ಅವರು (ಪ್ರಜಾವಾಣಿಯಲ್ಲಿ), "...ಮಡೆಸ್ನಾನವನ್ನು ಆಚರಿಸುವವರು ಹಾಗೂ ಅದನ್ನು ಪ್ರತಿಭಟಿಸುವವರು ಪರಸ್ಪರ ಹಂಚಿಕೊಂಡಿರುವ ಮನುಷ್ಯತ್ವವೇ ಅಕ್ಷರ ಅವರ ವಿಶ್ಲೇಷಣೆಯಲ್ಲಿ ನಾಪತ್ತೆಯಾಗಿದೆ... ಹರಕೆಯನ್ನು ಆಧುನಿಕಪೂರ್ವ, ಗ್ರಾಮೀಣ, ಪರಂಪರಾಗತ, ಬಹುಜನರ ಭಾರತದ ಜೊತೆ ಮತ್ತು ಐ.ಪಿ.ಎಲ್. ಹರಾಜನ್ನು ಆಧುನಿಕ, ನಗರ ಪ್ರಧಾನ, ಸುಶಿಕ್ಷಿತ, ಆಂಗ್ಲೀಕೃತ 'ಇಂಡಿಯಾ'ದ ಜೊತೆ ಅಕ್ಷರ ಸಮೀಕರಿಸುತ್ತಾರೆ. ಹರಕೆಯ ಭಾರತ ಮತ್ತು ಹರಾಜಿನ ಇಂಡಿಯಾ – ಇವೆರಡೂ, ಸಂಕರ, ಮುಖಾಮುಖಿ, ಸಹಬಾಳ್ವೆ, ಕೊಡುಕೊಳ್ಳುವಿಕೆ, ಒಳಗೊಳ್ಳುವಿಕೆ ಇತ್ಯಾದಿ ಅನುಸಂಧಾನವೇ ಇಲ್ಲದ ಎರಡು ಪ್ರತ್ಯೇಕ ಲೋಕಗಳು ಎಂಬಂತೆ ಅಕ್ಷರ ಬರೆಯುತ್ತಾರೆ. ಹಾಗಾಗಿ ಹರಕೆ ಅವರಿಗೆ 'ಸ್ವದೇಶಿ'ಯಂತೆ ಕಂಡರೆ ಅದನ್ನು ಪ್ರತಿಭಟಿಸುವ 'ವಿಚಾರವಂತರು' 'ಪರದೇಶಿ'ಗಳ ಹಾಗೆ ಕಾಣಿಸುತ್ತಾರೆ..."

ಅಕ್ಷರ ಅವರ ಲೇಖನಕ್ಕೆ ಪರವಾಗಿಯೂ ಒಂದು ನಿರ್ದಿಷ್ಟ ಗುಂಪಿನಿಂದ ಕೆಲವು ದನಿಗಳು ಕೇಳಿ ಬಂದವು. ಅವು ಚರ್ಚೆಯನ್ನು ಜಾತಿಪದ್ಧತಿಗೆ ವಿಸ್ತರಿಸಿದವು ಕೂಡ. ಈ ಗುಂಪು ಶಿವಮೊಗ್ಗದ ಕುವೆಂಪು ವಿಶ್ವವಿದ್ಯಾಲಯದ 'ಸ್ಥಳೀಯ ಸಂಸ್ಕೃತಿಗಳ ಅಧ್ಯಯನ

ಕೇಂದ್ರ'ಕ್ಕೆ (ಸಿ.ಎಸ್.ಎಲ್.ಸಿ. – ಸೆಂಟರ್ ಫಾರ್ ಸ್ಟಡಿ ಆಫ್ ಲೋಕಲ್ ಕಲ್ಚರ್ಸ್) ಸಂಬಂಧಪಟ್ಟ ವ್ಯಕ್ತಿಗಳ ಗುಂಪು.

ಚರಿತ್ರೆಯ ಪ್ರಾಧ್ಯಾಪಕರೂ ಮತ್ತು ಕುವೆಂಪು ವಿಶ್ವವಿದ್ಯಾಲಯದ ಸೆಂಟರ್ ಫಾರ್ ಸ್ಟಡಿ ಆಫ್ ಲೋಕಲ್ ಕಲ್ಚರ್ಸ್ (ಸಿ.ಎಸ್.ಎಲ್.ಸಿ.) ನಿರ್ದೇಶಕರೂ ಆದ ಡಾ॥ ರಾಜಾರಾಮ ಹೆಗಡೆಯವರು ಪ್ರಜಾವಾಣಿಗೆ ಬರೆದ ಪ್ರತಿಕ್ರಿಯೆಯಲ್ಲಿ, "...ಅವಮಾನದ ಅನುಭವ ಆದವರೇ ಅದನ್ನು ಪ್ರಮಾಣೀಕರಿಸಬೇಕು ಎನ್ನುವುದು ನಮಗಿರುವ ಒಂದೇ ಮಾರ್ಗ... ಮಡೆಸ್ನಾನದ ಕೆಟ್ಟ ಪರಿಣಾಮದ ಕುರಿತು ವಾದಿಸುವ ನಿಟ್ಟಿನಲ್ಲಿ ಇದುವರೆಗೂ ಬಂದ ಪ್ರತಿಕ್ರಿಯೆಗಳು ಜಾತಿವ್ಯವಸ್ಥೆ / ಪದ್ಧತಿ ಎಂಬ ಮತ್ತೊಂದು ಅಂಶವನ್ನು ಎಳೆದು ತಂದು ಅದರ ಪರಿಣಾಮದ ಕುರಿತು ಮಾತನಾಡುತ್ತವೆ. ಆದರೆ ಮಡೆಸ್ನಾನಕ್ಕೂ ಜಾತಿಪದ್ಧತಿಗೂ ಏನು ಸಂಬಂಧ ಎನ್ನುವುದನ್ನು ಯಾರೂ ಹೇಳುತ್ತಿಲ್ಲ. ಅವರು ತಿಳಿಸುವ ಒಂದೇ ಒಂದು ಸಾಕ್ಷಿ ಯೆಂದರೆ ಬ್ರಾಹ್ಮಣರ ಎಲೆಯ ಮೇಲೆ ಹೊರಳಾಡಲಾಗುತ್ತಿದೆ ಎಂಬುದು. ಆದರೆ ಎಲ್ಲ ಬ್ರಾಹ್ಮಣರ ಎಲೆಯ ಮೇಲೂ ಹೊರಳಾಡಲಾಗುವುದಿಲ್ಲ ಹಾಗೂ ಬ್ರಾಹ್ಮಣರೂ ಉಳಿದವರಂತೇ ಹೊರಳಾಡುತ್ತಾರೆ ಎಂಬುದು ಈ ಸಾಕ್ಷಿಯನ್ನು ಹೊಡೆದು ಹಾಕುತ್ತದೆ. ಇನ್ನೇನು ಕೆಟ್ಟ ಪರಿಣಾಮ ಎಂಬುದನ್ನು ಯಾರೂ ಹೇಳುತ್ತಿಲ್ಲ... ನಮ್ಮ ಸಂಪ್ರದಾಯಗಳಲ್ಲೇ ಜ್ಞಾನಿಗಳು ಎಂದೂ ಇಂಥ ಆಚರಣೆ ಗಳನ್ನು ಸಮರ್ಥಿಸಲಿಲ್ಲ, ಬದಲಾಗಿ ಅವುಗಳನ್ನು ಗೇಲಿ ಮಾಡಿದರು ಎಂಬುದು ನಮಗೆಲ್ಲ ತಿಳಿದ ವಿಷಯ. ಆದರೆ ಅವರಿಗಿದ್ದ ಕಾರಣ ಬೇರೆಯೇ ಆಗಿತ್ತು... ವ್ಯಕ್ತಿಯೊಬ್ಬನನ್ನು ಎಚ್ಚರಿಸುವುದೇ ಹೊರತೂ ಆಚರಣೆಗಳನ್ನು ನಿಲ್ಲಿಸುವ ಕುರಿತಲ್ಲ ಅಥವಾ ಮೋಕ್ಷಾಕಾಂಕ್ಷೆಯೇ ಇಲ್ಲದವರನ್ನು ಕುರಿತೂ ಅಲ್ಲ. ಇಂಥ ಆಚರಣೆಗಳು ಹಾಗೂ ಅವನ್ನು ಆಚರಿಸುವವರು ಎಲ್ಲ ಕಾಲದಲ್ಲೂ ಇದ್ದರೆ ಎಂಬುದನ್ನು ನಮ್ಮ ಜ್ಞಾನ ಸಂಪ್ರದಾಯಗಳು ಒಪ್ಪಿಕೊಂಡ ಹಾಗಿದೆ... ನಾವು ಹೇಳುವ ಒಂದೇ ಕಾರಣವಾದ ಜಾತಿಪದ್ಧತಿಗೂ ಆ ಆಚರಣೆಗೂ ಇರುವ ಸಂಬಂಧ ನಮಗೇ ಕಟ್ಟುಕಥೆಯಂತೆ ಕಾಣುತ್ತಿರುವಾಗ, ಆಚರಿಸುವವರ ಅನುಭವಕ್ಕೇ ಬರದಿರುವಾಗ ಅವರಿಗೆ ಅದು ಹೇಗೆ ಮನದಟ್ಟಾದೀತು ?"

ಇದೇ ಸಿ.ಎಸ್.ಎಲ್.ಸಿ. ಗುಂಪಿಗೆ ಸೇರಿದ ಸಂತೋಷ್ ಕುಮಾರ ಮತ್ತು ಪ್ರವೀಣ್ ಟಿ. ಎಲ್. ಇವರು 'ಎಂಜಲೆಲೆಯ ಮೇಲೆ ಹೊರಳಾಟ : ಒಂದು ಭಿನ್ನ ನೋಟ' ಎನ್ನುತ್ತಾ ಈ ರೀತಿ ಹೇಳುತ್ತಾರೆ, "...ಆಚರಣೆಗಳನ್ನು ವಿವರಿಸುವ ಕಾರ್ಯ ಅದರಲ್ಲಿ ಪಾಲ್ಗೊಳ್ಳುವ ಜನರಿಗೆ ಅಗತ್ಯವಿರುವುದಿಲ್ಲ. ಸುಮ್ಮನೆ ಮಾಡಬೇಕು ಮಾಡುತ್ತಾರಷ್ಟೆ. ಆ ಕಾರಣದಿಂದ ಅವರನ್ನು ಮೂಢರು ಎನ್ನುವುದು ಅವಸರದ ಹೇಳಿಕೆಯಾಗುತ್ತದೆ... ಆ ಆಚರಣೆಗಳಿಗೆ ಕಾರಣಗಳಿಲ್ಲ, ಹಾಗಾಗಿ ಮೂಢ ಆಚರಣೆಗಳು, ಆ ಕಾರಣಕ್ಕಾಗಿ ಅವುಗಳನ್ನು ನಿಲ್ಲಿಸಬೇಕು ಎನ್ನುವವರು ಮನುಷ್ಯ ವರ್ತನೆಯ ಒಂದು ವೈಜ್ಞಾನಿಕ ಸತ್ಯವನ್ನು ಅರಿತಿಲ್ಲ. ಅದೆಂದರೆ, ಆಚರಣೆಗಳನ್ನು ಮುಂದುವರಿಸಲು ಕಾರಣಗಳು ಇಲ್ಲ ಎನ್ನುವುದೇ ಅವುಗಳನ್ನು ನಿಲ್ಲಿಸಲು ಕಾರಣವಾಗಲಾರದು. ಅವುಗಳನ್ನು ನಿಲ್ಲಿಸಲು ಪ್ರತ್ಯೇಕ ಕಾರಣಗಳು ಬೇಕು. ಇದು ಮಾನವ ಆಚರಣೆಯ ಕುರಿತು ವಿಜ್ಞಾನಿಗಳೇ ಹೇಳಿದ ವಿಚಾರ. ಹಾಗಾಗಿ ಒಂದೊಮ್ಮೆ ಜನರಿಗೆ ಯಾವುದಾದರೂ ಆಚರಣೆ ತಪ್ಪು, ಅದನ್ನು ನಿಲ್ಲಿಸಬೇಕು ಎಂದು ಅನಿಸಿದಾಗೆಲ್ಲ ಕಾಲಕ್ರಮೇಣ ಅಂತಹ ಆಚರಣೆಗಳನ್ನು ಪರಿವರ್ತಿಸಿಕೊಂಡಿದ್ದಾರೆ ಇಲ್ಲವೆ ಬಿಟ್ಟು ಬಿಟ್ಟಿದ್ದಾರೆ. ಹೀಗೆ ಎಷ್ಟೋ ಆಚರಣೆಗಳು ಅಳಿದಿವೆ, ಎಷ್ಟೋ ಹೊಸದಾಗಿ ಹುಟ್ಟಿಕೊಂಡಿವೆ ಎಂಬುದು ಎಲ್ಲರಿಗೂ ತಿಳಿದಿರುವ ಸಾಮಾನ್ಯ ಸಂಗತಿಯಾಗಿದೆ..."

ಈ ಚರ್ಚೆಗೆ ಅಕ್ಷರ ಅವರು ಬರೆದ ಉತ್ತರದಲ್ಲಿ ಅವರು ತಮ್ಮ ಹೊಸ 'ಸಂಸ್ಕೃತಿ ಚಿಂತನೆ'ಗೆ ಅಶೀಶ್ ನಂದಿಯವರ ಮೂಲವನ್ನು ಗುರುತಿಸುತ್ತಾರೆ. ಈ ಚರ್ಚೆಯಲ್ಲಿ ಅಕ್ಷರ ಇಟ್ಟ ವಿಚಾರಸರಣಿ ಅವರ ವೈಯಕ್ತಿಕ ಅಭಿಪ್ರಾಯ ಮಾತ್ರ ಆಗಿರಲಿಲ್ಲ. ಇದರ ಹಿಂದೆ ಒಂದು ನಿರ್ದಿಷ್ಟ ಚಿಂತನ ಕ್ರಮ, ವ್ಯವಸ್ಥಿತ ಗುಂಪು ಇದೆ. ಆದ್ದರಿಂದ ಎಚ್. ಎಸ್. ಶಿವಪ್ರಕಾಶ್ ಅವರು ಹೇಳುವಂತೆ ಬಾಣವನ್ನು ಅದರ ಪಾಡಿಗೆ ಬಿಟ್ಟು ಬಾಣ ಬಿಟ್ಟವರನ್ನು ಮತ್ತು ಬಿಡಿಸಿದವರನ್ನು ತರಾಟೆಗೆ ತೆಗೆದುಕೊಳ್ಳಬೇಕು.

ನಂಬಿಕೆಗಳು ಮತ್ತು 'ಉಗ್ರ' ಸೆಕ್ಯುಲರ್ ಮಂದಿ ಬಗ್ಗೆ ಅಶೀಶ್ ನಂದಿ ಅವರ ವಿಚಾರಗಳನ್ನು ಅಕ್ಷರ ಅವರೇ ಅಲಹಾಬಾದು ಹೈಕೋರ್ಟಿನ ಕೋಲಾಹಲ ಹುಟ್ಟಿಸಿದ ಅಯೋಧ್ಯಾ ತೀರ್ಪಿನ ಬಗ್ಗೆ 'ಕರುಣೆ ಮಾನವೀಯತೆಗಳ ತೀರ್ಪು' ಎಂಬ ಅವರ ಲೇಖನದ ಮೂಲಕ ಕನ್ನಡಿಗರಿಗೆ ಪರಿಚಯಿಸಿದ್ದರು. ಸಾಕಷ್ಟು ಚರ್ಚೆ–ವಿವಾದಕ್ಕೆ ಕಾರಣವಾಗಿದ್ದ ಈ ಲೇಖನದಲ್ಲಿ ನಂದಿಯವರು, "ಮೊನ್ನೆ ಬಂದ ಅಲಹಾಬಾದ್ ಉಚ್ಚ ನ್ಯಾಯಲಯದ ತೀರ್ಪು ಜನಸಮುದಾಯದ ನಂಬಿಕೆಗಳನ್ನು ಮುಖ್ಯವಾಗಿ ಗಣನೆಗೆ ತೆಗೆದುಕೊಂಡಿದೆ ಆದ್ದರಿಂದ ಅದು ದೋಷಪೂರ್ಣ – ಎಂಬ ಮಾತನ್ನು ಎಲ್ಲರೂ ಒಪ್ಪುವುದಿಲ್ಲ. ನಾನಂತೂ ಇದನ್ನೊಂದು ಒಳ್ಳೆಯ ತೀರ್ಪೆಂದೇ ಭಾವಿಸಿದ್ದೇನೆ... ಈ ಮೊಕದ್ದಮೆಯನ್ನು ತೀರ್ಮಾನಿಸಿದ ನ್ಯಾಯಾಧೀಶರಲ್ಲಿ ಮೂವರಲ್ಲಿಬ್ಬರು ತುಸುಮಟ್ಟಿಗೆ ನ್ಯಾಯದ ಪ್ರಶ್ನೆಯನ್ನು ಬದಿಗೆ ಸರಿಸಿ ಇದುವರೆಗೂ ಯಾವ ವಿಚಾರದ ಬಗ್ಗೆ ಕೇವಲ ರಾಜಕೀಯ ಮತ್ತು ಬೌದ್ಧಿಕ ವರಸೆಗಳನ್ನು ಮಾತ್ರ ಹಾಕಲಾಗುತ್ತಿತ್ತೋ ಅದೇ ವಿಚಾರವನ್ನು ಕರುಣೆ ಮತ್ತು ಮಾನವೀಯತೆಯ ದೃಷ್ಟಿಯಿಂದ ನೋಡುವುದಕ್ಕೆ ಎಡೆ ಮಾಡಿಕೊಟ್ಟರು – ಎಂಬುದು ನನಗೆ ಸಂತೋಷ ತಂದಿದೆ... ನಮ್ಮದು ಬಹುಬಗೆಯ ನಂಬಿಕೆಗಳಿರುವ ದೇಶವೆಂಬುದೂ ಮತ್ತು ಅಂಥ ನಂಬಿಕೆಗಳು ನಮ್ಮ ಸಾರ್ವಜನಿಕ ಜೀವನದ ದಿಕ್ಕನ್ನು ನಿರ್ಣಯಿಸುತ್ತದೆಂಬುದೂ ನಮ್ಮ ಹಲವು ಧೀಮಂತರಿಗೆ ಸಿಟ್ಟು ತರಿಸುವ ಸಂಗತಿಯಾಗಿದೆ. ಆದರೆ ಅಂಥ ಧೀಮಂತರ ಅಸಮಾಧಾನದ ನಡುವೆಯೂ ಈ ದೇಶದಲ್ಲಿ ನಂಬಿಕೆಗಳೇ ಬಡಜನರ ಸಮಾಜ ಶಾಸ್ತ್ರವೂ ರಾಜಕೀಯ ಸಿದ್ಧಾಂತಗಳೂ ಆಗಿ ಮುಂದುವರಿದಿವೆ... ಇವತ್ತಿನ ಸವಾಲು ಯಾವುದೆಂದರೆ ಈ ನಂಬಿಕೆಯ ಮತ್ತು ರಾಜಕಾರಣದ ವಿಚಿತ್ರ ಬೆರಕೆತನವನ್ನು ಕಾಪಾಡುವುದು; ನಮ್ಮಲ್ಲೇ ಬಂದ ಹಲವು ಧೀಮಂತ ರಾಜಕಾರಣಿಗಳಿಗೆ ಇದನ್ನು ರಕ್ಷಣೆ ಮಾಡುವ ವಿಧಾನ ಗೊತ್ತಿತ್ತು. ಧರ್ಮ ಮತ್ತು ರಾಜಕಾರಣ ಗಳನ್ನು ಬೇರ್ಪಡಿಸುವುದರಲ್ಲಾಗಲೀ ಅಥವಾ ಅದರಲ್ಲಿ ಯಾವುದೊಂದಕ್ಕೆ ಭಯಪಡುವುದರಿಂದಾಗಲೀ ಸಮಸ್ಯೆ ಬಗೆಹರಿಯದು..." ಎಂದಿದ್ದರು.

ಇದಕ್ಕೆ ಪ್ರತಿಕ್ರಿಯೆ ನೀಡುತ್ತಾ ವಿ. ಎಸ್. ಶ್ರೀಧರ್‌ರವರು (ಪ್ರಜಾವಾಣಿ ಸಾಪ್ತಾಹಿಕ ಪುರವಣಿಯಲ್ಲಿ), "...ಜನಸಮುದಾಯ ಲಾಗಾಯ್ತಿಂದ ಉಳಿಸಿಕೊಂಡು ಬಂದಿರುವ ನಂಬಿಕೆಗಳಿಗೂ, ರಾಜಕೀಯ ಪ್ರೇರಣೆಯಿಂದ ರಚಿತವಾಗಿರುವ 'ಆಧುನಿಕ' ನಂಬಿಕೆಗಳಿಗೂ ಇರಬಹುದಾದ ವ್ಯತ್ಯಾಸವನ್ನು ಇದು ಮರೆಮಾಚುತ್ತದೆ. ರಾಮಜನ್ಮಭೂಮಿ ವಿವಾದ ಇಂಥ ಅಧಿಕಾರದ ಸಂಬಂಧದೊಳಗಿನ ಘರ್ಷಣೆ ಯಲ್ಲಿ ಕಟ್ಟಲಾದ ಒಂದು ನಂಬಿಕೆ. ಒಂದುವೇಳೆ ಈ ತೀರ್ಪು ರಾಮನ ಜನ್ಮಸ್ಥಳದ ನಿರ್ದಿಷ್ಟತೆಯನ್ನು ನಿರಾಕರಿಸಿದ್ದರೂ, ಜನರ ನಂಬಿಕೆಗೇನೂ ಧಕ್ಕೆಯಾಗುತ್ತಿರಲಿಲ್ಲ. ಬಹುಶಃ ಈಗ ಬಂದಿರುವ ತೀರ್ಪು ಅದನ್ನು ಹೆಚ್ಚಿಸುವುದೂ ಇಲ್ಲ. ಆದರೆ ಈ ತೀರ್ಪಿನಿಂದ ಲಾಭವಾಗುವುದು, ಇಂಥ 'ಆಧುನಿಕ ನಂಬಿಕೆ'ಗಳ ಆಧಾರದ ಮೇಲೆ ತನ್ನ ಶಕ್ತಿ ಸಂಚಯ ಮಾಡಿಕೊಂಡಿರುವ ಮತ್ತು ಇನ್ನಷ್ಟು ವಿವಾದ ಗಳನ್ನು ತನ್ನ ಬತ್ತಳಿಕೆಯಲ್ಲಿಟ್ಟುಕೊಂಡಿರುವ ಸಂಘಪರಿವಾರಕ್ಕೆ ಮಾತ್ರ. ಅಶೀಶ್ ನಂದಿಯವರು ಹೇಳುವ ಕರುಣೆ, ಮಾನವೀಯತೆಗಳು ಕೂಡ ನಿರ್ದಿಷ್ಟ ಅಧಿಕಾರ ಸಂಬಂಧಗಳಿಗೆ ಅತೀತವಾದ, ವಿಶ್ವಾತೀತವಾದ ಸಂಗತಿಗಳೇನಲ್ಲ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ತೀರ್ಪು ಎತ್ತಿಹಿಡಿದಿರುವುದು ರಾಜಕೀಯ ಪ್ರೇರಿತ ನಂಬಿಕೆಗಳನ್ನೇ ವಿನಾ ಜನರ ನಂಬಿಕೆಯನ್ನಲ್ಲ. ...

ಸೆಕ್ಯುಲರಿಸ್ಟರು ನಂಬಿಕೆಗೆ ಆಸ್ಪದವೇ ಇಲ್ಲದ 'ಆಧುನಿಕ ಆಲದಮರ'ಕ್ಕೆ ಜೋತು ಬಿದ್ದಿರುವವರು ಎಂಬಂಥ ದುರ್ಬಲ ಕಲ್ಪನೆಯ ವಿರುದ್ಧ ಸಾಹಸ ಪ್ರದರ್ಶನ ಸುಲಭ. ಆದರೆ ಈ ವಾದ ಜನಪರವಾದ ನಂಬಿಕೆ, ಆಚರಣೆಗಳನ್ನು ಎತ್ತಿ ಹಿಡಿಯುವ, ಆ ಮೂಲಕ 'ಆಧುನಿಕ' ನಂಬಿಕೆಗಳ ವಿರುದ್ಧ ಹೋರಾಡುವ ಸೆಕ್ಯುಲರ್ ನಿಲುವುಗಳು ಕೂಡ ಇರಬಲ್ಲದು ಎಂಬುದನ್ನು ಸಾರಾಸಗಟಾಗಿ ನಿರಾಕರಿಸುತ್ತದೆ" ಎಂದಿದ್ದಾರೆ.

ಅಶೀಶ್ ನಂದಿಯವರ ಧಾರೆಯೊಂದಿಗೇ ಮೇಳೈಸಿದ ಮತ್ತೊಂದು ಟಿಸಿಲು ಕರ್ನಾಟಕ ಮೂಲದಿಂದಲೇ ಬೆಳೆಯುತ್ತಿದೆ. ಕಳೆದ ಕೆಲವು ವರ್ಷಗಳಿಂದ ಸಿ.ಎಸ್.ಎಲ್.ಸಿ. ಈ ಹೊಸ 'ಸಂಸ್ಕೃತಿ ಚಿಂತನೆ'ಯನ್ನು ವಿಚಾರ ಸಂಕಿರಣ, ಸಂವಾದಗಳ ಮೂಲಕ ಕರ್ನಾಟಕದಲ್ಲಿ ಬಿರುಸಾಗಿ ಪ್ರಚಾರ ಮಾಡುತ್ತಿದ್ದು ಹಲವು ವಿಷಯಗಳ ಬಗ್ಗೆ ಅದರ 'ಹೊಸ ದೃಷ್ಟಿಕೋನ'ವನ್ನು ಗಂಭೀರವಾಗಿ ಪರಿಗಣಿಸ ಬೇಕೆಂದು ಒತ್ತಾಯಿಸುತ್ತಿದೆ. ಪ್ರಸ್ತುತ ಪ್ರಜಾವಾಣಿ ಪತ್ರಿಕೆಯಲ್ಲಿ ನಡೆಯುತ್ತಿರುವ ವಚನ ಚಳುವಳಿಗೆ ಸಂಬಂಧಿಸಿದ ಚರ್ಚೆಯೂ ಸಹ ಇದೇ ಹೊಸ ದೃಷ್ಟಿಕೋನದ

ಮೂಲದ್ದಾಗಿದೆ. ಈ 'ಸಂಸ್ಕೃತಿ ಚಿಂತನೆ'ಯ 'ಹೊಸ ದೃಷ್ಟಿಕೋನ'ದ ರೂವಾರಿ ಪ್ರೊ॥ ಬಾಲಗಂಗಾಧರ ರಾವ್. ಮೂಲತಃ ಕರ್ನಾಟಕದವರೇ ಆದ ಅವರು ೧೯೮೦ರ ದಶಕದಿಂದಲೇ ಬೆಲ್ಜಿಯಂ ದೇಶದ ಗೆಂಟ್ ವಿಶ್ವವಿದ್ಯಾಲಯದಲ್ಲಿ ಸಂಶೋಧನೆ ನಡೆಸುತ್ತಿದ್ದು ಈಗ ಪ್ರೊಫೆಸರ್ ಮತ್ತು 'ಸಂಸ್ಕೃತಿಗಳ ತೌಲನಿಕ ವಿಜ್ಞಾನ' ಸಂಶೋಧನಾ ಕೇಂದ್ರದ ನಿರ್ದೇಶಕರೂ ಆಗಿದ್ದಾರೆ. ಅವರ ನಾಯಕತ್ವದಲ್ಲಿ ೨೦೦೪ರಿಂದ ೨೦೦೭ರವರೆಗೆ ನಡೆದ ಕುವೆಂಪು ಮತ್ತು ಗೆಂಟ್ ವಿಶ್ವವಿದ್ಯಾಲಯಗಳ ಜಂಟಿ ಪ್ರಾಜೆಕ್ಟಿನ ಫಲವಾಗಿ ಸಿ.ಎಸ್.ಎಲ್.ಸಿ. ಸ್ಥಾಪಿತವಾಯಿತು. ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಜಾತಿಯ ಬಗ್ಗೆ ಅಧ್ಯಯನ ಪ್ರಾಜೆಕ್ಟಿನ ಉದ್ದೇಶವಾಗಿತ್ತು.

ಈ ಪ್ರಾಜೆಕ್ಟಿನ 'ಸಫಲತೆ'ಯ ಹಿನ್ನೆಲೆಯಲ್ಲಿ ೨೦೦೫ರಲ್ಲಿ ಕುವೆಂಪು ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಸೋಷಿಯಲ್ ಸೈನ್ಸಸ್‌ನ ಹಲವು ಅಧ್ಯಾಪಕರಿಗೆ ಗೆಂಟ್ ವಿಶ್ವವಿದ್ಯಾಲಯದಲ್ಲಿ ತರಬೇತಿ ನೀಡಲಾಯಿತು. ೨೦೦೬ರಲ್ಲಿ ಈ ಅಧ್ಯಾಪಕರನ್ನು ಒಳಗೊಂಡು ಸಿ.ಎಸ್.ಎಲ್.ಸಿ. ಸಂಶೋಧನಾ ಕೇಂದ್ರ ಸ್ಥಾಪಿಸಲಾಯಿತು. ಪ್ರೊ॥ ಬಾಲಗಂಗಾಧರ ಅವರು ಈ ಕೇಂದ್ರದ ಚೀಫ್ ಪ್ರೊಮೋಟರ್ ಆಗಿದ್ದು, ಪ್ರೊ॥ ಜೆ. ಎಸ್. ಸದಾನಂದ ಸ್ಥಳೀಯ ಪ್ರೊಮೋಟರ್ ಮತ್ತು ಪ್ರೊ॥ ರಾಜಾರಾಮ ಹೆಗಡೆ ನಿರ್ದೇಶಕರಾಗಿದ್ದಾರೆ. ೨೦೦೬ರಲ್ಲಿ ಯುರೋಪಿಯನ್ ಕಮಿಷನ್‌ನ ಏಷ್ಯಾ–ಲಿಂಕ್ ಪ್ರಾಜೆಕ್ಟ್ ಅಂಗವಾಗಿ ಸಿ.ಎಸ್.ಎಲ್.ಸಿ.ಯ ೫ ಸಂಶೋಧಕರಿಗೆ ೫ ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ತರಬೇತಿ ನೀಡಲಾಯಿತು. ೨೦೦೬ರಲ್ಲೇ ಕುವೆಂಪು ವಿಶ್ವವಿದ್ಯಾಲಯದ ಪೂರ್ಣ ತಂಡ ಗೆಂಟ್ ವಿಶ್ವವಿದ್ಯಾಲಯಕ್ಕೆ ತೆರಳಿ ಒಂದು ಎಂ.ಒ.ಯು. ಮತ್ತು ಸಹಕಾರ ಒಪ್ಪಂದಕ್ಕೆ ಸಹಿ ಹಾಕಿತು.



ಸಿ.ಎಸ್.ಎಲ್.ಸಿ. ಈಗ ಬೆಲ್ಜಿಯಂ ದೇಶದ ಫ್ಲೆಮಿಶ್ ಇಂಟರ್ ಯುನಿವರ್ಸಿಟಿ ಧನಸಹಾಯದಿಂದ ನಡೆಯುತ್ತಿದೆ. 'ಸಮಾಜ ವಿಜ್ಞಾನಗಳ ನಿರ್ವಸಾಹತೀಕರಣ' ಸಿ.ಎಸ್.ಎಲ್.ಸಿ.ಯ ಮುಖ್ಯ ಧ್ಯೇಯಗಳಲ್ಲಿ ಒಂದು. 'ಜಾತಿ/ಅಸಮಾನತೆ ಮತ್ತು ಬಹುತ್ವ / ಸಂಘರ್ಷಗಳ ಮೇಲೆ ಸಂಶೋಧನೆ ನಡೆಸುವುದು' ಮತ್ತು 'ಸ್ಥಳೀಯ ಸಮುದಾಯಗಳ ಪಾರಂಪರಿಕ ವ್ಯಾವಹಾರಿಕ ಜ್ಞಾನಗಳನ್ನು ತೆಗೆದುಕೊಂಡು ಸಂಘರ್ಷಗಳ ನಿವಾರಣೆಗೆ ಬದಲಿ ವ್ಯೂಹಗಳನ್ನು ರೂಪಿಸುವುದು' ಅದರ ಪ್ರಮುಖ ಉದ್ದೇಶಗಳು. ಆಶಾ (ಎ.ಎಸ್.ಎಚ್.ಎ. – ಅಕಾಡೆಮಿ ಆಫ್ ಸೋಷಿಯಲ್ ಸಾಯನ್ಸಸ್ ಅಂಡ್ ಹ್ಯುಮಾನಿಟಿಸ್) ಎಂಬ ಸಂಸ್ಥೆಯನ್ನೂ ಸ್ಥಾಪಿಸಲಾಗಿದೆ. ಆಶಾ ಈ ಧ್ಯೇಯ ಮತ್ತು ಉದ್ದೇಶಗಳನ್ನು ಕರ್ನಾಟಕದ ಇತರ ವಿಶ್ವವಿದ್ಯಾಲಯಗಳಿಗೂ ವಿಸ್ತರಿಸಲು, ರಾಜ್ಯದ ಸಮಾಜ ವಿಜ್ಞಾನ ಸಂಶೋಧನೆಯಲ್ಲಿರುವ 'ಬಿಕ್ಕಟ್ಟನ್ನು ಪರಿಹರಿಸಲು' ಮತ್ತು ಅದನ್ನು 'ಪುನರುಜ್ಜೀವನಗೊಳಿಸಲು' ಶ್ರಮಿಸಲಿದೆ.

ಈ ಉದ್ದೇಶದ ಸಿ.ಎಸ್.ಎಲ್.ಸಿ.ಯ ಇತರ ಸಂಶೋಧನೆಗಳ ಫಲಿತಾಂಶಗಳನ್ನು ಗಮನಿಸಬೇಕಾಗಿದೆ.

"...ಈಗಿರುವ ಅಸ್ಪೃಶ್ಯತೆಯ ಆಚರಣೆಯ ನಿರೂಪಣೆಗಳನ್ನು ಇಂಡಿಯಾದಲ್ಲಿರುವ ಹಿಂದೂ ಧರ್ಮದ ಜತೆಗೆ ಗುರುತಿಸಲಾಗುತ್ತದೆ. ನಮ್ಮ ಇತ್ತೀಚಿನ ಸಂಶೋಧನೆಗಳಲ್ಲಿ ಇದು ಕಂಡಿಲ್ಲ. ಆದ್ದರಿಂದ ಇವು ಸ್ವ–ನಿರೂಪಣೆಗಳಲ್ಲ, ಬದಲಾಗಿ ಇಂಡಿಯಾದ ಸಮಾಜದ ಯುರೋಪಿಯನ್ ತಿಳುವಳಿಕೆಯ ಫಲ ಎಂಬುದು ನಮ್ಮ ತೀರ್ಮಾನ. ನಮ್ಮ ಅಧ್ಯಯನಗಳು ಒಂದಲ್ಲ ಒಂದು ರೂಪದಲ್ಲಿ ಅಸ್ಪೃಶ್ಯತೆಯ ಆಚರಣೆಯ ಅಸ್ತಿತ್ವವನ್ನು ಗುರುತಿಸುವುದರಿಂದ ಮತ್ತು ಹಿಂದೂ ಧರ್ಮದ ಜೊತೆ ಅದರ ಸಂಬಂಧ ಕಂಡುಬಂದಿಲ್ಲವಾದ್ದರಿಂದ ಈ ಚೌಕಟ್ಟಿನ ಹೊರಗಿಂದ ಅದನ್ನು ನೋಡಬೇಕಾಗಿದೆ..." (ಡೆಪ್ಯೂಟಿ ಡೈರೆಕ್ಟರ್ ಡಾ॥ ಷಣ್ಮುಖ ಎ. ಅವರ ಸಂಶೋಧನಾ ಕಾರ್ಯದ ನಿರೂಪಣೆಯಲ್ಲಿ – ಸಿ.ಎಸ್.ಎಲ್.ಸಿ. ವೆಬ್‌ಸೈಟಿನಿಂದ)

"...ವಚನಗಳ ಈವರೆಗಿನ ಅಧಿಕೃತ ಓದುವಿಕೆ ಅವನ್ನು ಜಾತಿಪದ್ಧತಿಯ ಮೊಟ್ಟಮೊದಲನೆಯ ಟೀಕೆ ಎಂದು ಗ್ರಹಿಸಿದೆ. ಆದರೆ ಈ ಗ್ರಹಿಕೆಯ ಹಿಂದಿರುವ ವಿದ್ವತ್ತಿನ ಹೂರಣದಲ್ಲಿ ಸಮಸ್ಯೆಯಿದೆ... ಇವರ ಸಂಶೋಧನೆ ವಚನಗಳ ಸಮಗ್ರ ಪಠ್ಯ ವಿಶ್ಲೇಷಣೆ ಮಾಡಿ ಈ ಗ್ರಹಿಕೆಗೆ ಅಥವಾ ವಾದಕ್ಕೆ ಯಾವುದೇ ಆಧಾರಗಳಿಲ್ಲ ಎಂದು ತೋರಿಸಿದೆ... ಇವರು ಪರಂಪರೆಗಳ ನಡುವೆ ವಾಗ್ವಾದಗಳನ್ನು ಅಧ್ಯಯನ ಮಾಡುತ್ತಿದ್ದಾರೆ... ಲಿಂಗಾಯತರ ಬ್ರಾಹ್ಮಣ ಟೀಕೆ ವಚನ ಚಳುವಳಿಗೆ ವಿಶಿಷ್ಟವಾದದ್ದೂ ಅಲ್ಲ. ಬ್ರಾಹ್ಮಣ್ಯದ ವಿರುದ್ಧ ದಂಗೆಯೂ ಅಲ್ಲ... ಪರಂಪರೆಗಳ ನಡುವೆ ಪರಸ್ಪರ ಟೀಕೆ ಈ ಪರಂಪರೆಗಳಷ್ಟೇ ಹಳೆಯದು... ಈಗ ಯುರೋಪಿಯನ್ ಚಿಂತಕರು ಲಿಂಗಾಯತರ ಪರಂಪರೆಯನ್ನು ಜಾತಿ–ವಿರೋಧಿ ಚಳುವಳಿ ಎಂದು ತಪ್ಪಾಗಿ ಯಾಕೆ ಓದಿದ್ದಾರೆ ಎಂದು ವಿವರಿಸಬಹುದು. ಲಿಂಗಾಯತ ವಿದ್ವಾಂಸರ ಮತ್ತು ವಚನಕಾರರ ಬ್ರಾಹ್ಮಣ–ವಿರೋಧಿ ವಾಗ್ವಾದವನ್ನು ಜಾತಿ–ವಿರೋಧ ಎಂದು ತಪ್ಪಾಗಿ ಅರ್ಥೈಸಲಾಗಿದೆ..." (ಸಂಶೋಧನಾ ಸಂಯೋಜಕ ಡಂಕಿನ್ ಝಳಕಿ ಅವರ ಸಂಶೋಧನಾ ಕಾರ್ಯದ ನಿರೂಪಣೆಯಲ್ಲಿ – ಸಿ.ಎಸ್.ಎಲ್.ಸಿ. ವೆಬ್‌ಸೈಟಿನಿಂದ)

"...ಮತಾಂತರವನ್ನು ನಿಷೇಧಿಸಬೇಕು ಎಂಬ ಡಾ॥ ಎಂ. ಚಿದಾನಂದಮೂರ್ತಿಯವರ ವಾದವನ್ನು ಸಾರಾಸಗಟಾಗಿ ತಳ್ಳಿಹಾಕುವಂತಿಲ್ಲ. ಕಾರಣವೆಂದರೆ ಭಾರತದ ಉದಾರವಾದಿ ಪ್ರಜಾಪ್ರಭುತ್ವದಲ್ಲಿ ಮತಾಂತರವನ್ನು ಬೆಂಬಲಿಸಲು ನಮಗೆ ಸಮರ್ಥನೆಗಳೇ ಸಿಗುವುದಿಲ್ಲ. ಜೊತೆಗೆ ರಿಲಿಜಸ್ ಸ್ವಾತಂತ್ರ್ಯವನ್ನು ಭಾರತದ ಸಂದರ್ಭದಲ್ಲಿ ತಪ್ಪಾಗಿ ಅರ್ಥೈಸಲಾಗಿದೆ. ಬಾಲಗಂಗಾಧರ ಹೇಳುವಂತೆ ಒಂದು ಕಡೆ ರಿಲಿಜನ್ನುಗಳು, ಮತ್ತೊಂದು ಕಡೆ ಸಂಪ್ರದಾಯಗಳ ಸಮೂಹ ಇರುವ ಭಾರತದಂತಹ ಪ್ರಭುತ್ವದಲ್ಲಿ, ಪ್ರಭುತ್ವವು ರಿಲಿಜನ್ನುಗಳ ಕುರಿತು ತಟಸ್ಥವಾಗಿರುವ ನಿಲುವು ಯಾರು ಯಾರನ್ನು ಬೇಕಾದರೂ ಮತಾಂತರ ಮಾಡುವ ಸ್ವಾತಂತ್ರ್ಯವನ್ನು ಕಲ್ಪಿಸುತ್ತದೆ. ಅಂದರೆ ವಾಸ್ತವದಲ್ಲಿ ರಿಲಿಜನ್ನುಗಳು ಮಾತ್ರ ಮತಾಂತರವನ್ನು ಮಾಡಲು ಬೇಕಾದ ಸಲಕರಣೆಗಳನ್ನು ಹೊಂದಿರುವುದರಿಂದ ಪರೋಕ್ಷವಾಗಿ ಪ್ರಭುತ್ವವು ರಿಲಿಜನ್ನುಗಳ ಪರ ಹಾಗೂ ಸಂಪ್ರದಾಯಗಳ (ಮತಾಂತರ ಮಾಡುವ ಯಾವ ಸೌಲಭ್ಯಗಳೂ ಇಲ್ಲದ) ವಿರುದ್ಧದ ನಿಲುವನ್ನು ತಳೆಯಬೇಕಾಗುತ್ತದೆ ಎನ್ನುವ ಸಂಗತಿಯು ರಿಲಿಜಸ್ ಸ್ವಾತಂತ್ರ್ಯದ ಒಂದು ವಿಪರ್ಯಾಸವೇ ಸರಿ... ಭಾರತದಂತಹ ಸೆಕ್ಯುಲರ್ ಪ್ರಭುತ್ವವು ಮತಾಂತರದಂತಹ ವಿಷಯದಲ್ಲಿ ಎದುರಿಸುವ ಹಲವು ಸಮಸ್ಯೆಗಳನ್ನು ನಾವು ಗುರುತಿಸಬಹುದು... ಇದರಿಂದ ಒಂದಂತೂ ಸ್ಪಷ್ಟವಾಗುತ್ತದೆ ಭಾರತದ ಸೆಕ್ಯುಲರಿಸಂಗೆ ಈ ಸಮಸ್ಯೆಯನ್ನು ಬಗೆಹರಿಸುವ ಶಕ್ತಿಯಿಲ್ಲ ಹಾಗೂ ಹಿಂದುತ್ವದಿಂದ ಭಾರತೀಯ ಸಮಾಜಕ್ಕೆ ಎಷ್ಟು ಅಪಾಯವಿದೆಯೋ ಅಷ್ಟೇ ಅಪಾಯ ಸೆಕ್ಯುಲರಿಸಂನಿಂದಲೂ ಇದೆ ಎಂಬುದು. ಹಾಗಾಗಿ ಸೆಕ್ಯುಲರಿಸಂ ಕುರಿತು ನಾವೆಲ್ಲರೂ ಮತ್ತೊಮ್ಮೆ ಚಿಂತಿಸುವ ಅಗತ್ಯವಿದೆ..." (ಸಂತೋಷ್ ಕುಮಾರ – ಮೇಲೆ ಹೇಳಿದ ಸಿ.ಎಸ್.ಎಲ್.ಸಿ. ಬ್ಲಾಗ್‌ನಲ್ಲಿ)

"...ಜಾತಿ ವಿನಾಶ ಮಾಡುವುದು ಎಂದರೆ ಏನು ? ಅದು ವಾಸ್ತವಿಕವಾಗಿ ಸಾಧ್ಯವೇ ? ಜಾತಿ ವಿನಾಶವೆಂದರೆ ಈಗ ಅಸ್ತಿತ್ವದಲ್ಲಿರುವ ಜಾತಿ ಅಸ್ಮಿತೆಯನ್ನು ಸಂಪೂರ್ಣವಾಗಿ ಅಳಿಸಿ ಹಾಕುವುದು. ಜಾತಿಯನ್ನು ಸಂಪೂರ್ಣವಾಗಿ ಏಕೆ ಅಳಿಸಿ ಹಾಕಬೇಕೆಂದರೆ ಅದು ಸಮಾಜದಲ್ಲಿ ಅನ್ಯಾಯ ಶೋಷಣೆಗಳಿಗೆ ದಾರಿ ಮಾಡಿ ಕೊಟ್ಟಿದೆ. ಇದು ಸತ್ಯವೇ ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ಏಕೆಂದರೆ ಯಾವುದೋ ಭಾಗದಲ್ಲಿ ಯಾವುದೋ ಸಮುದಾಯಗಳು ಮತ್ತೊಂದು ಸಮುದಾಯಗಳ ಮೇಲೆ ಅಥವಾ ವೈಯಕ್ತಿಕವಾಗಿ ತೊಂದರೆಯನ್ನು ಉಂಟು ಮಾಡುತ್ತಿದ್ದರೆ ಅದನ್ನು ಖಂಡಿಸಿ ಅದನ್ನು ಹೋಗಲಾಡಿಸುವ ಜವಾಬ್ದಾರಿ

ಪ್ರತಿಯೊಬ್ಬ ನಾಗರೀಕನಿಗೂ ಇದೆ. ಆದರೆ ಎಲ್ಲೋ ಆಗುವ ಘಟನೆಗಳಿಗೆ ಜಾತಿ ಕಾರಣವೆಂದು ಅದೂ ನಿರಾಧಾರವಾಗಿ ಅದನ್ನು ತೆಗಳುತ್ತಾ ಹಾಗೂ ಸಮಸ್ಯೆಯನ್ನು ಸಾರ್ವತ್ರೀಕರಣಗೊಳಿಸಿದರೆ ಶೋಷಣೆ ಎಂಬ ಕಾಯಿಲೆ ವಾಸಿಯಾಗಲಾರದು, ಅದಕ್ಕೆ ಸುಮಾರು ನೂರು ವರ್ಷಗಳಿಂದ ಜಾತಿವ್ಯವಸ್ಥೆಯ ವಿರುದ್ಧ ನಡೆದ ಹೋರಾಟ ಹಾಗೂ ಬಂದಂತಹ ಸಾಹಿತ್ಯಗಳ ವಿಫಲ ಪ್ರಯತ್ನಗಳೇ ಸಾಕ್ಷಿ. ಜಾತಿಯನ್ನು ನಿರ್ದೇಶಿಸುವ ಯಾವುದಾದರೂ ತತ್ವವಿದೆಯೇ ಎಂದು ಹುಡುಕ ಹೊರಟರೆ ಆಗಲೂ ನಾವು ಸೋಲುತ್ತೇವೆ... ಸರಿ ಒಂದೊಮ್ಮೆ ಸುಸಂದರ್ಭ ಬಂದು ಎಲ್ಲಿಯೂ ಜಾತಿಯ ಅಸ್ಮಿತೆ ನಾಶ ವಾಯಿತು ಎಂದಿಟ್ಟುಕೊಳ್ಳುವ. ನಂತರ ಜನರು ಮತ್ತಾವುದೋ ಅಸ್ಮಿತೆಯನ್ನು ಹುಟ್ಟಿಹಾಕಿ ಕೊಳ್ಳುತ್ತಾರೆ, ಅದು ಜಾತಿಯ ಬದಲಿಗೆ ಕಾತಿ, ಪಾತಿ, ವರ್ಗ ಹೀಗೆ ಯಾವುದಾದರೂ ಹೆಸರು ಜಾತಿಯನ್ನು ಬದಲಿಸಬಹುದು. ಆದರೆ ಅವಾಗಲೂ ಇಂತಹ ಶೋಷಣೆಗಳು ದಬ್ಬಾಳಿಕೆಗಳು ಮುಂದು ವರಿದರೆ ಆ ಹೆಸರುಗಳನ್ನೂ ಬಿಡಿ ಎಂದು ಹೇಳಿದರೆ ಅನ್ಯಾಯ ಶೋಷಣೆಗಳು ಹೋಗು ವುದಿಲ್ಲ. ಆದ್ದರಿಂದ ಜಾತಿಗಳನ್ನು ಬಿಡಿ, ನಿಮ್ಮ ಸಂಪ್ರದಾಯಗಳನ್ನು ಬಿಡಿ ಎಂದು ಹೇಳುವು ದಕ್ಕಿಂತ ಸಮಸ್ಯೆಯ ಮೂಲ ಎಲ್ಲಿದೆ ಹಾಗೂ ಅದಕ್ಕೆ ಪರಿಹಾರ ಏನು ಎಂಬುದನ್ನು ಕಂಡು ಹಿಡಿಯುವುದು ಸೂಕ್ತವಾದ ಕೆಲಸ ಎಂಬುದು ನನ್ನ ಅಭಿಪ್ರಾಯ..." (ಜಾತಿ ವಿನಾಶವೋ? ಸಂಪ್ರದಾಯಗಳ ವಿನಾಶವೋ? – ಸಂತೋಷ್ ಕುಮಾರ – ಮೇಲೆ ಹೇಳಿದ ಸಿ.ಎಸ್.ಎಲ್.ಸಿ. ಬ್ಲಾಗ್‌ನಲ್ಲಿ)

ಮಡೆಸ್ನಾನ ವಿವಾದದಲ್ಲಿ ಪರ–ವಿರೋಧ ವಾದಗಳು, ಅಶೀಶ್ ನಂದಿಯವರ ಚಿಂತನೆಗಳು ಮತ್ತು ಅದರ ಸಮಸ್ಯೆಗಳ ಬಗ್ಗೆ ಹೆಚ್ಚು ಹೇಳುವ ಅಗತ್ಯ ಇಲ್ಲ. ಕೊಟ್ಟಿರುವ ವಿವರವಾದ ಉದ್ಧರಣೆ ಗಳಿಂದ ಅವು ಸ್ವಯಂ–ವೇದ್ಯ. ಕೊನೆಯದಾಗಿ ಪ್ರೊ॥ ಬಾಲಗಂಗಾಧರ ಅವರ ಸಿ.ಎಸ್.ಎಲ್.ಸಿ. ಗುಂಪಿನ ಸಂಶೋಧನಾ ಫಲಿತಾಂಶಗಳ ಬಗೆಗೂ ಹೆಚ್ಚು ಹೇಳುವ ಅಗತ್ಯವಿಲ್ಲ. ಈ ನಿರ್ದಿಷ್ಟ ವಿಷಯಗಳ ಬಗೆಗಿನ ವಾದಗಳಿಗೆ ಪ್ರತಿವಾದ ಸ್ಪಷ್ಟ. ಡಂಕಿನ್ ಝಳಕಿಯವರ ಭಯಂಕರ ತೀರ್ಪುಗಳ ಕುರಿತು ಹೆಚ್. ಎಸ್. ಶಿವಪ್ರಕಾಶ್ ಮತ್ತಿತರರು ಪ್ರಜಾವಾಣಿಯಲ್ಲಿ ಸೂಕ್ತವಾದ ಪ್ರತಿವಾದಗಳನ್ನೇ ನೀಡಿದ್ದಾರೆ. ಆದರೆ ಇದರ ಹಿಂದಿರುವ ಒಟ್ಟಾರೆ ಚಿಂತನ ಕ್ರಮ ಏನು ಎಂಬ ಪ್ರಶ್ನೆ ಬಹಳ ಮುಖ್ಯವಾದುದು. ಈ ಪ್ರಶ್ನೆಗೆ ಪ್ರೊ॥ ಐಜಾಜ್ ಅಹ್ಮದ್ ಅವರ ಪ್ರಬಂಧಗಳು ಸಮರ್ಥವಾಗಿ ಉತ್ತರ ಕೊಡುತ್ತವೆ. ಆ ಮೂಲಕ ಕರ್ನಾಟಕದ ಇಂದಿನ ಬೌದ್ಧಿಕ ಚರ್ಚೆಗಳಿಗೆ ಈ ಪುಸ್ತಕ ಅತ್ಯಂತ ಪ್ರಸ್ತುತವಾಗಿದೆ.

ಹೊಸ 'ಸಾಂಸ್ಕೃತಿಕ ಚಿಂತನೆ' ಎನ್ನಲಾಗುವ ಈ ಚಿಂತನ ಕ್ರಮದ ಮೂಲ ನಿಜವಾಗಿಯೂ ಅಮೆರಿಕ, ಫ್ರಾನ್ಸುಗಳಲ್ಲಿ ಹುಟ್ಟಿ ಈಗ ಜಗತ್ತಿನಾದ್ಯಂತ ಹೊಸ ಫ್ಯಾಶನ್ ಆಗಿರುವ ಪೋಸ್ಟ್–ಮಾಡರ್ನಿಸಂ (ಆಧುನಿಕೋತ್ತರವಾದ)ದ ಒಂದು ಕವಲು ಅಥವಾ ಎಳೆ. ಅಶೀಶ್ ನಂದಿ ಅವರದು ಒಂದು ಎಳೆ ಆದರೆ, ಬಾಲಗಂಗಾಧರ ಅವರದು ಇನ್ನೊಂದು ಎಳೆ. ಅಶೀಶ್ ನಂದಿ ಅವರ ಕುಖ್ಯಾತ 'ಒಂದು ಸೆಕ್ಯುಲರಿಸ್ಟ್ ಪ್ರಣಾಳಿಕೆ' ಮತ್ತು ಅವರ ಆತ್ಮೀಯ ರಾದ ಸಬಾಲ್ಟರ್ನಿಸ್ಟ್ ಇತಿಹಾಸಕಾರ ಗ್ಯಾನೇಂದ್ರ ಪಾಂಡೆ ಅವರ 'ಜಾತ್ಯತೀತೆಯ ಪರಂಪರೆಯನ್ನು ಸೃಷ್ಟಿಸಲು ನಡೆಸಿದ ಪ್ರಯತ್ನಕ್ಕೆ ಪ್ರತಿಕ್ರಿಯೆಯಾಗಿ ಕೋಮುವಾದ ಹುಟ್ಟಿತು' ಎಂಬ (ವಿತಂಡ)ವಾದಕ್ಕೆ ಸ್ವತಃ ಪ್ರೊ॥ ಐಜಾಜ್ ಅಹ್ಮದ್ ಅವರೇ ವಿವರವಾದ ಉತ್ತರ ನೀಡಿದ್ದಾರೆ. ಆದ್ದರಿಂದ ನಾನು ಆ ಬಗ್ಗೆ ಏನೂ ಹೇಳಲು ಹೋಗುವುದಿಲ್ಲ.

> **ಕಲೆ**
>
> ಜಗತ್ತಿನ
> ಪ್ರಥಮ ಕಲಾವಿದರು :
> ನೀರು ಮತ್ತು ಗಾಳಿ;
> ಆಮೇಲೆ ಮನುಷ್ಯನ
> ಪಾಳಿ !
>
> ಸಿ.ಪಿ.ಕೆ.
> ಮೈಸೂರು

ಸಿ.ಎಸ್.ಎಲ್.ಸಿ. ಗುಂಪಿನ ಈ ಚಿಂತನಕ್ರಮ ದಿಂದ ಯಾವ ರೀತಿಯ ಅವಾಂತರಗಳು ಆಗುತ್ತವೆ ಎಂದು ಅವರ 'ಸಂಶೋಧನೆಗಳ' 'ಭಯಂಕರ ತೀರ್ಪು'ಗಳ ಮೂಲಕ ಈಗಾಗಲೇ ನೋಡಿದ್ದೇವೆ. ಮಡೆಸ್ನಾನಕ್ಕೂ ಜಾತಿ ಪದ್ಧತಿಗೂ ಏನೂ ಸಂಬಂಧ ಇಲ್ಲ. ಅದನ್ನು ವಿರೋಧಿಸುವುದು ತಪ್ಪು. ಅದರಿಂದ ಏನೂ ಪ್ರಯೋಜನ ಇಲ್ಲ. ಮಡೆಸ್ನಾನ ಅವಮಾನ ಹೌದೇ ಅಲ್ಲವೇ ಎಂಬುದು ನೋಡುಗನ ಮೇಲೆ ಅವಲಂಬಿಸಿದೆ. ಮಡೆಸ್ನಾನ ನಿಲ್ಲಿಸಬೇಕೆಂಬ ಸಾರ್ವತ್ರಿಕ ಕೂಗು ಹಿಂಸೆ ಆಗುತ್ತದೆ. ಜಾತಿ ಪದ್ಧತಿಯೇ ಇಲ್ಲವೆಂದ ಮೇಲೆ ಜಾತಿವಿನಾಶ ಹಾಸ್ಯಾಸ್ಪದ. ಜಾತಿ ಒಂದು ಅಸ್ಮಿತೆ. ಜಾತಿ ನಾಶಮಾಡಿದರೆ ಇನ್ನೊಂದು ಅಸ್ಮಿತೆ ಇರುತ್ತದೆ. ವಚನಗಳಲ್ಲಿ ಜಾತಿ ಪದ್ಧತಿಯ ಟೀಕೆಯೇ ಇಲ್ಲ. ಬ್ರಾಹ್ಮಣರ ಟೀಕೆ ಸಹ ಸುಮ್ಮನೆ ವಾಗ್ವಿವಾದ ಅಷ್ಟೇ. ಇವೆಲ್ಲಾ ಪಾಶ್ಚಿಮಾತ್ಯ /ಆಧುನಿಕ ಚಿಂತನ ಕ್ರಮಗಳ ಪರಿಕರ ಮತ್ತು ಚೌಕಟ್ಟು ಬಳಸು ವುದರಿಂದ ಆಗಿರುವ ತಪ್ಪುಗಳು. ಈಗಿರುವ ವ್ಯವಸ್ಥೆ ಸಹಜ. ಜನ ಅದನ್ನು ಒಪ್ಪಿಕೊಂಡದ್ದರಿಂದ ಅದು ಉತ್ತಮವೂ ಇರಬೇಕು. ಅದನ್ನು ಬದಲಾಯಿಸುವ ಅಗತ್ಯ ಇಲ್ಲ. ಅದರಲ್ಲಿ ಯಾವುದೇ ಬದಲಾವಣೆಗೆ ಒತ್ತಾಯಿಸುವುದಕ್ಕೆ ಯಾರಿಗೂ ಹಕ್ಕು ಇಲ್ಲ. ಅದು ಹಿಂಸೆ ಆಗುತ್ತದೆ. – ಎಂದೆಲ್ಲಾ ಹೇಳುವ ಈ ಚಿಂತನಕ್ರಮದ ಅವಾಂತರಗಳು ಸ್ಪಷ್ಟ. ಅದರ ತಾತ್ವಿಕ ತಪ್ಪು–ಒಪ್ಪುಗಳೇನೇ ಇರಲಿ ಇದೊಂದು ಯಥಾಸ್ಥಿತಿವಾದ ಅಂತ ಯಾರಿಗಾದರೂ ಅರ್ಥ ವಾಗುವ ವಿಚಾರ. 'ಹಿಂದುತ್ವವಾದಿ' ಮತ್ತು 'ಸೆಕ್ಯುಲರ್‌ವಾದಿ'ಗಳನ್ನು ಸಮಾನವಾಗಿ ಟೀಕಿಸುವ ಪೋಸು ಕೊಟ್ಟರೂ, ಅವರ ಯಥಾಸ್ಥಿತಿವಾದದ ಅತ್ಯಂತ ಹೆಚ್ಚಿನ ಪ್ರಯೋಜನ ಆಗಿರುವುದು ಹಿಂದಿನ ಕರ್ನಾಟಕದ ಬಿಜೆಪಿ ಸರ್ಕಾರಕ್ಕೆ. ಆಚರಣೆ ಮಾಡು ವವರು ಒಪ್ಪಿಕೊಳ್ಳುವ ಬದಲಾವಣೆ ಮಾತ್ರ ಮಾಡ ಬಹುದು ಎಂಬ ಸಿ.ಎಸ್.ಎಲ್.ಸಿ. ನಿಲುವಿನಿಂದ ಎಡೆಸ್ನಾನದ ಐಡಿಯಾ ಬಂದಿರಬಹುದೆ? ಹಾಗೇನೆ ಅವಮಾನಿತರಿಂದ 'ನಮಗೆ ಅವಮಾನ ಆಗಲೇ ಇಲ್ಲ' ಎಂದು ಹೇಳಿಸಿದರೆ ಹೇಗೆ ಎಂಬುದರಿಂದ ಮಲೆಕುಡಿಯರ ಸಂಘವೇ ಪ್ರತಿಭಟನೆ ಮಾಡುವ ಐಡಿಯಾ ಸಹ ಬಂದಿರಬಹುದೆ? ಅಶೀಶ್ ನಂದಿ ಅವರು ಹೇಳಿದ 'ನಂಬಿಕೆ ಮತ್ತು ರಾಜಕಾರಣಗಳ ವಿಚಿತ್ರ ಬೆರಕೆತನ'ವನ್ನೇ ತಾನೇ ಬಿಜೆಪಿ ಮಾಡುತ್ತಿರುವುದು.

ಇವೆಲ್ಲದರ ಹಿಂದೆ ಪದೇ ಪದೇ ಬರುವ ಸಂಗತಿ ಯೆಂದರೆ ಸತ್ಯ ಮತ್ತು ವಾಸ್ತವದ ನಿರಾಕರಣೆ. ನಾವು ಕಾಣುವ ಪದಾರ್ಥಗಳ ಹಿಂದೆ ಯಾವುದೇ ಆತ್ಯಂತಿಕ ವಾದ ಸತ್ಯ ಅಥವಾ ವಾಸ್ತವ ಇಲ್ಲ. ಅದೆಲ್ಲ ನೋಡುಗನ ದೃಷ್ಟಿ ಮೇಲೆ ಅವಲಂಬಿಸಿವೆ. ಅಕ್ಷರ ಅವರ 'ರೂಪಕ'ಗಳ ಹಿಂದಿರುವ ಯೋಚನಾ ಲಹರಿಯೂ ಇಂತಹುದೆ. ಅದರ ಮುಂದುವರಿಕೆಯಾಗಿ ಜಾತಿ, ಕೋಮುವಾದ, ಅಸ್ಪೃಶ್ಯತೆ, ಶೋಷಣೆ, ಬಂಡವಾಳಶಾಹಿ, ಸಾಮ್ರಾಜ್ಯಶಾಹಿ ಜಾಗತೀಕರಣ ವ್ಯವಸ್ಥೆ ಮುಂತಾದ ವಾಸ್ತವದ ಗ್ರಹಿಕೆಗಳನ್ನು ನಿರಾಕರಿಸುತ್ತಾರೆ. ಆಧುನಿಕತೆಯ ಆಧಾರಸ್ತಂಭ ಗಳಾದ ತರ್ಕ, ವೈಚಾರಿಕತೆ, ವೈಜ್ಞಾನಿಕತೆ ಎಲ್ಲವನ್ನೂ ನಿರಾಕರಿಸುತ್ತಾರೆ. ಇಂತಹ 'ವಿರಾಟ್ ಕಥನಗಳು' ಮೂಲತಃ ಕೃತಕ ಕಲ್ಪನೆಗಳೆಂದೂ ಮತ್ತು ಸ್ವಭಾವತಃ ಅವು ಸರ್ವಾಧಿಕಾರೀ ಮನೋಧರ್ಮವುಳ್ಳವು ಎನ್ನುತ್ತಾರೆ. ಯಾವುದೇ ರೀತಿಯ ಸಾರ್ವತ್ರಿಕ ಮೌಲ್ಯಗಳು ಅವರಿಗೆ ಸ್ವೀಕಾರಾರ್ಹವಲ್ಲ. ಆದ್ದರಿಂದಲೇ ಪ್ರಜಾಪ್ರಭುತ್ವ, ಸಮಾನತೆ, ಶೋಷಣೆಯಿಂದ ಮುಕ್ತಿ, ಸಮಾಜವಾದ ಮುಂತಾದವು ಅವರಿಗೆ ಸೇರುವುದಿಲ್ಲ. ಇವೆಲ್ಲಾ ಪೋಸ್ಟ್–ಮಾಡರ್ನಿಸಂ (ಆಧುನಿಕೋತ್ತರವಾದ)ದ ಲಕ್ಷಣಗಳು.

ಪೋಸ್ಟ್ ಮಾಡರ್ನಿಸಂ ಸಾಮ್ರಾಜ್ಯಶಾಹಿ ಜಾಗತೀಕರಣದ ಯುಗದ ಪ್ರಧಾನ ಸಿದ್ಧಾಂತ. ಇವೆಲ್ಲವನ್ನೂ ಸಿ.ಎಸ್.ಎಲ್.ಸಿ., ಅಶೀಶ್ ನಂದಿ ಮತ್ತು ಅವರ ಸಿ.ಎಸ್.ಡಿ.ಎಸ್. ಚಿಂತನ ಕ್ರಮ, ಹೇಳಿಕೆ ಮತ್ತು ಚರ್ಚೆಗಳಲ್ಲಿ ನೋಡಬಹುದು. ಇಂತಹ ಸಂಘಟನೆಗಳಿಗೆ ಅಪಾರ ಪ್ರಮಾಣದಲ್ಲಿ ವಿದೇಶಿ (ಮುಖ್ಯವಾಗಿ ಅಮೆರಿಕ ಮತ್ತು ಯುರೋಪು ಗಳಿಂದ) ಹಣ ಹರಿದುಬರುತ್ತಿದೆ. "...ನಮ್ಮ ಸಮಾಜದ ವಿದ್ಯಮಾನಗಳನ್ನು ನಿರ್ವಚಿಸಲು ಪಾಶ್ಚಿಮಾತ್ಯ ಜ್ಞಾನದಿಂದ ಮುಕ್ತವಾದ, ನಮ್ಮದೇ ಸಾಂಸ್ಕೃತಿಕ ಪರಿಕರಗಳನ್ನು ನಾವು ರಚಿಸಿಕೊಳ್ಳಬೇಕು..." ಎನ್ನುವ, 'ಸಮಾಜ ವಿಜ್ಞಾನಗಳ ನಿರ್ವಸಾಹತೀಕರಣ'ಕ್ಕೆ

ಕಂಕಣ ತೊಟ್ಟ ಗುಂಪಿಗೆ 'ಕರುಣಾಮಯಿ' ಯುರೋಪಿಯನ್ ಕಮಿಷನ್ ಮತ್ತು ಬೆಲ್ಜಿಯಂ ವಿಶ್ವವಿದ್ಯಾಲಯಗಳು ಧಾರಾಕಾರವಾಗಿ ಧನಸಹಾಯ ಮಾಡುತ್ತಿರುವುದನ್ನು ಏನೆಂದು ಕರೆಯಬೇಕು. ಆದರೆ ಇವರೇ 'ನೀನೇ ಪರದೇಶಿ ನಾನೇ ಸ್ವದೇಶಿ' ಎಂದು ಈ ನೆಲದಲ್ಲಿ ಹುಟ್ಟಿ ಬಂದು ಯಾವುದೇ ವಿದೇಶೀ ಧನಸಹಾಯಕ್ಕೆ ಕೈಚಾಚದೆ ಇರುವ ಜನಪರ ಚಳುವಳಿಗಾರರಿಗೆ ಹೇಳುತ್ತಾರೆ. ಇದು ತಮ್ಮ 'ವಿದೇಶಿ ಪ್ರಾಯೋಜಿತ' ಅಜೆಂಡಾಗಳನ್ನು ಮುಚ್ಚಿಕೊಳ್ಳಲು ಇರಬಹುದೆ? ಇವರು ಸದಾ ಬೇರೆ ಬೇರೆ ನೆಪಗಳನ್ನು ಹುಡುಕಿಕೊಂಡು ಎಲ್ಲಾ ಜನಪರ ಚಳುವಳಿಗಳನ್ನು ಅಪ್ರಯೋಜಕ ಮತ್ತು ಅರ್ಥಹೀನ ಎಂದು ಲೇವಡಿ ಮಾಡುತ್ತಾರೆ.

ಈ ಬಗ್ಗೆ ಪ್ರಜಾವಾಣಿಯಲ್ಲಿ ಬರೆಯುತ್ತಾ ಕೆ. ಫಣಿರಾಜ್‌ರವರು ಹೀಗೆನ್ನುತ್ತಾರೆ: "ಸುಬ್ರಹ್ಮಣ್ಯಕ್ಕೆ ಬಂದು ಪ್ರತಿಭಟಿಸಿದ ಹತ್ತು ಜನ ಬಂಡುಕೋರರ ಎದೆಗೆ ಅಕ್ಷರ ತಮ್ಮ ಬಾಣವನ್ನು ಹೂಡಿದ್ದಾರೆ. ಈ ಬಂಡುಕೋರರು 'ಪಾಶ್ಚಿಮಾತ್ಯ ಚಿಂತನೆ'ಗಳನ್ನು ವಿವೇಚನೆ ಇಲ್ಲದೆ ಎರವಲು ಪಡೆದು 'ದೇಶಿಯ' ವಾದ ನಂಬಿಕೆಯನ್ನು ಹೀಗಳೆಯುವ ಅಪಾಯಕಾರಿ ಗುಂಪು ಎಂಬುದು ಅಕ್ಷರ ಅವರ ತೀರ್ಮಾನ. ಈ ಬಂಡುಕೋರರ ವಾಸ್ತವಿಕ ವಿಳಾಸವಾದರೂ ಏನು? ಇವರು, 'ಹರಕೆ' ತೀರಿಸುವ ಮೊದಲನೇ ವರ್ಗದವರೂ ಸೇರಿದಂತೆ, ಜನರನ್ನು ಅವರ ಲೌಕಿಕ ಕಷ್ಟಗಳ ಆಧಾರದಲ್ಲಿ ಒಗ್ಗೂಡಿಸಿ 'ಅಭಿವೃದ್ಧಿ ಯೋಜನೆ'ಗಳ ಫಲವಾಗಿ ನಿರಾಶ್ರಿತರಾಗುವ ಜನರ ಪರವಾಗಿ, ರೈತರನ್ನು ಆತ್ಮಹತ್ಯೆಯತ್ತ ದೂಡುವ ಅಧಿಕಾರಸ್ಥರ ವ್ಯವಹಾರಗಳ ವಿರುದ್ಧ, 'ಸೌಂದರ್ಯ ಸ್ಪರ್ಧೆ'ಗಳ ಆಯೋಜಕರ ವಿರುದ್ಧ, 'ಕೆಂಟುಕಿ ಫ್ರೈಡ್ ಚಿಕನ್' ಅಂಗಡಿಗಳ ಸರಣಿ ಸ್ಥಾಪನೆಯ ವಿರುದ್ಧ ಪ್ರತಿಭಟಿಸುತ್ತಾರೆ; ಆ ಕಾರಣಕ್ಕಾಗಿ ಹಲವಾರು ಕ್ರಿಮಿನಲ್ ಕೇಸುಗಳಲ್ಲಿ ಸಿಲುಕಿ ನಿತ್ಯವೂ ಕೋರ್ಟಿಗೆ ಅಲೆಯುವುದು 'ಸಹಜ' ವೆಂಬಂತೆ ಬದುಕುತ್ತಾರೆ... ಈ ವಾಸ್ತವಿಕ ವಿವರಗಳ ಅರಿವು ಇರುವ ಯಾರಿಗೇ ಆದರೂ, ಈ ಜನ ಪ್ರತಿಭಟಿಸುತ್ತಿರುವುದು 'ಹರಕೆ'ಯನ್ನು ಹೊತ್ತ ಮೊದಲ ವರ್ಗದ ಜನರ ವಿರುದ್ಧ ವಾಗಿಯಲ್ಲ, 'ಹರಕೆ'ಯನ್ನು ಜಾತಿ ಮತ್ತು ಸಾಮಾಜಿಕ ಅಧಿಕಾರಗಳ ಸಲಕರಣೆ ಮಾಡಿಕೊಂಡಿರುವ ಎರಡನೆಯ ವರ್ಗದ 'ಭಕ್ತ'ರು, ದೇವಾಲಯ ವ್ಯವಸ್ಥೆ ಹಾಗೂ 'ಹರಾಜ'ನ್ನು ನಡೆಸುವ ಮಂದಿಯ ವಿರುದ್ಧ ಎಂಬುದು ತಿಳಿಯುತ್ತದೆ."

ಸಮಾಜ ವಿಜ್ಞಾನಗಳಲ್ಲಿ ಆಧುನಿಕೋತ್ತರವಾದವನ್ನು ಬಲವಾಗಿ ಬಿತ್ತುವುದು, ಅದಕ್ಕೆ ಮಾರಕವಾಗಬಹುದಾದ ಮಾರ್ಕ್ಸ್‌ವಾದಿ ಮತ್ತು ಇತರ ವಿರೋಧಿ ಸಿದ್ಧಾಂತಗಳನ್ನು ವಿಶ್ವವಿದ್ಯಾಲಯ ಮತ್ತಿತರ ಜ್ಞಾನ ವ್ಯವಸ್ಥೆಯಿಂದಲೇ ಕಿತ್ತೆಸೆಯುವುದು ಅವರ ಉದ್ದೇಶ. ಆಧುನಿಕೋತ್ತರವಾದಿ 'ಜಾರ್ಗನ್ನು'ಗಳನ್ನು ಬಳಸದಿದ್ದರೆ ಈಗಾಗಲೇ ಸಂಶೋಧನಾ ಪ್ರಬಂಧವಾಗಿ ಪ್ರಾಜೆಕ್ಟ್ ಆಗಲಿ ಅಂಗೀಕೃತವಾಗುವ ಸಾಧ್ಯತೆ ಕಡಿಮೆ. ಪ್ರಮುಖ ವಿಶ್ವವಿದ್ಯಾಲಯಗಳಲ್ಲಿ ಹುದ್ದೆಗಳು ಸಿಗುವುದೂ ಕಷ್ಟ. ಮಾತ್ರವಲ್ಲ ಆಧುನಿಕೋತ್ತರವಾದ ಪ್ರಸಾರ ಮಾಡುವ ಕೆಲಸಕ್ಕೆ ಮಾಜಿ ಪ್ರಗತಿಪರ/ಮಾರ್ಕ್ಸ್‌ವಾದಿಗಳನ್ನೇ ಆರಿಸುವುದು ಸಹ ಸಾಮಾನ್ಯ. ಸಿ.ಎಸ್.ಎಲ್.ಸಿ. ಮಾದರಿ ಬಹುಶಃ ಇತರ ವಿಶ್ವವಿದ್ಯಾಲಯಗಳನ್ನು ಆವರಿಸಲಿವೆ. ಈ ಶಕ್ತಿಗಳ ಸೈದ್ಧಾಂತಿಕ ದಾಳಿ ತೀವ್ರವಾಗಲಿದೆ.

ಯಾವುದನ್ನೇ ಆಗಲೀ ಅರ್ಥಮಾಡಿಕೊಳ್ಳಲು, ವಿಶ್ಲೇಷಣೆ ಮಾಡಲು ಅಥವಾ ಅಭ್ಯಾಸ ಮಾಡಲು ಸಿದ್ಧಾಂತವು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಸಮಕಾಲೀನ ಜಗತ್ತನ್ನು ಹಲವು "...ಓತ್ತರ" (ಪೋಸ್ಟ್)ಗಳ ಹಿನ್ನೆಲೆಯಲ್ಲಿ ವಿದ್ವತ್ ಕ್ಷೇತ್ರವು ಚರ್ಚಿಸುತ್ತಿದೆ. ಪೋಸ್ಟ್-ನ್ಯಾಷನಲ್, ಪೋಸ್ಟ್-ಸ್ಟ್ರಕ್ಚರಲ್, ಪೋಸ್ಟ್-ಮಾಡರ್ನ್, ಪೋಸ್ಟ್-ಕಲೋನಿಯಲ್ – ಇತ್ಯಾದಿ ಪರಿಕಲ್ಪನೆಗಳು, ಯಾವುದನ್ನು ಸಿ.ಎಸ್.ಎಲ್.ಸಿ. ಪಾಶ್ಚಾತ್ಯ ಜಗತ್ತು ಎನ್ನುತ್ತದೋ, ಅಲ್ಲಿಂದಲೇ ತಮ್ಮ ಜೀವರಸವನ್ನು ಪಡೆದುಕೊಂಡಿವೆ ಎಂಬುದು ಗಮನಾರ್ಹ. ಭಾರತದಲ್ಲಿ ಕಳೆದ ಎರಡು ದಶಕಗಳಲ್ಲಿ ಮತ್ತು ಜಾಗತಿಕವಾಗಿ ಕಳೆದ ಮೂರು ದಶಕಗಳಲ್ಲಿ ವ್ಯಾಪಕವಾಗಿ ಹರಿಯಬಿಟ್ಟಿರುವ, 'ವಾಷಿಂಗ್ಟನ್ ಸರ್ವಸಮ್ಮತಿ'ಯ ಉದರದಿಂದ ಹುಟ್ಟಿದ, ನವಉದಾರವಾದಿ ನೀತಿಗಳ ವಿಕೃತ ರೂಪವನ್ನು ಮರೆಮಾಚಲು ಅಥವಾ ಸಮರ್ಥಿಸಲು ಕೇವಲ 'ಸಾಂಸ್ಕೃತಿಕ ಅಧ್ಯಯನಗಳ'ವಾದ ಮುಂಚೂಣಿಗೆ ಬಂದಿದೆ. ಹಾಗೆಯೇ ಮುಖ್ಯವಾಗಿ, ಎಲ್ಲಾ ರೀತಿಯ ಮಾರ್ಕ್ಸ್‌ವಾದಿ ಪ್ರಭಾವಗಳನ್ನು ಮೂಲೆಗುಂಪು ಮಾಡುವ ಹಿಡೆನ್ ಅಜೆಂಡಾ ಕೂಡ ಇದರಲ್ಲಿದೆ. ಎಲ್ಲಾ ಆಧುನಿಕತೆಯನ್ನು ಖಂಡಿಸುವ ಸೋಗಿನಲ್ಲಿ (ಆದರೆ ವಾಸ್ತವದಲ್ಲಿ ನವ ಉದಾರವಾದವನ್ನು ಸಂರಕ್ಷಿಸುತ್ತಾ) ಪ್ರಗತಿಪರ-ಮಾನವಪರ ಅಂಶಗಳನ್ನೂ ತಿರಸ್ಕರಿಸಲಾಗುತ್ತಿದೆ.

ಪೋಸ್ಟ್ ಮಾಡರ್ನಿಸಂಗೆ ಸಂಬಂಧಿಸಿದ ಪ್ರೊ॥ ಐಜಾಜ್ ಅಹ್ಮದ್‌ರವರ ಒಂದು ಲೇಖನ ಮತ್ತು ಎರಡು ಸಂದರ್ಶನಗಳು ಆಧುನಿಕೋತ್ತರ ವಾದವನ್ನು ನಮ್ಮ ಇಂದಿನ ಸಂದರ್ಭದಲ್ಲಿ ಆಳವಾಗಿ ಅರ್ಥ ಮಾಡಿಕೊಳ್ಳಲು ಸಹಾಯಕವಾಗಿವೆ. ಐಜಾಜ್ ಅಹ್ಮದ್ ಅವರು ಪ್ರೈಮರ್ ಆಗಿ ಬರೆದ ಮುಖ್ಯ ಪ್ರಬಂಧದಲ್ಲಿ ಅಂತರರಾಷ್ಟ್ರೀಯವಾಗಿ ಮತ್ತು ಭಾರತದ ರಾಷ್ಟ್ರೀಯ ಸಂದರ್ಭದಲ್ಲಿ ಆಧುನಿಕೋತ್ತರ ವಾದದ ಮೂಲ, ಹುಟ್ಟು, ಬೆಳವಣಿಗೆ, ಪ್ರಭಾವ, ಪರಿಣಾಮಗಳ ಬಗ್ಗೆ ವಿವರವಾಗಿ ಬರೆದಿದ್ದಾರೆ. ಎರಡನೇ ಮಹಾಯುದ್ಧದ ನಂತರದ ಅಮೆರಿಕ ಮತ್ತು ಫ್ರಾನ್ಸ್‌ಗಳಲ್ಲಿ ಆದ ಪ್ರಮುಖ ಬೆಳವಣಿಗೆಗಳ ಹಿನ್ನೆಲೆಯಲ್ಲಿ ಆಧುನಿಕೋತ್ತರವಾದದ ಹುಟ್ಟು, ಬೆಳವಣಿಗೆಗಳನ್ನು ಅವರು ಗುರುತಿಸುತ್ತಾರೆ. ಆಧುನಿಕೋತ್ತರ ಅವಧಿ, ಆಧುನಿಕೋತ್ತರ ಪರಿಸ್ಥಿತಿ ಮತ್ತು ಆಧುನಿಕೋತ್ತರವಾದಗಳ ನಡುವಿನ ಸಂಬಂಧ ಮತ್ತು ವ್ಯತ್ಯಾಸಗಳನ್ನೂ ಸ್ಪಷ್ಟಪಡಿಸುತ್ತಾರೆ. ಪ್ರಮುಖ ಆಧುನಿಕೋತ್ತರವಾದಿಗಳಾದ ಲಿಯೋಟರ್ಡ್, ಫುಕೋ ಮತ್ತು ಡೆರ್ರಿಡಾ ಇವರ ಕೆಲವು ಚಿಂತನೆಗಳ ವಿಶ್ಲೇಷಣೆಗಳೊಂದಿಗೆ ಆಧುನಿಕೋತ್ತರವಾದದ ಪ್ರಮುಖ ಲಕ್ಷಣಗಳನ್ನು ಗುರುತಿಸುತ್ತಾರೆ. ಆಧುನಿಕೋತ್ತರವಾದವು ಹಲವು ವಿಭಿನ್ನ ಎಳೆಗಳಿಂದ ರಚಿತವಾಗಿದ್ದು, ಅದನ್ನು ಒಂದು ಸುಸಂಬದ್ಧ ಚಿಂತನೆಯಾಗಿ ಮಂಡಿಸುವುದು ಕಷ್ಟ ಎಂದು ಎಚ್ಚರಿಸುತ್ತಲೇ ಅದರ ಪ್ರಮುಖ ಲಕ್ಷಣಗಳನ್ನು ಗುರುತಿಸುತ್ತಾರೆ.

ಅದೇರೀತಿ ಭಾರತದಲ್ಲಿ ಆಧುನಿಕೋತ್ತರವಾದ ಪ್ರವೇಶಿಸಿದ ಹಿನ್ನೆಲೆಯನ್ನೂ ಗುರುತಿಸುತ್ತಾರೆ. ಸ್ವಾತಂತ್ರ್ಯೋತ್ತರ ಭಾರತದ ಇತಿಹಾಸವನ್ನು ಮೂರು ಮುಖ್ಯ ಅವಧಿಗಳಾಗಿ ವಿಂಗಡಿಸಿ ಆಧುನಿಕೋತ್ತರವಾದಿಗಳು ಅವನ್ನು ವಿಶ್ಲೇಷಿಸುವ ಬಗೆಯನ್ನು ತೀವ್ರ ವಿಮರ್ಶೆಗೆ ಒಳಪಡಿಸುತ್ತಾರೆ. ಇತ್ತೀಚಿನ ದಶಕಗಳಲ್ಲಿ ದೇಶದಲ್ಲಿ ಕೋಮುವಾದ ಮತ್ತು ಜಾಗತೀಕರಣದ ಏರುಗತಿಯ ಹಿನ್ನೆಲೆಯಲ್ಲಿ ಆಧುನಿಕೋತ್ತರವಾದ ದೇಶದ ರಾಜಕೀಯ-ಸಾಮಾಜಿಕ ಚಳುವಳಿಗಳ ಮೇಲೆ ಬೀರಿದ ಪ್ರಭಾವವನ್ನೂ ನಿರೂಪಿಸುತ್ತಾರೆ. ಭಾರತದ ಇತಿಹಾಸ ಸಂಶೋಧನೆಯಲ್ಲಿ ಸಬಾಲ್ಟರ್ನ್‌ವಾದದ ಪಾತ್ರದ ವಿವರವಾದ ಟೀಕೆ ಮಾಡುತ್ತಾ ಆಧುನಿಕೋತ್ತರ ವಾದದ ಜತೆಗೆ ಅದರ ಸಂಬಂಧಗಳನ್ನು ಗುರುತಿಸುತ್ತಾರೆ. ಅದೇ ರೀತಿ ಅಶೀಶ್ ನಂದಿಯವರ ವಾದಗಳ ಸಂಬಂಧಗಳನ್ನು ಗುರುತಿಸುತ್ತಾರೆ. ಇವರೆಲ್ಲರ ಕೋಮುವಾದದ ಬಗೆಗಿನ ತಪ್ಪು ಗ್ರಹಿಕೆಗಳು ಮತ್ತು ಸಾಮ್ರಾಜ್ಯಶಾಹಿ ಜಾಗತೀಕರಣದ ಆರ್ಥಿಕ-ರಾಜಕೀಯ ಆಯಾಮಗಳ ಬಗೆಗಿನ ಜಾಣಮೌನವನ್ನು ತೀವ್ರ ಟೀಕೆಗೆ ಒಳಪಡಿಸುತ್ತಾರೆ.

ಮುಖ್ಯ ಪ್ರಬಂಧ ಆಧುನಿಕೋತ್ತರವಾದದ ತಾತ್ವಿಕ-ರಾಜಕೀಯ ಆಯಾಮಗಳ ಬಗ್ಗೆ ಗಮನ ಹರಿಸುತ್ತದೆ. ಅದಕ್ಕೆ ಪೂರಕವಾಗಿ ಐಜಾಜ್ ಅಹ್ಮದ್ ಜತೆಗೆ ನಡೆಸಿದ ಎರಡು ಸಂದರ್ಶನಗಳು ಸಾಂಸ್ಕೃತಿಕ ಅಧ್ಯಯನ/ಚಿಂತನೆ ಮತ್ತು ಸಾಹಿತ್ಯ ವಿಮರ್ಶೆಗಳ ಆಯಾಮಗಳ ಮೇಲೆ ಬೆಳಕು ಚೆಲ್ಲುತ್ತವೆ. ವಸಾಹೋತ್ತರತೆ, ಸೈದ್ ಅವರ 'ಒರಿಯಂಟಲಿಸಂ' ವಿಮರ್ಶೆ, ಗ್ರಾಮ್ಷಿಯವರ ಸಂಸ್ಕೃತಿ ಚಿಂತನೆ, ಮೂರನೇ ಜಗತ್ತಿನ ಸಾಹಿತ್ಯ, ರಶ್ದಿ ಕಾದಂಬರಿಗಳಲ್ಲಿ ವಲಸೆ, ವಿಶ್ವ ಸಾಹಿತ್ಯ, ಬುದ್ಧಿಜೀವಿಗಳ ಪಾತ್ರ, ಸಾಹಿತ್ಯ-ಕಲೆ ಮತ್ತು ರಾಜಕಾರಣಗಳ ಸಂಬಂಧ, ಸಾಪೇಕ್ಷವಾದ, ಸಾಂಸ್ಕೃತಿಕ ವಿಭಿನ್ನತಾವಾದ, ಬಹುಸಂಸ್ಕೃತಿಯತೆ, ರಾಚನಿಕೋತ್ತರವಾದ, ಸಾರ್ವತ್ರಿಕತೆ ಮತ್ತು ಏಕನಿಷ್ಠತೆಗಳ ನಡುವೆ ಸಂಧಾನಗಳು – ಇವೇ ಮುಂತಾದ ಹಲವು ವಿಷಯಗಳ ಮೇಲೆ ಈ ಸಂದರ್ಶನಗಳು ಹಾದು ಹೋಗಿ ಬೌದ್ಧಿಕವಾಗಿ ಬಹಳ ಶ್ರೀಮಂತ ಅನುಭವ ನೀಡುತ್ತವೆ.

**ಕೆ. ಪ್ರಕಾಶ್**
ನಂ. ೨೬, ೪ನೇ ಅಡ್ಡರಸ್ತೆ, ಚಿಕ್ಕ ಬೇಗೂರು ಗೇಟ್
ಹೊಸೂರು ರಸ್ತೆ, ಬೊಮ್ಮನಹಳ್ಳಿ ಪೋಸ್ಟ್
ಬೆಂಗಳೂರು – ೫೬೦ ೦೬೮



ನಾನು ಮೂರ್ಖ... ಮಗ ಇದ್ದೀನಿ, ಅಟ್‌ಲೀಸ್ಟ್ ಐವತ್ತು ಪರ್ಸೆಂಟು ಅಂದ್ರು... ಎನ್ನುತ್ತ ಮತ್ತೆ ಗ್ಲಾಸಿಗೆ ಮವ್ವಾ ಜೂಸನ್ನು ಸುರುವಿಕೊಂಡರು. "ಈಗ ನೀನು ನನಗೆ ಆ ಸೆಕ್ರೆಟರಿಗೆ ಕರುಣಾಸಾಗರ್ ಇದ್ನಲ್ಲ ಹಾಗೆ, ಅವರಿಬ್ಬರ ಅನ್ಯೋನ್ಯ ಸಂಬಂಧದಂತೆ ನನ್ನದು ನಿನ್ನದು ಎಂದು ಇನ್ನೂ ತೊದಲಹತ್ತಿದರು. ನನಗೆ ಅಷ್ಟು ಬ್ಯಾಡರಿ, ವರ್ಷಕ್ಕೆ ಒಂದಿಪ್ಪತ್ತು ಲಕ್ಷ... ಸಾಕು..." ನನಗೆ ಅರ್ಥವಾಗಹತ್ತಿತು. ಇಲ್ಲಿರುವುದೆಲ್ಲ ಒಂದೇ ವಂಶ. ಇವರ ಬೇರುಗಳೆಲ್ಲ ಒಂದೇ ಎಂದು ಗ್ಲಾಸಿಗೆ ಆ ಸಿಹಿಮಿಶ್ರಿತ ಒಗರಿನ ಕಹಿಯ ಮವ್ವಾ ದ್ರವವನ್ನು ಹಾಕಿಕೊಂಡು ಗಟಗಟನೆ ನಿರಂತರವಾಗಿ ಕುಡಿದು ಬಾಯಿಗೆ ನಿಂಬೆಹೋಳನ್ನು ತುರುಕಿಕೊಂಡೆ. ಮವ್ವಾ ನನ್ನನ್ನು ನಿಜವಾಗಿಯೂ ಸುಪ್ತಸ್ಥಿತಿಗೆ ಕರೆದುಕೊಂಡು ಹೋಗಿತ್ತು. ಹಾಗೆಯೇ ಗೋಣನ್ನು ಆ ದುಂಡು ಮೇಜಿನ ಪರಿಷತ್ತಿನಂತಿರುವ ಟೇಬಲ್ಲಿಗೆ ಆನಿಸಿದೆ. ಅಧ್ಯಕ್ಷರೆ ಹೇಳಿದರು, "ನಿಂಗಪ್ಪ ಇವನನ್ನು ಗೆಸ್ಟ್ ಹೌಸ್‌ನಲ್ಲಿ ಮಲಗಿಸು" ಎನ್ನುವುದೇ ನನಗೆ ಪ್ರಪಂಚದ ಕೊನೆಯ ಮಾತಂತೆನಿಸಿತು. ಆಮೇಲೆ ನಾನು ಮಲಗಿದ್ದೇನೋ, ಎದ್ದಿದ್ದೇನೋ, ಕುಳಿತಿದ್ದೇನೋ ನನಗೇ ತಿಳಿಯಲಿಲ್ಲ. ಆದರೆ ಆ ಅಸ್ಪಷ್ಟ ಸುಪ್ತ ಲೋಕದಲ್ಲಿ ನಾನು ಅನೇಕರನ್ನು ಭೇಟಿ ಮಾಡಿದೆ ಎನ್ನಿಸಿತು.

# ಎಲುಬಿನ ವ್ಯಾಪಾರ

**ಕ**ಮಟು ವಾಸನೆಯ ರೂಮಿನಲ್ಲಿ ಕುಳಿತಿದ್ದೆ. ಆ ಕೋಣೆಯ ಉದ್ದೇಶವೇ ಹಿಂಸಾಪ್ರಕೋಪವನ್ನು ಹುಟ್ಟುಹಾಕುವುದು ಎನ್ನುವಂತೆ ಇತ್ತು. ಆ ಗಬ್ಬು ವಾಸನೆಯ ಗಾದಿಯ ಮೇಲೆ ಹಾಗೆ ಪವಡಿಸಿದೆ. ಎಲ್ಲಿಲ್ಲದ ಸಿಟ್ಟು ಹೂಂಕರಿಸಿ ಆ ಸಿಟ್ಟಿನಲ್ಲೆ ಇಬ್ಬರನ್ನು ನೆನೆಸಿಕೊಂಡೆ. ಒಬ್ಬ ನನ್ನ ಸಮೀಪದ ರಿಪೋರ್ಟಿಂಗ್ ಆಫೀಸರ ಆಗಿದ್ದ ಡಾ॥ ಕೆ. ಎಂ. ಕರುಣಾಸಾಗರ್, ಮತ್ತೊಬ್ಬ ನನ್ನನ್ನು ಈ ಭೂಮಿಗೆ ತಂದು ಇಂತಹ ತ್ರಿಶಂಕು ಸ್ಥಿತಿಗೆ ದೂಡಿದ ನನ್ನಪ್ಪ ಶಿವಲಿಂಗ ಸಾಹುಕಾರ.

ಕೃಷಿ ಪದವಿ ಮುಗಿಸಿಕೊಂಡು ಬಂದ ಉಮೇದಿಯಲ್ಲಿ ಕಲಿತ ತಂತ್ರಜ್ಞಾನವನ್ನು ಹೊಲದಲ್ಲಿ ಉಪಯೋಗಿಸಬೇಕೆಂದು, ನನ್ನ ತಂದೆಯವರನ್ನು ಕೇಳಿದೆ. ಕೃಷಿ ಪದವೀಧರರಿಗೆ ಎಲ್ಲೆಂದರಲ್ಲಿ ಕೆಲಸ ಸಿಗುವಾಗ ನಿನ್ನದೇನು ಇಲ್ಲಿ ಕೆಲಸ, ಎಂದು ಅವರು ಒಪ್ಪಲಿಲ್ಲ ನಾನು ಬಿಡಲಿಲ್ಲ. ಆ ಹದಿನೈದು ಎಕರೆಯಲ್ಲಿ ನೀನು ಏನು ಬೆಳೆಯುತ್ತೀ ಬೆಳೆ. ಬೆಳೆಗಾಗಿ ಬೇಕಾಗುವ ಇನ್‌ಪುಟ್ಸ್, ಗೊಬ್ಬರ, ಬೀಜ, ಔಷಧ, ಪೆಸ್ಟಿಸೈಡ್ ಅಂಗಡಿಯಲ್ಲಿ ಕೊಡಿಸುತ್ತೇನೆ. ಅದರ ವೆಚ್ಚಗಳನ್ನು ನೀನು ಬೆಳೆದ ನಂತರ ಕಟ್ಟಬೇಕು. ಅದಕ್ಕೂ ನನಗೂ ಯಾವುದೇ ಸಂಬಂಧವಿರಕೂಡದು. ನನಗೂ ಆತ್ಮವಿಶ್ವಾಸವಿತ್ತು. ತಂತ್ರಜ್ಞಾನದ ಮೇಲೆ ನಂಬಿಕೆ ಇತ್ತು. ಆ ಹದಿನೈದು ಎಕರೆಯಲ್ಲಿ ಹತ್ತು ಎಕರೆ ಹತ್ತಿಯನ್ನು ಹಾಕಿದೆ. ಮಿಕ್ಕ ಐದು ಎಕರೆಯಲ್ಲಿ ಕುಂಬಳ ಹಾಕಿದೆ, ಕುಂಬಳಕ್ಕಾಗಿ ಲಕ್ನೋದ ಒಂದು ಏಜೆನ್ಸಿಯ ಜೊತೆ ಸಾವಿರ ಟನ್ ಕುಂಬಳಕಾಯಿಯನ್ನು ಖರೀದಿ ಮಾಡುವ ಒಪ್ಪಂದ ಮಾಡಿಕೊಂಡಿದ್ದೆ. ಅದರಿಂದ ಅವರು ಪೇಟಾ ಎನ್ನುವ ಸಿಹಿ ತಿಂಡಿಯನ್ನು ತಯಾರಿಸುತ್ತಿದ್ದರು. ಮೂರು ತಿಂಗಳಲ್ಲೇ ೫ ಎಕರೆ ಹೊಲದಲ್ಲಿ ಅಸದಳವಾಗಿರುವ ಅಸಂಖ್ಯ ಕುಂಬಳಕಾಯಿಗಳೇನೋ ಬಿಟ್ಟವು. ಆದರೆ, ನನ್ನ ಲಕ್ನೋದ ಖರೀದಿದಾರ ಕಾಣೆಯಾಗಿದ್ದ. ಲಕ್ನೋಗೆ ಹೋಗಿ ನೋಡಿದರೆ ಆತನ ಕಚೇರಿ ಮುಚ್ಚಲ್ಪಟ್ಟಿತ್ತು. ಇದರಿಂದ ನನಗೆ ಒಂದು ಲಕ್ಷ ಲಾಸ್ ಆಗಿತ್ತು.

**ಮಹಾಂತೇಶ ನವಕಲಕಲ್**

ಮತ್ತೆ ಆ ಸುಗಂಧದ್ರವ್ಯ ಸೂಸುವ ಕೋಣೆಯಲ್ಲಿ ನೆನಪುಗಳಿಗೆ ಏನು ಬರವಿದ್ದಿಲ್ಲ. ಭೂತ ಭೂತದಂತೆ ನೆನಪಾಗಿ ಬೆನ್ನತ್ತಿತ್ತು. ಒಂದು ಲಕ್ಷ ಲಾಸ್ ಆದರೇನು ? ಹತ್ತು ಎಕರೆಯಲ್ಲಿ ಬೆಳೆದ ಹತ್ತಿ ಇದೆಯಲ್ಲಾ ಎನ್ನುವಾಗಲೇ ಹಿಲಿಯೋಥಿಸ್ ಎಂಬ ಕೀಟ ಮತ್ತು ಫೋಲನ್ ಡ್ರಾಪ್ ಬಾಧೆ ಇಡೀ ಹತ್ತಿಯನ್ನು ಮುಕ್ಕಿ ಮುಕ್ಕಿ ನಾಶಮಾಡಿದ್ದವು. "ನೀನು ಓದಿದ್ದು ಇಲ್ಲಿ ಏನೂ ಕೆಲಸ ಮಾಡುವುದಿಲ್ಲ. ಸುಮ್ಮನೆ ನೌಕರಿ ಹಿಡಿ" ಎನ್ನುವ ಆತನ ಕಟುಸಿದ್ಧಾಂತವು ನನ್ನ ಸೋಲಿನಿಂದ, ಜಾರಿಗೊಳ್ಳುವ ಎಲ್ಲಾ ಲಕ್ಷಣಗಳು ಅಂದೇ ಗೋಚರವಾಗಿದ್ದವು. ಸುಮಾರು ಮೂರು ಲಕ್ಷ ರೂಪಾಯಿಗಳ ಸಾಲದ ಹೊರೆ ನನ್ನ ಮೇಲೆ ಹಾಕಿದ್ದರು ನನಗೆ ಜನ್ಮ ಕೊಟ್ಟ ಪಿತೃ. ಇದನ್ನು ತೀರಿಸಬೇಕೆಂದರೆ ಅರ್ಜಂಟ್ ಒಂದು ನೌಕರಿ ಮಾಡಬೇಕು. ಇಲ್ಲವೇ ಔಷಧಿ ಕುಡಿದು ಸಾಯಬೇಕು.

ರೂಮಿನ ಬಾಗಿಲು ಬಡಿದ ಶಬ್ದ. ಬಾಗಿಲು ತೆರೆದರೆ ಲಾಡ್ಜಿನ ಮ್ಯಾನೇಜರ್ ಬಂದು ನನ್ನ ಅಪ್ಪಣೆ ಇಲ್ಲದೆ ಚೇರ್ ಮೇಲೆ ಕುಳಿತ. "ಸಾರ್ ಇಲ್ಲಿ ಡೆಂಟಲ್ ಕಾಲೇಜಿನಲ್ಲಿ ಒಳ್ಳೆ ಹುಡುಗಿಯರು ಸಿಗ್ತಾರೆ, ಮಿಡ್‌ನೈಟ್‌ಗೆ ಬಾ ಅಂದ್ರೆ ಬರ್ತಾರೆ, ಒನ್ ಡೇಗೆ ಸಾವಿರ ರೂಪಾಯಿ ಚಾರ್ಜ್ ಮಾಡ್ತಾರೆ. ನೀವು ಆರ್ಡರ್ ಮಾಡಿದ್ರೆ ಬುಕ್

ಮಾಡ್ತೀವಿ" ಎಂದ, ಒಡಲುಗೊಂಡವನಿಗೆ ಕಾಮದ ಆಸೆ ಕೇಳಲು ಬಂದಿದ್ದ. ನನಗೆ ಭಯವಾಯಿತು. "ಅವೆಲ್ಲ ಬೇಡ, ನೀವು ಹೊರಡಿ" ಎಂದವನೇ ನಾನು ಇಲ್ಲಿ ಇನ್ನು ಹೆಚ್ಚು ಕಾಲ ಉಳಿದರೆ ಅಪಾಯ ಎಂದೆನಿಸಿ ಎಲ್ಲಾ ಬಟ್ಟೆಗಳನ್ನು ಸೂಟ್‌ಕೇಸ್‌ನಲ್ಲಿ ಹಾಕಿ ಲಾಡ್ಜಿನಿಂದ ಹೊರಬಂದೆ.

ಬೀದರಿನ ಈ ಹತ್ತರ ಸಮಯದಿಂದ ಬೆಳಗಿನ ಸೂರ್ಯನನ್ನು ಎದುರುಗೊಳ್ಳಲು ಬಸ್ ಸ್ಟ್ಯಾಂಡೇ ಸರಿಯಾದ ಸ್ಥಳವೆನಿಸಿತು. ಬಸ್ ಸ್ಟ್ಯಾಂಡಿನತ್ತ ಹೆಜ್ಜೆ ಹಾಕಿದೆ. ಅಲ್ಲೇ ಕುಳಿತೆ. ಅದು ನೆನಪುಗಳ ಮೆಲುಕುಹಾಕಲು ಪ್ರಶಸ್ತವಾದ ಕಾಲವೆನ್ನಿಸಿತು. ಹತ್ತರಿಂದ ಮುಂಜಾನೆ ಐದರವರೆಗೆ ಏನೇನೋ ನೆನಪಿಸಿಕೊಳ್ಳುವುದು ಅನಿವಾರ್ಯವಾಗಿತ್ತು. ಮತ್ತೆ ನೆನಪುಗಳಿಗೆ ಕಾವು ಕೊಟ್ಟೆ.

ಅಂದು ರಾತ್ರಿ ಸೂಪರ್ ಫಾಸ್ಟ್ ಬಸ್ ಹಿಡಿದು ಗುಲ್ಬರ್ಗಾಕ್ಕೆ ಬಂದೆ. ಕಲ್ಬುರ್ಗಿಯಲ್ಲಿಯ ಸ್ನೇಹಿತರು 'ನಿಯಮಿತ' ಎನ್ನುವ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಲ್ಲಿ ನನಗಾಗಿ ಒಂದು 'ನೌಕರಿ ನೋಡಿ' ಇಟ್ಟಿದ್ದರು. ತಿಂಗಳಿಗೆ ೬೦೦೦ ಸಂಬಳದಲ್ಲೇ ನಾನು ಮಾಡಿದ ಸಾಲದ ಇನ್‌ಸ್ಟಾಲ್‌ಮೆಂಟ್ ಕಟ್ಟುವುದರ ಜೊತೆಗೆ ಕಲ್ಬುರ್ಗಿಯೆಂಬ ಮಹಾನ್ ನಗರದಲ್ಲಿ ಬದುಕಬೇಕಿತ್ತು. ಇಲ್ಲಿ ಡಾ॥ ಕೆ. ಎಂ. ಕರುಣಾಸಾಗರ ನನ್ನ ಅಪ್ಪನ ಎರಡನೇ ಅವತಾರದಲ್ಲಿ ಪ್ರತ್ಯಕ್ಷವಾಗಿದ್ದರು. ಸಾಹಿತ್ಯವೆನ್ನುವದು ಕೆಲಸಕ್ಕೆ ಬಾರದ ಬದನೇಕಾಯಿ ಎಂದು ಅವರು ನಂಬಿದಂತೆ ಇತ್ತು.

ಕಥಾಕಮ್ಮಟವಿದೆ, ಬನ್ನಿ ಎಂಬ ಒಕ್ಕಣಿಕೆ ಇರುವ ಒಂದು ಪತ್ರ ಬಂದಿತ್ತು. ನಾನು ಬ್ಯಾಗು ಹಿಡಿದು ಹೊರಡಲು ತಯಾರಾದ ಸಂದರ್ಭದಲ್ಲೆ "ನೀವು ಅಲ್ಲಿಗೆ ಹೋಗುವಿರಾದರೆ ಮರಳಿ ಬರಬೇಡಿ, ಹೋಗಿ" ಎನ್ನುವ ಕರುಣಾಸಾಗರ ಅವರ ಎಚ್ಚರಿಕೆಯನ್ನು ಗಮನಿಸದೆ ಹೊರಟೆ. ಡಾ॥ ಕರುಣಾಸಾಗರ ಅವರು ಆಡಳಿತ ಮಂಡಳಿಯ ಸಭೆ ಕರೆದು ನನ್ನ ಸಾಹಿತ್ಯ ರಚನೆಯನ್ನು ಜೀವಾವಧಿ ಶಿಕ್ಷೆಯ ಪಾಪಕ್ಕೆ ಸಮಾನವಾದುದು ಎಂದು ಬಿಂಬಿಸಲು ಪ್ರಯತ್ನಿಸುತ್ತಿದ್ದರು. ಆಡಳಿತ ಮಂಡಳಿಯಲ್ಲಿ ಸಹಮತ ದೊರಕಿದರೂ ಮಾನವೀಯತೆಯ ಬಗ್ಗೆ ಕೊಂಚ ಯೋಚಿಸಬಲ್ಲ ಶ್ರೀಮಂತ ಭಂಡಾರಿ ಎನ್ನುವ ನಿರ್ದೇಶಕರಿಂದ ಆತನಿಗೆ ಈ ಪ್ರಾಜೆಕ್ಟಿನಿಂದ ಇನ್ನೊಂದು ಪ್ರಾಜೆಕ್ಟ್‌ಗೆ ಬದಲಾವಣೆ ಮಾಡಿ ಎನ್ನುವ ಸಲಹೆಯಿಂದ ನಾನು ಉಳಿದುಕೊಳ್ಳುವಂತೆ ಆಯಿತು. ಗಂಡು ಗಂಡು ಲೈಂಗಿಕತೆ ಎನ್ನುವ ಪ್ರಾಜೆಕ್ಟ್‌ಗೆ ನಾನು ವರ್ಗವಾಗಿದ್ದೆ.

ಆಫೀಸಿಗೆ ನಾನು ಬಹಳ ಸಲ ಹೋಗಿದ್ದೆ. ಆದರೂ ಈ ದಿನ ಆ ಸುಡುಗಾಡು ಸಮಾನವಾದ ಕೆಲಸದ ಸೇನಾಧಿಪತಿಯಾಗಬೇಕು ಎನ್ನುತ್ತ ಆ ಕಚೇರಿಯ ಒಳಪ್ರವೇಶಿಸಿದೆ, ಆಗಲೇ ಶ್ರೀ ಕರುಣಾಸಾಗರ ಅವರು ನನಗೆ ಚಾರ್ಜ ಕೊಡಿಸಲು ಬಂದಿದ್ದರು. "ಫಂಡರುಗಳು ಅನೇಕ ಕಲ್ಯಾಣ ಕಾರ್ಯಕ್ಕೆ ದುಡ್ಡು ಕೊಡುತ್ತಾರೆ, ಅದು ಸದ್ವಿನಿಯೋಗ ಆಗಬೇಕು, ನೀವು ಒಂದು ವೇಳೆ ಪ್ರಾಜೆಕ್ಟ್‌ಅನ್ನು ನಿರ್ಲಕ್ಷಿಸಿದರೆ, ನಾವು ಫಂಡರುಗಳಿಗೆ ಮೋಸ ಮಾಡಿದಂತೆ. ನಾವು ಹಣ ದುರುಪಯೋಗಪಡಿಸಿಕೊಳ್ಳುವುದಕ್ಕಿಂತ ಈ ಪ್ರಾಜೆಕ್ಟ್‌ಅನ್ನು ನಿರ್ಲಕ್ಷ್ಯ ಮಾಡುವುದು ದೊಡ್ಡ ಮೋಸ. ನಿಮಗೆ ಈ ಪ್ರಾಜೆಕ್ಟ್ ಬಗ್ಗೆ ಅಷ್ಟೊಂದು ಜ್ಞಾನವಿಲ್ಲ. ಅದಕ್ಕಾಗಿ ಒಂದು ತಾಸು ವಿವರಿಸ್ತೀನಿ ಎಂದರು. ಭಾರತದಲ್ಲಿ ೨೧ ಸರ್ಕಾರೇತರ ಸಂಸ್ಥೆಗಳು ಮಾತ್ರ ಅನುಷ್ಠಾನ ಮಧ್ಯವರ್ತಿಗಳಿವೆ. ಅದರಲ್ಲಿ ನಾವೂ ಒಬ್ಬರು ಎಂದು ಹೆಮ್ಮೆಯಿಂದ ಹೇಳ್ತೀನಿ, ಇದರ ಪ್ರಮುಖ ಕೆಲಸವೇನೆಂದರೆ ಈ ದಿನ ಗಂಡು, ಗಂಡು ಸ್ವಯಂ ಆಕರ್ಷಣೆಗೊಳಗಾಗುವುದು ಹೆಚ್ಚಾಗ್ತಾ ಇದೆ. ಆಮೇಲೆ ಲೈಂಗಿಕ ಚಟುವಟಿಕೆಗಳಿಗೆ ದಾರಿ ಮಾಡಿಕೊಡುತ್ತದೆ. ಈ ಲೈಂಗಿಕ ಕ್ರಿಯೆ ಸುರಕ್ಷಿತವಲ್ಲ, ಇದು ೯೦% ಎಚ್.ಐ.ವಿ.ಯನ್ನು ಹರಡುವ ಸಂಭಾವ್ಯ ಹೊಂದಿರುತ್ತದೆ. ಈ ಜನಾಂಗವನ್ನು ಈ ಘನಘೋರ ರೋಗದ ಬಗ್ಗೆ ಜಾಗೃತಮಾಡುವುದೆ ಪ್ರಮುಖ ಉದ್ದೇಶ ಎಂದು ನೀರು ಗುಟುಕಿಸಿ ತಮ್ಮ ಸಮ್ಯಕ್ ಜ್ಞಾನದ ಪ್ರವಚನವನ್ನು ಮುಂದುವರಿಸಿದರು. ಪುರುಷ ಲೈಂಗಿಕ ಕಾರ್ಯಕರ್ತರಲ್ಲಿ ಮೂರು ಭಾಗಗಳಿವೆ, ಒಂದನೆಯದು ಕೋತಿ, ಎರಡನೆಯದು, ಪಂತಿ, ಮೂರನೆಯದು, ಡಬಲ್ ಡೆಕ್ಕರ್. ಎಲ್ಲಾ ನೋಟ್ ಮಾಡ್ಕೊಳ್ಳಿ" ಎಂದರು. ಕೋತಿಯು ಗಂಡಸೇ, ಆದರೆ ಇನ್ನೊಬ್ಬ ಗಂಡಸಿನಿಂದ ತೆಗೆದುಕೊಳ್ಳುವನು, ಅಂದರೆ ಇವನು ಹೆಣ್ಣಿನ ತರಹ. ಎರಡನೆಯದು, ಪಂತಿ. ಈತ ಕೊಡುವವನು ಮಾತ್ರ. ಇವನು ಪುರುಷರ ಆಕರ್ಷಣೆಗೆ ಒಳಗಾಗಿ ಪುರುಷರನ್ನು ಹೆಂಗಸರಂತೆ ಉಪಯೋಗಿಸುವವ. ಮೂರನೆಯದು, ಆತ ಸಂದರ್ಭಕ್ಕನುಸಾರವಾಗಿ ರಿಸೀವ್ ಮಾಡಬಲ್ಲ, ಗಂಡಸಾಗಿ ವರ್ತಿಸಬಲ್ಲ. ಕರುಣಾಸಾಗರ್ ತೆಗೆದುಕೊಂಡ ಒಂದು ಸಮ್ಯಕ್ ಜ್ಞಾನದ ಸಣ್ಣ ಸೆಮಿನಾರ್‌ನಿಂದ ಎಲ್ಲೆಲ್ಲಿಯೋ ಲಿಂಕ್ ಸಿಗಹತ್ತಿದವು.

ಸಂಜೆ ನಾಲ್ಕಕ್ಕೆ ನನಗೆ ಸ್ವಾಗತ ಕಾರ್ಯಕ್ರಮವಿತ್ತು. ನಿರ್ವಹಣೆ ಸಿದ್ದಪ್ಪ ಮೂಲಂಗಿ ಉರ್ಫ್ ಸಿದ್ದೇಶ್ವರಿ ಎನ್ನುವ ವ್ಯಕ್ತಿ ಮಾಡುತ್ತಲಿದ್ದ. ಮಾತಾಡುತ್ತ, ಮಾತಾಡುತ್ತ "ವೇದಿಕೆಯ ಮೇಲೆ ಮೂರು ಜನ ಮಾವಂದಿರು ಕೂತಿದ್ದಾರೆ. ಹೊಸ ಮಾಮ ನೋಡು ದಪ್ಪ ದಪ್ಪ ಟುಮ್ಮ ಟುಮ್ಮ ಹೇಗಿದ್ದಾನೆ ? ಯಾರಾದ್ರು ಹಾರಿಸ್ಕೊಂಡು ಹೋಗಿರಿ ಮತ್ತ್" ಎಂದಾಗ ನನಗೆ ಮುಜುಗರವಾಯಿತು.

ನಾನು ಮಾತಾಡುವಾಗ ಶಿಸ್ತಿನ ಬಗ್ಗೆ ಹೇಳಿದೆ. "ಶಿಸ್ತು ಬಹಳ ಮುಖ್ಯ, ಒಂದು ವೇಳೆ ಶಿಸ್ತು ಇಲ್ಲದಿದ್ದರೆ ನಿರ್ದಾಕ್ಷಿಣ್ಯವಾಗಿ ಕ್ರಮ ತೆಗೆದುಕೊಳ್ಳಲಾಗುವುದು. ನೀವು ಸಂಸ್ಕೃತಿವಂತರಾಗಿ ಬದುಕಬೇಕು, ಮಾತಾಡುವಾಗ ನಾಲಿಗೆ ಮೇಲೆ ಹಿಡಿತ ಇರಲಿ" ಎಂದೆ. ಆಗ ಎಲ್ಲರೂ ಒಕ್ಕೊರಲಿನಿಂದ, "ನೀನೇನು ಹೇಳಬೇಕಿಲ್ಲಪ್ಪೋ ಮಾವ" ಎಂದು ಕೂಗಿದರು. ಕರುಣಾಸಾಗರ ಅಸಮಾಧಾನಗೊಂಡಿದ್ದ. "ನೋಡಿ ನೀವು ಹಾಗೆಲ್ಲ ಅವರಿಗೆ ಮಾತಾಡಬೇಡಿ ಪ್ಲೀಸ್" ಎಂದು ನನ್ನತ್ತ ದುರುಗುಟ್ಟಿದರು. ಆ ಕಾರ್ಯಕ್ರಮ ಮುಗಿಯಿತು.

ಕರುಣಾಸಾಗರ ನನ್ನನ್ನು ಒತ್ತಾಯಪೂರ್ವಕವಾಗಿ ಕೈ ಹಿಡಿದು ಆಗ ತಾನೆ ಕೊಡಮಾಡಿದ್ದ ಚೇಂಬರಿಗೆ ಕರೆದುಕೊಂಡು ಹೋದರು. "ಶಿವು, ನಿಮಗೆ ಏನು ಹೇಳಬೇಕು ತಿಳೀತಾ ಇಲ್ಲ, ಇಂಥ ಹೊಲಸು ಜಗತ್ತಿನ ಜೊತೆ ಕೆಲಸ ಮಾಡಲು ನನಗೂ ಅಸಹ್ಯ. ಪ್ರತಿಯೊಬ್ಬ ನಾಗರಿಕ ಪ್ರಪಂಚ ದಲ್ಲಿರುವ ಯಾರೂ ಇದನ್ನು ಒಪ್ಪುವುದಿಲ್ಲ, ಅದು ನನಗೆ ಗೊತ್ತು, ಆದರೆ ಏನು ಮಾಡುವದು ? ಇದು ಒಂದು ವ್ಯವಹಾರ, ನೋಡಿ ಇವರ ಸಂಖ್ಯೆ ೨೦೦ ಇದೆ. ನಾವು ಇನ್ನೂ ಈ ಸಂಖ್ಯೆಯನ್ನು ಹೆಚ್ಚಿಸಿಕೊಬೇಕು, ಅಂದರೆ ಒಟ್ಟಾರೆ ೫೦೦ ಸಂಖ್ಯೆ ಆಗಬೇಕು. ಇಂಥ ವ್ಯಕ್ತಿಗೆ ವಿಶ್ವ ಬ್ಯಾಂಕಿನಿಂದ ತಿಂಗಳಿಗೆ ೪೦೦೦ ರೂಪಾಯಿಗಳು ಸಿಗುತ್ತೆ. ಅಂದರೆ ಅವರ ವೈದ್ಯಕೀಯ ವೆಚ್ಚ, ಸಾರಿಗೆ ವೆಚ್ಚ ಮತ್ತು ಅವರ ಸಾಂಸ್ಕೃತಿಕ ಕಾರ್ಯಕ್ರಮಕ್ಕಾಗಿ ಬರುವ ಹಣವದು. ಆಮೇಲೆ ಇವರಿಗಾಗಿ ನಾಲ್ಕು ಜನ ಡಾಕ್ಟರ್‌ಗಳನ್ನು ನಿಯಮಿಸಿಕೊಳ್ಳುವ ಅವಕಾಶ ಇದೆ. ಅದಕ್ಕಾಗಿ ಇಬ್ಬರು ಡಾಕ್ಟರಿಗೆ ಗೌರವಧನ ಕೊಡಬಹುದು, ಇನ್ನಿಬ್ಬರ ಗೌರವಧನ ಉಳಿಸಬಹುದು. ಅಂದರೆ ಆ ಇನ್ನೂರು ಜನರಿಂದ ತಿಂಗಳಿಗೆ ಹತ್ತು ಲಕ್ಷ ಸಂಸ್ಥೆಗೆ ಬರುತ್ತದೆ. ಅದು ಖರ್ಚಾಗುವುದು ಮೂರು ಲಕ್ಷ ಮಾತ್ರ. 'ಆನೆಗೆ ಸತ್ತರೂ ಬೆಲೆ, ಇದ್ದರೂ ಬೆಲೆ' ಎನ್ನುವಂತೆ ಇಲ್ಲಿಯೂ ಸಹ ಇವರು ಇದ್ದರೂ ಲಾಭ, ಸತ್ತರೂ ಲಾಭ. ಸತ್ತರೆ ಕುಟುಂಬಕ್ಕೆ ೫೦೦೦ ಬರುತ್ತದೆ. ಅಲ್ಲಿಯೂ ಉಳಿಸಬಹುದು. ಎರಡನೇ ವಿಚಾರ ಸಾಕಷ್ಟು ವೈದ್ಯಕೀಯ ಸಲಕರಣೆಗಳು ಬರುತ್ತವೆ. ಅದೆಲ್ಲವನ್ನೂ ನಾವು ಸಾರಾಸಗಟಾಗಿ ಔಷಧ ಅಂಗಡಿಗೆ ಹಾಕುತ್ತೇವೆ. ಇದರಿಂದಲೂ ನಮಗೆ ಲಾಭ" ಎಂದು ಹೇಳಿ ಹೋದರು. ನನಗೆ ಅಯೋಮಯ ತಲ್ಲಣ.

ಅಂದು ರಾತ್ರಿ ಒಂದು ಕನಸು, ಆ ಕನಸಿನಲ್ಲಿ ನಾನು ಮನುಷ್ಯರ ಎಲುಬುಗಳನ್ನು ಮಾರಲು ಕುಳಿತಿದ್ದೆ. ಕೆ.ಜಿ.ಗೆ ಇಪ್ಪತ್ತು ರೂಪಾಯಿ. ಹೆಣಗಳನ್ನು ಹುಡುಕುವ ದಲ್ಲಾಳಿಗಳು ಹುಡುಕಿ, ಹುಡುಕಿ, ಹೆಣಗಳನ್ನು ತಂದು ನನಗೆ ಹೋಲ್‌ಸೇಲ್‌ನಲ್ಲಿ ಮಾರುತ್ತಿದ್ದರು. ಅದನ್ನು ಸಂಶ್ಲೇಷಿಸಿ ಮತ್ತೆ ನಾನು ಎಲುಬುಗಳನ್ನು ತೆಗೆದು ಮಾರುತ್ತಿದ್ದೆ. ಎಲುಬುಗಳನ್ನು ಕೊಳ್ಳಲು ಜನವೋ ಜನ. ಇದರ ಮಧ್ಯೆ ಇನ್ನೊಂದು ಘಟನೆ ನಡೆಯಿತು, ಮಧ್ಯವರ್ತಿಯೊಬ್ಬ ಒಂದು ಹೆಣವನ್ನು ತೆಗೆದುಕೊಂಡು ಬಂದಿದ್ದ. ಆ ಹೆಣ ಪೂಜನೀಯ ನನ್ನ ಅಮ್ಮನದೇ ಆಗಿತ್ತು. ಏನು

ಮಾಡಲಿ? ಬಯ್ಯುವ ಹಾಗಿಲ್ಲ, ನೋಡುತ್ತ ನಿಂತೆ. ಇದು ಒಡಂಬಡಿಕೆಯ ವ್ಯವಹಾರ. ಆತನಿಗೆ ದುಡ್ಡು ಕೊಟ್ಟು ಅಳಿದುಳಿದ ಕಳೇಬರದ ಆ ದೇದೀಪ್ಯಮಾನವಾಗಿ ಹೊಳೆಯುವ ಪೀತಾಂಬರದ ಅಮ್ಮನ ಕಳೇಬರವನ್ನು ಹಾಗೇ ಹಿತ್ತಲಲ್ಲಿ ಹೂಳಿಟ್ಟೆ. ಒಂದು ದಿನ ಅಪ್ಪನೆಂಬ ಶಿವಶಂಕರ್ ಸಾಹುಕಾರ ಸಹ ಎಲುಬುಗಳ ವ್ಯವಹಾರಕ್ಕಾಗಿ ದೂರದೂರಿಂದ ಬಂದಿದ್ದ. ಮಧ್ಯರಾತ್ರಿ ಆಗಿತ್ತು. ಗಕ್ಕನೆ ಎದ್ದೆ, ನೀರು ಕುಡಿಯಬೇಕೆನಿಸಿತು.

ನಮ್ಮ ಆಫೀಸ್ ಬಾಯ್ ಮತ್ತು ಅಕೌಂಟ್ಸ್ ಆಫೀಸರ್ ಅವರು ಕಛೇರಿಯ ಬಳಿಗೆ ಬಂದರು. ಒಂದು ಕ್ಷಣ ಮೌನವಾದರು. "ಸಾರ್, ಒಂದು ಬ್ಯಾಡ್ ನ್ಯೂಸ್ ಇದೆ" ಎಂದರು. "ವೆಲ್‌ಕಮ್ ಭಾಷಣ ಮಾಡಿದ್ದರಲ್ಲ ಸಿದ್ದಪ್ಪ ಮೂಲಂಗಿ ಉರ್ಫ್ ಸಿದ್ಧೇಶ್ವರಿ. ಮುಂಜಾನೆ ಸತ್ತು ಹೋದರು" ಎಂದರು. "ನಾವು ಈಗ ತುರ್ತಾಗಿ ಅವರ ಕುಟುಂಬಕ್ಕೆ ಹೇಗೆ ನೆರವಾಗಬಹುದು?" ಎಂದೆ. "ಮೊದಲು ಅಲ್ಲಿಗೆ ಹೋಗೋಣ ಸರ್. ಅವರ ಪೇರೆಂಟ್ಸ್ ಸಹಿ ಬೇಕು. ಆಮೇಲೆ ಇವತ್ತೆ ಚೆಕ್ ವಿತ್‌ಡ್ರಾ ಮಾಡಿ ನಿಮ್ಮ ಕರುಣಾಸಾಗರ್ ಸರ್ ಮತ್ತು ಆಡಳಿತ ಮಂಡಳಿ ಕಾರ್ಯದರ್ಶಿ ಅವರ ಕಡೆ ಹಣ ಜಮಾ ಮಾಡ್ತೀವಿ. ಇದು ಒಂದು ರೀತಿಯ ಹಳ್ಳದಲ್ಲಿನ ಚಿಲುಮೆ ಇದ್ದ ಹಾಗೆ. ವಾರಕ್ಕೊಮ್ಮೆ ಇಂತಹ ಆಸಾಮಿ ಸಾಯುವುದು, ನಿಮಗೆ ಹಣ ಹಾಕುವುದು. "ಸರ್, ನೀವು ಅದೃಷ್ಟವಂತರು" ಎಂದು ನಕ್ಕು, "ಇದರ ಮೇಲೆ ಅಪ್ರೂವಲ್‌ಗಾಗಿ ಒಂದು ಸಹಿ ಮಾಡಿ ಬಿಡಿ ಸರ್" ಎಂದು ಒಂದು ನಮೂನೆ ತೆಗೆದು ನನಗೆ ಕೊಟ್ಟ. ಅದರಲ್ಲಿ, ನಾನು ಅಪ್ರೂವಲ್ ಮಾಡಿ ಅವರ ಪೇರೆಂಟ್ಸ್ ಹೆಸರಿಗೆ ಚೆಕ್ ಬರೆದು ಕೊಡಿ ಎಂದೆ. "ಇಲ್ಲ ಸರ್, ಕರುಣಾಸಾಗರ್ ಹೇಳಿದ್ರು. ಎಲ್ಲಾ ನಿಮಗೆ ಹೇಳಿದ್ದೀನಿ ಅಂತ. ಅವರಿಗೂ ಒಂದು ಮಾತು ಕೇಳಿದ್ರೆ ಚೆನ್ನಾಗಿರುತ್ತೆ ಸರ್" ಎಂದರು. "ಇಲ್ಲ, ನಾನು ಇದರ ಪ್ರಾಜೆಕ್ಟ್ ಆಫೀಸರ್, ನಾನು ಯಾರ ಮಾತು ಕೇಳಬೇಕಿಲ್ಲ, ಇಲ್ಲಿ ನನ್ನದೇ ಅಧಿಕಾರ, ಚೆಕ್ ತೆಗೆದುಕೊಂಡು ಬನ್ನಿ" ಎಂದು ಜೋರಾದ ಧ್ವನಿಯಲ್ಲಿ ಹೇಳಿದೆ. ನನ್ನ ಧ್ವನಿಯ ಜೋರಿಗೆ ಚೆಕ್ ನನಗೆ ಒಪ್ಪಿಸಿದರು. ಚೆಕ್ಕು ಆಫೀಸ್ ಬಾಯ್ ಮುಖಾಂತರ ಡ್ರಾ ಮಾಡಿಸಿ ಐದು ಸಾವಿರ ರೂ.ಗಳನ್ನು ಆ ತಾಯಿಯ ಮಡಿಲಿಗೆ ಹಾಕಿದೆ. "ಶಂಕರ್, ಪ್ಲೀಸ್, ನಮ್ಮ ಎರಡುನೂರು ಜನ ಕಾರ್ಯಕರ್ತರ ತಂಡದಲ್ಲಿ ಕನಿಷ್ಠ ೭೫ ಜನ ಭಾಗವಹಿಸಿದರೆ ಸಾಕು, ನೋಡಿ ವ್ಯವಸ್ಥೆ ಮಾಡಿ, ಶವಸಂಸ್ಕಾರಕ್ಕೆ ಸಹಾಯವಾಗುತ್ತೆ" ಎಂದೆ. ಶಂಕರ್, "ಇಲ್ಲ ಸರ್, ನಾವೇನು ಇದರಲ್ಲಿ ಭಾಗವಹಿಸುವಂತೆ ಇಲ್ಲ ನಾವು ಇದುವರೆಗೂ ಯಾರ ಶವಸಂಸ್ಕಾರದಲ್ಲೂ ಭಾಗವಹಿಸಿಲ್ಲ. ಮನೆಯಲ್ಲೇ ಹೆಣ ದರ್ಶನ ಮಾಡಿಕೊಂಡು ಹೋಗುತ್ತೇವೆ. ಸಾಕು ಇಲ್ಲಿಂದ ಹೊರಡೋಣ" ಎನ್ನುವಂತೆ ಹೇಳಿದ. "ಇಲ್ಲ ಶವಸಂಸ್ಕಾರ ಆಗುವವರೆಗೂ ಉಳಿದರೆ ಒಳಿತು, ನಾವು ಶವಸಂಸ್ಕಾರ ಮುಗಿಸಿಕೊಂಡು ಹೋಗೋಣ" ಎಂದು ಅವರ ತಾಯಿಯನ್ನು ಕೇಳಿದೆವು. ಇನ್ನು ಯಾರಾದರೂ ಬರುವವರು ಇದ್ದಾರೆಯೇ? ಎಂದೆ. "ಇಲ್ಲ ಯಾರು ಬರುವವರು ಇಲ್ಲ, ಆದರೆ ಹೆಣ ಹೊರುವವರು ಯಾರು ಇಲ್ಲ. ನಮ್ಮ ಜನ ಈ ಹೆಣವನ್ನು ಮುಟ್ಟಲಿಕ್ಕೂ ತಯಾರಿಲ್ಲ. ಹೊರಗಿನ ಕೇರಿಯವರಿಗೆ ಹೇಳಿ ಕಳುಹಿಸಿದ್ದೇನೆ. ಅವರು ಸಹ ಬಂದಿಲ್ಲ. ಅಂದರೆ ಅವರು ಇಂತಹ ಹೆಣವನ್ನು ಮುಟ್ಟಲಿಕ್ಕೆ ಅಂಜುತ್ತಾರೇನು?" ಎಂದರು. ಅಲ್ಲಿರುವವರು ಹೆಣದ ಹತ್ತಿರವೂ ಸುಳಿದಿರಲಿಲ್ಲ. "ಶಂಕರ್ ಆ ಮೂರು ಜನರನ್ನು ಕರೆಯಿರಿ" ಎನ್ನುತ್ತ ನಾನೇ ಮುಂದಾಗಿ ಹೆಣ ಎತ್ತಲು ಹೋದೆ. ಆಗ ಶಂಕರ್ ಸರ್, "ನೀವ್ ಬಿಡಿ, ನಾನು ಹೊರುತ್ತೇನೆ" ಎಂದು ಹೆಣ ಎತ್ತಿದರು. ಯಾರೂ ಅಳುವವರು ಇಲ್ಲ, ಕೇಳುವವರೂ ಇಲ್ಲ, ಆ ತಾಯಿಯ ಹಿಂದುಗಡೆ ಇಬ್ಬರು, ನಾವು ಐದು ಜನ ಸೇರಿಕೊಂಡು ಶವಸಂಸ್ಕಾರ ಮುಗಿಸಿದೆವು.

ಮತ್ತೆ ಆಡಳಿತ ಮಂಡಳಿಯ ಸಭೆ ಕಾರ್ಯದರ್ಶಿಗಳು ಮೊದಲೇ ಆಹ್ವಾನಿಸಿ ಕೊಂಡು ಬಂದ ಸಿಟ್ಟನ್ನು ನನ್ನ ಮೇಲೆ ಪ್ರಯೋಗಿಸಿದರು. "ಏನ್ರೀ, ನಿಮ್ಮ ಹಳೇ ಹಗ್ಗ ಕಡಿಯುವ ಚಾಳಿ ಬಿಡ್ತಾ ಇಲ್ಲ, ನಿಮ್ಮ ಕೈಯಲ್ಲಿ ಈ ಪ್ರಾಜೆಕ್ಟ್ ಕೊಟ್ಟರೆ ಮುಗೀತು, ಹಾಳು ಮಾಡ್ತೀರಿ. ನಾವು ೭ ತಿಂಗಳಲ್ಲಿ ಮಾಡಿದ ಉಳಿತಾಯವನ್ನು ಮೂರೇ ದಿನದಲ್ಲಿ ಖರ್ಚು ಮಾಡಿದ್ದೀರಿ. ಹೀಗಾದರೆ ಹೇಗೆ? ನಾನಂತೂ ನಿಮ್ಮ ಮುಂದುವರಿಕೆಗೆ ವಿರೋಧ ಮಾಡ್ತೀನಿ. ಇಂದೇ ರಾಜೀನಾಮೆ ಕೊಡಿ. ಒಂದು ಸಾಲಿನ ವಿಷಯ. ಈತನನ್ನು ತೆಗೆದುಹಾಕುವ ನಿರ್ಣಯ ತೆಗೆದುಕೊಂಡು ಈ ಸಭೆಯನ್ನು ಬರ್ಕಾತ್ ಮಾಡೋಣ." ಅಧ್ಯಕ್ಷರೇ ಹೇಳಿದರು, "ಶಿವಕುಮಾರ ನಮ್ಮ ಜೊತೆ ಸುಮಾರು ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ. ಅವರನ್ನು ಹೀಗೆ ಅಸಭ್ಯವಾಗಿ ಹೊರಗೆ ಕಳುಹಿಸುವುದು ಬೇಡ. ಏನು ಹೇಳುತ್ತಾರೆ ಹೇಳಲಿ." ಸೆಕ್ರೆಟರಿ ಮತ್ತೆ



## ನನ್ನ ಚಿತ್ರಗಳು (ಗಜ಼ಲ್)

ನನ್ನೆದೆಯ ಕ್ಯಾನ್‌ವಾಸಿನ ಮೇಲೆ
ಬಣ್ಣ ಬಣ್ಣದ ಹೆಜ್ಜೆ ಗುರುತುಗಳು;
ಯಾರೋ ಕುಂಚವಿಲ್ಲದೆ
ಚಿತ್ರ ಬರೆದಿದ್ದಾರೆ. !!

ನನ್ನ ಮನೆಯ ಗಾಜಿನ ಕಿಟಕಿ,
ಛಿದ್ರ ವಿಚ್ಛಿದ್ರ ಚಿತ್ರವಾಗಿದೆ;
ಯಾರೋ ಕಲ್ಲುಗಳಿಂದ
ಆಟವಾಡಿದ್ದಾರೆ !!

ನನ್ನ ಚಾರಿತ್ರ್ಯದ ಬಿಳಿ ಹಡದಿಯ ತುಂಬ
ಪಿಚಕಾರಿಯಂತಹ
ಕೆಂಪು ಕೆಂಪು ಕಲೆಗಳು;
ಯಾರೋ ಎಲೆಯಡಕೆ ತಿಂದು
ಉಗುಳಿಬಿಟ್ಟಿದ್ದಾರೆ.

ನನ್ನ ಕನಸಿನ ಸೌಧ
ಭಗ್ನ ಪಳೆಯುಳಿಕೆಯಾಗಿ,
ಅವರಿವರ ಕಣ್ಣಿಗೆ ಹಬ್ಬವಾಗಿದೆ;
ಯಾರೋ ಬಾಂಬುಗಳ ಹಾಕಿ
ಕೆಡವಿ ಬಿಟ್ಟಿದ್ದಾರೆ.

**ಮಾರುತಿ ದಾಸಣ್ಣವರ**
ಜವಾಹರ ನವೋದಯ ವಿದ್ಯಾಲಯ ತೆವ, ಮಂಜಾನ್‌ಪುರ, ಕೌಶಂಬಿ ಜಿಲ್ಲೆ
(ಅಲಹಬಾದ್), ಉತ್ತರ ಪ್ರದೇಶ - ೨೧೨ ೨೦೭

ಗುಡುಗಿದ, "ನೋಡಿ ನೀವು ಸರಿಯಾದ ಮಾಹಿತಿ ಕೊಡದಿದ್ದರೆ ನಾನು ಮನುಷ್ಯನೇ ಅಲ್ಲ. ನಿಮ್ಮನ್ನು ಕ್ರಿಮಿನಲ್ ಕೇಸ್ ಮೇಲೆ ಒಳಗೆ ಹಾಕಬೇಕಾಗುತ್ತದೆ" ಎಂದ. ನನಗೆ ಭೂಮಿಯೇ ಕುಸಿದಂತಾಯಿತು. ನಾನು ಸಭೆಯ ಮುಂದೆ ವಿವರಿಸಹತ್ತಿದೆ. "ನಮ್ಮ ಈ ಸ್ವಯಂ ಸೇವಾ ಸಂಸ್ಥೆ ಎರಡು ಖಾತೆಗಳನ್ನು ಹೊಂದಿದ್ದು, ಒಂದು ಕೃಷ್ಣನ ಲೆಕ್ಕ ಮತ್ತು ಇನ್ನೊಂದು ರಾಮನ ಲೆಕ್ಕ. ಎಲ್ಲಾ ಖರ್ಚುವೆಚ್ಚಗಳು ರಾಮನ ಲೆಕ್ಕದಲ್ಲಿ ದಾಖಲಾಗಿ ಕೃಷ್ಣನ ಅಕೌಂಟಿಗೆ ಜಮಾ ಆಗುತ್ತವೆ. ಇದಕ್ಕೆ ವೆಲ್ಫೇರ್ ಅಕೌಂಟ್ ಎಂದು ಹೆಸರಿಸಲಾಗಿದೆ. ಅಕೌಂಟಿನಿಂದ ಅಕೌಂಟಿಗೆ ವರ್ಗವಾಗುವ ಹಣಕ್ಕೆ ಅಲ್ಲಿಂದ ಇಲ್ಲಿಗೆ ಯಾಕೆ ಬಂತು? ಹೇಗೆ ಬಂತು ಎಂಬುದಕ್ಕೆ ಪುರಾವೆಗಳಿಲ್ಲ. ಇದು ಬರೀ ವರ್ಗಾವಣೆ ಮಾತ್ರ, ಚೆಕ್‌ಗಳನ್ನು ಬಳಸಿ ಮಾನ್ಯ ಶ್ರೀ ಕಾರ್ಯದರ್ಶಿ ಸಾಹೇಬರು ಹಣ ತೆಗೆದುಕೊಂಡಿದ್ದಾರೆ. ಇದು ಸುಮಾರು ಐವತ್ತು ಲಕ್ಷದಷ್ಟಾಗಬಹುದು. ಇದಕ್ಕೆ ನೀವು ಸರಿಯಾದ ಕಾರಣ ಕೊಡಬೇಕಾಗಬಹುದು" ಎನ್ನುತ್ತ ಕಾರ್ಯದರ್ಶಿಯವರತ್ತ ತಿರುಗಿ ಹೇಳಿದೆ. "ಮತ್ತೆ ನಾನು ಮೂರು ದಿನದಲ್ಲಿ ೬ ತಿಂಗಳಿಗೆ ಆಗುವಷ್ಟು ಖರ್ಚನ್ನು ಮಾಡಿದ್ದೇನೆ ಎಂಬುದು ಸತ್ಯ. ಅದು ಕೃಷ್ಣನ ಅಕೌಂಟಿಗೆ ಹಾಕಿದ ಹಣವನ್ನು ಮರಳಿ ಖಾತೆಗೆ ರಿವರ್ಸ್ ಮಾಡಿ ಖರ್ಚು ಮಾಡಿದ್ದೇನೆ. ಅದು ಲೈಂಗಿಕ ಕಾರ್ಯಕರ್ತೆಯರಿಗಾಗಿ ಬಂದ ಹಣ. ಅದನ್ನು ನಮ್ಮ ಇನ್ನೊಂದು ಅಕೌಂಟಿನಲ್ಲಿಟ್ಟು ಖರ್ಚು ಮಾಡುವ ಅಧಿಕಾರ ನಮಗಿಲ್ಲ" ಎಂದು ಹೇಳಿದೆ. ಆಗಲೇ ಸಂಜೆ ಆರು ಗಂಟೆಯಾಗುತ್ತಿತ್ತು. ಕಾರ್ಯದರ್ಶಿಯವರು ಇದಕ್ಕೆ ಉತ್ತರ ಕೊಡಲು ಎದ್ದು ನಿಂತರು. ಆತ ಹೇಳಿದ್ದು ಸತ್ಯ. "ನಾವು ಪ್ರಾಜೆಕ್ಟ್‌ಗೆ ಹಣ ಖರ್ಚುಮಾಡಿದರೆ ಬೋಕಿ ಹಿಡಿದುಕೊಳ್ಳಬೇಕಾಗುತ್ತದೆ. ಪ್ರಾಜೆಕ್ಟ್‌ಗಳನ್ನು ನೆಪಕ್ಕೆ ಮಾತ್ರ ರನ್ ಮಾಡಿದರೆ ಮಾತ್ರ ಸಂಸ್ಥೆಗೆ ಲಾಭವಾಗುತ್ತದೆ. ಈ ಹುಡುಗ ಆ ಹೊಲಸು ಜನರ ಬಗ್ಗೆ ಯೋಚನೆ ಮಾಡ್ತಾ ಇದ್ದಾನೆ. ನಮಗೆ ಅವರು ಸತ್ತರೆಷ್ಟು? ಯಾವದೇ ರೋಗಕ್ಕೆ ತುತ್ತಾದರೆಷ್ಟು? ನಮ್ಮ ಸಂಸ್ಥೆ ಉದ್ಧಾರವಾಗಬೇಕಲ್ಲ, ನಾನು ಐವತ್ತು ಲಕ್ಷ ವಿತ್‌ಡ್ರಾ ಮಾಡಿದ್ದು ಸತ್ಯ, ಇಂಥ ಪ್ರಾಜೆಕ್ಟ್ ಬರಬೇಕಾದರೆ ನಾವು ಹಣ ಕೊಡಬೇಕು. ಇಲ್ಲದಿದ್ದರೆ ಏನು ಬರುತ್ತದೆ, ಸಂಸ್ಥೆ ನಡೆಯಬೇಕು ಅಂದ್ರೆ ಸುಮ್ನೇನಾ?" ಎಂದು ಸಮರ್ಥಿಸಿಕೊಂಡರು. ಅವರ ಸಮರ್ಥನೆ ಉಳಿದ ಸದಸ್ಯರಿಗೆ ಸರಿ ಬರಲಿಲ್ಲ, ಇಲ್ಲ ಇನ್ನೊಂದು ಸಲ ಸಂಪೂರ್ಣ ಆಡಿಟ್ ಮಾಡಿಸೋಣ ಎಂದು ಅಧ್ಯಕ್ಷರನ್ನೊಳಗೊಂಡ ಆರು ಜನರ ಸದಸ್ಯ ಮಂಡಳಿ ತೀರ್ಮಾನಿಸಿದರು. ಇದರಿಂದ ಕೆರಳಿದ ಕಾರ್ಯದರ್ಶಿಗಳು ಪದತ್ಯಾಗ ಮಾಡಿದರು. ಆಮೇಲೆ, ೬ ಜನರ ಗುಂಪಿನ ಬಹುಮತದ ಆಧಾರದಲ್ಲಿ ಕೆಲ ತೀರ್ಮಾನಗಳನ್ನು ತೆಗೆದುಕೊಂಡರು. ಅದರಲ್ಲಿ ಕಾರ್ಯದರ್ಶಿಯನ್ನು ತೆಗೆದು ಹಾಕುವುದು, ಆತನ ಕಪ್ಪು ಹಣದ ವ್ಯವಹಾರದಲ್ಲಿ ಪಾಲುದಾರನಾದ ಕರುಣಾಸಾಗರನನ್ನು ಅಮಾನತ್ತಿನಲ್ಲಿ ಇಡುವದು ಎಂದು ತೀರ್ಮಾನಿಸಿತು.

ಎಲ್ಲರೂ ಹೊರಡಲು ಅಣಿಯಾದರು. ಅಧ್ಯಕ್ಷರ ಕಾರು ಚಲಿಸಿತು. ನನಗೆ ಅಧ್ಯಕ್ಷರು ಸಾಕ್ಷಾತ್ ಗಾಂಧಿಯ ಅಪರಾವತಾರ ಎಂದು ಭಾಸವಾಯಿತು. ಕ್ಷಣ ಚಲಿಸಿದ ಕಾರು ಮುಂದೆ ಒಂದು ಇಪ್ಪತ್ತು ಫೀಟಿನಂತರದಲ್ಲಿ ನಿಂತುಕೊಂಡಿತು. ನಾನು ಓಡಿ ಹೋಗಿ, "ಏನಾದ್ರೂ ವಿಷಯ ಇತ್ತಾ ಸರ್" ಎಂದೆ. "ಈಗ ಏನು ಮಾಡ್ತೀರಿ ನೀವು" ಎಂದರು. "ಈಗ ಏನು ಇಲ್ಲ ಸರ್," ಎಂದೆ. "ನೀವು ನಮ್ಮ ತೋಟ ನೋಡಿಲ್ಲ, ಬನ್ನಿ ಹೋಗೋಣ" ಎಂದರು. ನಾನು ಅವರ ಪಕ್ಕದಲ್ಲಿ ಕುಳಿತುಕೊಂಡೆ. ಇಲ್ಲಿಂದ ಕೇವಲ ನಾಲ್ಕು ಕಿ.ಮೀ. ದೂರದಲ್ಲಿರುವ ತೋಟದತ್ತ ಕಾರು ಹೊರಟಿತು. ಅದು ಅದ್ಭುತ ತೋಟ. ಅಧ್ಯಕ್ಷರು ನನ್ನನ್ನು ದುಂಡಾಕಾರದ ಒಂದು ಟೇಬಲ್‌ಗೆ ಕರೆದುಕೊಂಡು ಹೋಗಿ ಕೂಡ್ರಿಸಿ ತಾವು ಕುಳಿತುಕೊಂಡರು. ತೋಟದ ಕೆಲಸಗಾರ ಒಂದು ಬಾಟಲ್ ತಂದು ಓಪನ್ ಮಾಡಿ ಎರಡು ಗ್ಲಾಸ್‌ಗೆ ಸುರುವಿದ, ನಾನು ಗಾಬರಿಯಾದೆ, ಇಲ್ಲ ಸರ್, ನನಗೆ ಬೇಡ, ನಾನು ತೆಗೆದುಕೊಳ್ಳುವುದಿಲ್ಲ" ಎಂದೆ. "ನೀವು ಇದನ್ನು ತೆಗೆದುಕೊಳ್ಳಬೇಕು, ಇದು ಮಧ್ಯಪ್ರದೇಶದ ಕಾಡಿನಲ್ಲಿ ಸಿಗುವ ಮವ್ವಾ ಎಂಬ ಗಿಡದ ಹೂವುಗಳಿಂದ ತಯಾರಿಸಿದ ಜೂಸ್" ಎಂದರು.

ಅಧ್ಯಕ್ಷರು ಮೆಲ್ಲನೆ ಹೇಳಹತ್ತಿದರು : "ನಾನು ಒಂದು ಮಾತು ಹೇಳ್ತೀನಿ, ಶಿವು ತಪ್ಪು ತಿಳಿಯ ಬಾರದು. ಅದು ಹೇಗೆ ಹೇಳಬೇಕು ಅಂತಾ ಗೊತ್ತಾಗ್ತ ಇಲ್ಲ. ಆ ಸೂ... ಮಗ ಕಾರ್ಯದರ್ಶಿ ತಾನೇ ತಿಂದು ಹೋದ. ಏನೋ ವಿಷಯದಲ್ಲಿ ಬಹಳ ತಿಳುವಳಿಕೆ ಇದ್ದವನು ಅಂತ. ನಾನೂ ಸಹ ಅವನು ಎಲ್ಲಿ ಸಹಿ ಹಾಕು ಅಂತಿದ್ನೋ ಅಲ್ಲೆಲ್ಲ ಸಹಿ ಮಾಡಿದೆ, ಆದರೆ ನನಗೆ ಗೊತ್ತಾಯ್ತು, ನಾನು ಮೂರ್ಖ ಇದ್ದಿನಿ ಅಂತ. ಅವನು ವರ್ಷದಲ್ಲಿ ಐವತ್ತು ಲಕ್ಷ ಗುಳುಂ ಮಾಡಿದಾನೆ ಅಂದ್ರೆ ನನಗೆ ಆಶ್ಚರ್ಯವಾಯಿತು. ನನ್ನಂಥ ಬುದ್ಧು ಯಾರು ಇಲ್ಲಾಂಥ" ಎಂದರು. ತಂಗಾಳಿ ಹಾಗೆ ಬೀಸುತ್ತಿತ್ತು. ಮವ್ವಾ ಜೂಸ್ ಕೆಲಸ ಮಾಡುತ್ತಿತ್ತು.

ನಾನು ಮೂರ್ಖ... ಮಗ ಇದ್ದೀನಿ, ಅಟ್‌ಲೀಸ್ಟ್ ಐವತ್ತು ಪರ್ಸೆಂಟು ಅಂದ್ರು... ಎನ್ನುತ್ತ ಮತ್ತೆ ಗ್ಲಾಸಿಗೆ ಮವ್ವಾ ಜೂಸನ್ನು ಸುರುವಿಕೊಂಡರು. "ಈಗ ನೀನು ನನಗೆ ಆ ಸೆಕ್ರೆಟರಿಗೆ ಕರುಣಾಸಾಗರ್ ಇದ್ನಲ್ಲ ಹಾಗೆ, ಅವರಿಬ್ಬರ ಅನ್ಯೋನ್ಯಸಂಬಂಧದಂತೆ ನನ್ನದು ನಿನ್ನದು ಎಂದು ಇನ್ನೂ ತೊದಲಹತ್ತಿದರು. ನನಗೆ ಅಷ್ಟು ಬ್ಯಾಡರಿ, ವರ್ಷಕ್ಕೆ ಒಂದಿಪ್ಪತ್ತು ಲಕ್ಷ... ಸಾಕು..." ನನಗೆ ಅರ್ಥವಾಗಹತ್ತಿತು. ಇಲ್ಲಿರುವುದೆಲ್ಲ ಒಂದೇ ವಂಶ. ಇವರ ಬೇರುಗಳೆಲ್ಲ ಒಂದೇ ಎಂದು ಗ್ಲಾಸಿಗೆ ಆ ಸಿಹಿಮಿಶ್ರಿತ ಒಗರಿನ ಕಹಿಯ ಮವ್ವಾ ದ್ರವವನ್ನು ಹಾಕಿಕೊಂಡು ಗಟಗಟನೆ ನಿರಂತರವಾಗಿ ಕುಡಿದು ಬಾಯಿಗೆ ನಿಂಬೆಹೋಳನ್ನು ತುರುಕಿಕೊಂಡೆ. ಮವ್ವಾ ನನ್ನನ್ನು ನಿಜವಾಗಿಯೂ ಸುಷುಪ್ತಿಗೆ ಕರೆದುಕೊಂಡು ಹೋಗಿತ್ತು. ಹಾಗೆಯೇ ಗೋಣನ್ನು ಆ ದುಂಡು ಮೇಜಿನ ಪರಿಷತ್ತಿನಂತಿರುವ ಟೇಬಲ್ಲಿಗೆ ಆನಿಸಿದೆ. ಅಧ್ಯಕ್ಷರು ಹೇಳಿದ, "ನಿಂಗಪ್ಪ ಇವನನ್ನು ಗೆಸ್ಟ್‌ಹೌಸ್‌ನಲ್ಲಿ ಮಲಗಿಸು" ಎನ್ನುವುದೇ ನನಗೆ ಪ್ರಪಂಚದ ಕೊನೆಯ ಮಾತಂತೆನಿಸಿತು. ಆಮೇಲೆ ನಾನು ಮಲಗಿದ್ದೇನೋ, ಎದ್ದಿದ್ದೇನೋ, ಕುಳಿತಿದ್ದೇನೋ ನನಗೇ ತಿಳಿಯಲಿಲ್ಲ. ಆದರೆ ಆ ಅಸ್ಪಷ್ಟ ಸುಪ್ತ ಲೋಕದಲ್ಲಿ ನಾನು ಅನೇಕರನ್ನು ಭೇಟಿ ಮಾಡಿದೆ ಎನ್ನಿಸಿತು. ಅಲ್ಲಿ ಗೋಡ್ಸೆ ಮತ್ತು ಗಾಂಧಿ ಹೆಗಲ ಮೇಲೆ ಕೈಹಾಕಿಕೊಂಡು ಜಿಗ್ರಿ ದೋಸ್ತಿಗಳಂತೆ ಅತ್ತ ಇತ್ತ ತಿರುಗುತ್ತಿದ್ದರು. ಮತ್ತೆ ಎಲುಬಿನ ವ್ಯಾಪಾರ ಒಂದು ಕಡೆ ಅವ್ಯಾಹತವಾಗಿ ಸಾಗಿತ್ತು. ಅಪ್ಪ ಇಂದು ಎಲುಬಿನ ವ್ಯಾಪಾರದಲ್ಲಿ ಪುಡಿ ವ್ಯಾಪಾರಿಯಾಗಿರದೆ ಹೋಲ್‌ಸೇಲ್ (ಸಗಟು) ವ್ಯಾಪಾರಿಯಾಗಿದ್ದ. ಆತನ ಅಂಗಡಿಯ ಮುಂದೆ, ನಮ್ಮೂರಿನ ಮಾದರ ರಾಮ, ಬ್ಯಾಡರ ಹೀರ್ಯಾ, ಇನ್ನೂ ಅನೇಕರು ಹೆಣಗಳಾಗಿ ನೇತಾಡುತ್ತಿದ್ದರು. ಕಟುಕನ ಅಂಗಡಿಯ ಮುಂದೆ ನೇತಾಕಿದ ಓತಿನ ಚಿತೆ. ನಮ್ಮ ಸಂಸ್ಥೆಯ ಸೆಕ್ರೆಟರಿ ಸಹ ಈ ಎಲುಬುಗಳನ್ನು ಒಳ್ಳೆಯ ಶೋಕೇಸಿನಲ್ಲಿ ಜೋಡಿಸಿಟ್ಟು ಅದ್ಭುತವಾದ ಶೋರೂಮ್ ಮಾಡಿದ್ದ. ಎಂತಹ ಮಾರುಕಟ್ಟೆ ಇದು! ಮತ್ತೆ ಮುಂದೆ ಹೋದೆ, ಅಲ್ಲಿ ಎಲುಬಿನ ಚಿಲ್ಲರೆ ವ್ಯಾಪಾರಿಯಾಗಿ ಅಧ್ಯಕ್ಷರು ಕುಳಿತಿದ್ದರು. ಆಶ್ಚರ್ಯವಾಯಿತು. ಅವರು ನನ್ನನ್ನು ಗುರುತು ಹಿಡಿದರೂ ಗುರುತು ಹಿಡಿಯದವರಂತೆ ವ್ಯಾಪಾರದಲ್ಲಿ ತನ್ಮಯರಾದರು. ಅಲ್ಲಿ ದಲ್ಲಾಳಿಗಳ ಒಂದು ಗುಂಪೇ ಇತ್ತು. ಅವರು ಮನುಷ್ಯರನ್ನು ಹಿಡಿದು ತಂದು ವ್ಯಾಪಾರಿಗಳಿಗೆ ಒಪ್ಪಿಸುತ್ತಿದ್ದರು. ಆ ಮನುಷ್ಯರಲ್ಲಿ ಪಾಪ ನಾನು ನೋಡಿದ ಆ ಲೈಂಗಿಕ ಕಾರ್ಯಕರ್ತರು ಇದ್ದರು. ಗಾಂಧಿ ಮತ್ತು ಗೋಡ್ಸೆಗಳಂತೆ ಇದ್ದ ಆ ಇಬ್ಬರು ವ್ಯಕ್ತಿಗಳು ದೂರದಿಂದ ನನ್ನ ನೋಡುತ್ತಲೇ ಮಾತಾಡುತ್ತಿದ್ದರು. ಆಮೇಲೆ ಹತ್ತಿರ ಬಂದರು. ನನ್ನ ರಟ್ಟೆಗಳಿಗೆ ಕೈಹಾಕಿ ಎಲ್ಲಿಗೋ ಎಳೆದುಕೊಂಡು ಹೊರಟರು. ನಾನು ಭೀಮಸದೃಶ ಬಲದಿಂದ ಎರಡು ಕೈಗಳನ್ನು ಕೊಡವಿದೆ. ಅವರು ಮಾರು ದೂರ ಹೋಗಿಬಿದ್ದರು. ಮತ್ತೆ ಅವರು ನನ್ನತ್ತ ನುಗ್ಗಲು ಪ್ರಯತ್ನಿಸಿದರು. ನಾನು ಆ ಎಲುಬಿನ ಮಾರುಕಟ್ಟೆಯಿಂದ ಓಡಲು ಪ್ರಯತ್ನಿಸಿದೆ. ಕಾಲಿಗೆ ಗಾಲಿ ಕಟ್ಟಿದಂತೆ ಓಡಹತ್ತಿದೆ. ಓಡಿ ಓಡಿ ಮತ್ತೆ ಇನ್ನೊಂದು ಕತ್ತಲು ತಲುಪಿದೆ.

**ಮಹಾಂತೇಶ ನವಲಕಲ್**
ವಿದ್ಯಾಪೋಷಕ, ಮೊದಲನೇ ಮಹಡಿ
ಯಶೋದಾ ಸದನ, ಪಿ. ಬಿ. ರಸ್ತೆ, ವಿದ್ಯಾಗಿರಿ
ಧಾರವಾಡ – 580 004

# ಋಗ್ವೇದ ಪ್ರವೇಶಿಕೆ : ಐತಿಹ್ಯ ಮತ್ತು ವಾಸ್ತವ

**ಮಾನವನ ನಾಗರಿಕತೆಯ ಇತಿಹಾಸದಲ್ಲಿ ಋಗ್ವೇದವು ಮೊಟ್ಟಮೊದಲ ಸ್ಪಷ್ಟವಾದ ಲಿಖಿತ ದಾಖಲೆ. ಅದಕ್ಕೆ ಮುಂಚಿನ ನಾಗರಿಕತೆಗಳ ಸುಳುಹುಗಳು ಅನೇಕವಿವೆ, ಆದರೆ ಯಾವುದೂ ಸಾಹಿತ್ಯ ರೂಪದ ಲಿಖಿತ ಪುರಾವೆಯಲ್ಲ. ಸಿಂಧೂ ನಾಗರಿಕತೆಯ ಕಾಲದ ಮೊಹರುಗಳಲ್ಲಿ ಒಂದು ಲಿಪಿ ಇದೆ. ಅದು ಲಿಪಿಯೇ ಅಲ್ಲವೆಂದು ಈಚಿನ ಕೆಲವು ವಿದ್ವಾಂಸರು ವಾದಿಸುತ್ತಿದ್ದಾರೆ. ಲಿಪಿ ಇಲ್ಲದಿದ್ದರೂ ಸಾಹಿತ್ಯವಾಗಿ ರಚನೆಗೊಂಡು ಮುಂದಿನ ತಲೆಮಾರುಗಳಿಗೆ ವೇದವು ಮೌಖಿಕವಾಗಿ ಲಭ್ಯವಾಗುತ್ತಾ ಬಂದಿದೆ. ವೇದದಲ್ಲಿ ಏನಿದೆಯೆಂಬ ಪ್ರಶ್ನೆಯನ್ನು ಹಾಕಿ ಕೊಳ್ಳದೆ ಅಲ್ಲಿಲ್ಲದಿರುವುದು ಯಾವುದೂ ಇಲ್ಲವೆಂಬ ಐತಿಹ್ಯವನ್ನು ಶತಮಾನಗಳ ಕಾಲ ನಮ್ಮ ದೇಶದಲ್ಲಿ ಪ್ರಚಾರ ಮಾಡುತ್ತಾ ಬರಲಾಗಿದೆ. ನಿಜಕ್ಕೂ ವೇದದಲ್ಲಿ ಏನಿದೆಯೆಂಬ ಕುತೂಹಲ ತಣಿಸಿಕೊಳ್ಳುವುದು ಸಾಂಸ್ಕೃತಿಕವಾಗಿ ಆರೋಗ್ಯಕರ. ವೈದಿಕ ಸಾಹಿತ್ಯದ, ವಿಶೇಷವಾಗಿ ಋಗ್ವೇದದ, ಪರಿಚಯ ಮಾಡಿಕೊಳ್ಳಲು ಅನುವಾಗುವಂತೆ ಒಂದು ಲೇಖನಮಾಲೆಯನ್ನು 'ಹೊಸತು' ಓದುಗರಿಗಾಗಿ ಪ್ರಸ್ತುತಪಡಿಸಲಾಗುತ್ತಿದೆ. ಅದರಲ್ಲಿ ಇದು ಮೊದಲ ಕಂತು.**

• • • • • • • • • • • • • • • • • • • • • •

**ಜಿ. ರಾಮಕೃಷ್ಣ**

**ಮೂ**ರು ವರ್ಷಗಳ ಹಿಂದೆ ಬೆಂಗಳೂರು ಗಾಯನ ಸಮಾಜದಲ್ಲಿ ಸಂಗೀತ ವಿದ್ವಾಂಸ ಶ್ರೀ. ಟಿ. ಎಂ. ಕೃಷ್ಣ ಅವರು ಭೈರವಿ ರಾಗದಲ್ಲಿ ಒಂದು ಕೃತಿಯನ್ನು ಹಾಡಿದ್ದರು. ಅದರ ಕರ್ತೃ ಯಾರೆಂಬುದು ಪ್ರಸ್ತುತ ಲೇಖಕನಿಗೆ ತಿಳಿಯದು. ಅವರನ್ನೇ ವಿಚಾರಿಸಲು ಪತ್ರ ಬರೆದಿದ್ದಕ್ಕೆ ಉತ್ತರ ಬರಲಿಲ್ಲ. ಅವರು ಹಾಡಿದ ಕೃತಿಯ ಒಂದು ಭಾಗ ಹೀಗಿದೆ: ಕಥಮಹಂ ಭಾವಯಾಮಿ ರಮ್ಯ ಲೀಲಾ ವಿಚಿತ್ರ ವಿನೋದ ವಿಶ್ವಜಾಲಾಂ, ಇತ್ಯಾದಿ. ಈ ನಮ್ಮ ಅಗಾಧವಾದ ವಿಶ್ವವಿದೆಯಲ್ಲಾ, ಅದನ್ನು ಅರ್ಥಮಾಡಿಕೊಳ್ಳುವುದೆಂತು? ಅದರಲ್ಲಿ ಏನೆಲ್ಲಾ ಇದೆ, ಎಷ್ಟೊಂದು ಸುಸಂಗತವಾಗಿದೆ, ಅದೆಷ್ಟು ಕ್ರಮಬದ್ಧವಾಗಿದೆ! ರಮ್ಯವಾಗಿದೆ, ಸುಂದರವಾಗಿದೆ, ವಿಚಿತ್ರವಾಗಿದೆ, ಸಂತೋಷ-ಸಂಭ್ರಮ-ವಿನೋದ, ಹೀಗೆ ಎಲ್ಲದಕ್ಕೂ ಸಾಮಗ್ರಿ ಇದೆ. ಅದನ್ನು ನೋಡಿಯೇ ಡಿ. ವಿ. ಗುಂಡಪ್ಪನವರು "ಮೇಲೆ ನೋಡೆ ಕಣ್ಣ ತಣಿಪ..." ಇತ್ಯಾದಿ ಕವನ ರಚಿಸಿದ್ದು. ಅಂತಹ ಕವನಗಳನ್ನು ಋಗ್ವೇದದ ಅನೇಕ ಕವಿಗಳು ೩೫೦೦ ವರ್ಷಗಳ ಹಿಂದೆಯೂ ರಚಿಸಿದ್ದರು ಮತ್ತು ಹಾಡಿದ್ದರು. ಸಂಗೀತಗಾರ ಟಿ. ಎಂ. ಕೃಷ್ಣ ಅವರಿಗೆ ಅದ್ಭುತವೆನಿಸುವ ನಮ್ಮ ವಿಶ್ವದ ಬಗ್ಗೆ ಇಂದು ಬಹಳಷ್ಟು ಸ್ಪಷ್ಟವಾದ ಮತ್ತು ನಿಖರವಾದ ಮಾಹಿತಿ ಇದೆ. ಅದರ ಹಲವಾರು ನಿಯಮಗಳು ತಿಳಿದಿವೆ. ಆ ನಿಯಮಗಳು ಉಲ್ಲಂಘನೀಯವಲ್ಲವೆಂದು ಗೊತ್ತಾಗಿದೆ. ಆದರೂ ವಿಸ್ಮಯವೇನೂ ಕಡಿಮೆಯಾಗಿಲ್ಲ. ಆದ್ದರಿಂದಲೇ ಹೊಸ ಹೊಸ ಕವನಗಳು ಬರುತ್ತಿರುತ್ತವೆ. ಉದಾಹರಣೆಗೆ, "ನಡೆದಿದೆ ಪೂಜಾರತಿ ವಿಶ್ವದೇಹಿಗೆ; ನಭದ ನೀಲ ತಣಿಗೆಯಲ್ಲಿ ಚುಕ್ಕಿ ಚೆಲ್ಲಿದೆ" ಇತ್ಯಾದಿ. ವಿಶ್ವವೇ ದೇಹವಾದ್ದರಿಂದ ದೇಹಿಯು ವಿಶ್ವದಿಂದ ಹೊರಗೆಲ್ಲೋ ಇಲ್ಲ ಮತ್ತು ಹೊರಗಿನಿಂದ ನಿಯಂತ್ರಿಸುತ್ತಿಲ್ಲ ಎನ್ನಬಹುದಲ್ಲವೆ? ಅಂತೆಯೇ, ಚುಕ್ಕಿ ಚೆಲ್ಲಿದ ನಭವೆಂಬ ತಣಿಗೆಯು ನೀಲಿ ಯಾಗಿರುವುದಿಲ್ಲ, ಅದು ಕಪ್ಪಾಗಿರುತ್ತದೆಯಲ್ಲವೆ? ಆದರೆ ಕವಿಯು ತನಗೆ ಬೇಕಾದಂತೆ ಭಾವಿಸಿಕೊಳ್ಳ ಬಹುದು. ಸ್ವತಂತ್ರನಾದ್ದರಿಂದ ಅವನು ಭ್ರಮೆಗಳನ್ನು ಕಟ್ಟಿಕೊಳ್ಳಬಹುದು. ಕಾವ್ಯಲೋಕದಲ್ಲಿ ಕವಿಯು ಒಬ್ಬ ಪ್ರಜಾಪತಿ; ಅವನಿಗೆ ರುಚಿಸಿದಂತೆ ಅವನು ವಿಶ್ವವನ್ನು ಕಲ್ಪಿಸಿಕೊಳ್ಳಬಹುದು. ಋಗ್ವೇದದ ಕವಿ ಇದನ್ನು ಹೇರಳವಾಗಿ, ನಿರಾಳವಾಗಿ, ಮಾಡುತ್ತಾನೆ.

ಕೆಲವು ಮತಿಭ್ರಷ್ಟರಿಗೆ ಋಗ್ವೇದದಲ್ಲಿರುವುದು ಸಾಕಷ್ಟು ಸೊಬಗಿನಿಂದ ಕೂಡಿಲ್ಲ, ಸಾಕಷ್ಟು ಶ್ರೇಷ್ಠ ವಾಗಿಲ್ಲ, ಎನಿಸುತ್ತದೋ ಏನೋ! ಆದ್ದರಿಂದ ಅವರು ಋಗ್ವೇದದ ಕವಿಯೊಡನೆ ಸ್ಪರ್ಧೆಗಿಳಿದು ತಮ್ಮ ಕಲ್ಪನಾವಿಲಾಸದಲ್ಲಿ ಋಗ್ವೇದದಲ್ಲಿ ಏನೇನನ್ನೋ ಕಂಡುಹಿಡಿಯುತ್ತಾ ಸುಖಿಸುತ್ತಾರೆ. ಆದ್ದರಿಂದ ಕೆಲವರಿಗೆ ಅಲ್ಲಿ ಆಧುನಿಕ ವಿಜ್ಞಾನದ ತುಣುಕುಗಳು ಕಾಣುತ್ತವೆ. ಇನ್ನು ಕೆಲವರಿಗೆ ಗಣಿತಶಾಸ್ತ್ರ, ಜ್ಯೋತಿಷ್ಯ, ಅಮೋಘ ನೈತಿಕತೆ, ಹೀಗೆ ವಿವಿಧ ಸಂಪತ್ತುಗಳ ಖನಿ ಋಗ್ವೇದದಲ್ಲಿ ತೆರೆದುಕೊಳ್ಳುತ್ತದೆ. "ಅಪ್ಸು ಜ್ಯೋತಿಃ ಪ್ರತಿಷ್ಠಿತಂ" ಎಂಬ ಮಾತನ್ನು ವೇದದಲ್ಲಿ ಕಂಡು ಪ್ರಸ್ತುತ ಲೇಖಕನ ಒಬ್ಬ ಸಂಸ್ಕೃತ ಅಧ್ಯಾಪಕರು ಪುಲಕಿತ ರಾಗುತ್ತಿದ್ದರು. "ನೋಡಿದೆಯಾ, ನೀರಿನಲ್ಲಿ ವಿದ್ಯುಚ್ಛಕ್ತಿಯನ್ನು ನಮ್ಮ ಪೂರ್ವಿಕರು ವೇದದ ಕಾಲದಲ್ಲೇ ಕಂಡಿದ್ದರು" ಎಂದು ಹಸನ್ಮುಖಿಗಳಾಗಿ ಹುರುಪಿನಿಂದ ಹೇಳುತ್ತಿದ್ದರು. ವಿದ್ಯುಚ್ಛಕ್ತಿಯು ನೀರಿನಲ್ಲಿಲ್ಲ, ನೀರಿನ ರಭಸದಿಂದ ಟರ್ಬೈನು ತಿರುಗುತ್ತದೆ, ಅದರಿಂದ ವಿದ್ಯುತ್ ಉತ್ಪಾದನೆ ಯಾಗುತ್ತದೆ ಎಂದು ಶಿವನಸಮುದ್ರಕ್ಕೆ ಹೋಗಿ ತಿಳಿಯಲು ಅವರಿಗೆ ಅವಕಾಶವಿತ್ತು; ಆದರೆ ಅವರು ಅವಕಾಶವನ್ನು ಉಪಯೋಗಿಸಿಕೊಳ್ಳಲಿಲ್ಲ. ವೈದಿಕ ಸಾಹಿತ್ಯವು ಸರ್ವಜ್ಞತ್ವ ಲಕ್ಷಣ ಹೊಂದಿರದಿದ್ದರೆ ಅದು ಮೌಲಿಕವಾಗಿ ಪ್ರಾಶಸ್ತ್ಯ ಪಡೆಯುವುದಿಲ್ಲವೆಂಬ ಕೊರಗು ಅಂಥವರಿಗೆ. ಆದ್ದರಿಂದ ವೇದವು ಇತಿಹಾಸವನ್ನು ಮೀರಿ ನಿಲ್ಲಬೇಕೆಂಬ ಆಸೆ ಅವರಿಗೆ. ತಮ್ಮ ಸುತ್ತಣ ಪ್ರಪಂಚದ ವೈಭವ, ಅಲ್ಲಿಯ ಆಗುಹೋಗುಗಳು, ಅದಕ್ಕೆ ಅವರ ಪ್ರತಿಕ್ರಿಯೆ, ಇವನ್ನೆಲ್ಲಾ ಋಗ್ವೇದದ ಕವಿಗಳು ಸುಂದರವಾಗಿ ಮತ್ತು ಮಾರ್ಮಿಕತೆಯಿಂದ ದಾಖಲಿಸಿದರೆ ಇವರಿಗೆ ತೃಪ್ತಿ ಇಲ್ಲ. ವೇದಕ್ಕೆ ಆಧುನಿಕ ಕವಚ ತೊಡಿಸಿದರೆ ಮಾತ್ರ ಅದು ಶ್ಲಾಘನೀಯವಾಗುತ್ತದೆಂಬ ಮನೋ ರೋಗದಿಂದ ಪೀಡಿತರಾಗಿರುವವರು ಏನೇನೋ ಬೌದ್ಧಿಕ ಕಸರತ್ತು ಮಾಡುತ್ತಿರುತ್ತಾರೆ. ಕುವೆಂಪು ಮತ್ತು ಪುತಿನ ಕವನಗಳಲ್ಲಿ ಆಧುನಿಕ ವಿಜ್ಞಾನವನ್ನು ತುರುಕಿದರೆ ಮಾತ್ರ ಅವು ಉತ್ತಮ ಕವನ ಗಳಾಗುತ್ತವೆಂಬುದು ಮೂರ್ಖತನ.

ಎರಡು ನಿದರ್ಶನಗಳನ್ನು ನೋಡೋಣ: ಮಹರ್ಷಿ ಎಂದು ತನ್ನನ್ನು ತಾನು ಕರೆದುಕೊಂಡ ಮಹೇಶ ಯೋಗಿ ಮತ್ತು ಪುರಿಯ ಗೋವರ್ಧನ ಮಠದ "ಜಗದ್ಗುರು" (ಅವರಿಗೆ ತಮ್ಮ ಮಠವಷ್ಟೇ ಜಗತ್ತು!) ಭಾರತೀ ಕೃಷ್ಣ ತೀರ್ಥ. ಮಹೇಶ ಯೋಗಿ ಸ್ವಿಟ್ಜರ್ಲೆಂಡಿನಲ್ಲಿ "ವೈದಿಕ ವಿಶ್ವವಿದ್ಯಾ ನಿಲಯ" ಸ್ಥಾಪಿಸಿದ್ದರು; ಅವರೊಟ್ಟಿಗೆ ಅದೂ ಹೋಗಿಬಿಟ್ಟಿತೇನೊ! ಅಲ್ಲಿಯ ಒಂದು "ಸಂಶೋಧನೆ" (ಅದು ಸಂ-ಶೋಧನೆ, ಅಂದರೆ ಎಂಥದೋ ಶೋಧನೆ; ಆಮೇಲೆ ಅದು ಸ್ಲಂ-ಶೋಧನೆ ಆಗಿಬಿಡಬಹುದು) ಋಗ್ವೇದ, ಆಧುನಿಕ

ಭೌತಶಾಸ್ತ್ರ ಹಾಗೂ ಜೀವಶಾಸ್ತ್ರಗಳ ಕೆಲವು ಪ್ರಮೇಯಗಳ ನಡುವಣ ತಥಾಕಥಿತ ಸಂಬಂಧ ಕುರಿತಾದದ್ದು. ೧೯೮೫ರಲ್ಲಿ ಆ ವಿಶ್ವವಿದ್ಯಾನಿಲಯವು "ವೈದಿಕ ವಿಜ್ಞಾನ" ಕುರಿತಾದ ಸಮ್ಮೇಳನವೊಂದನ್ನು ಜರುಗಿಸಿ ತನಗೆ "ಪ್ರಕೃತಿಯ ಸಂಘಟನಾ ಶಕ್ತಿಯ ಸಂಪೂರ್ಣ ಜ್ಞಾನವನ್ನು ನೀಡುವಂತಹ 'ಏಕೀಕೃತ ಕ್ಷೇತ್ರ ಸಿದ್ಧಾಂತ' (ಯೂನಿಫೈಡ್ ಫೀಲ್ಡ್ ಥಿಯರಿ)ವನ್ನು ನೀಡುವ ಸಾಮರ್ಥ್ಯವಿದೆ" ಎಂದು ಹೇಳಿಕೊಂಡಿತ್ತು. ಋಗ್ವೇದದಲ್ಲಿ ಅಂತಹ 'ಥಿಯರಿ' ಇದೆಯೆಂದು ಈ ಮೇಧಾವಿಗೆ ಗೊತ್ತಾದ್ದು ಆಧುನಿಕ ಭೌತವಿಜ್ಞಾನವು ಪ್ರತ್ಯೇಕವಾಗಿ ಅಂಥದೊಂದು ಸಿದ್ಧಾಂತದ ಸಾಧ್ಯತೆಯನ್ನು ಮಂಡಿಸಿದ ನಂತರ ಎಂಬುದು ಗಮನಾರ್ಹ. ಮಹೇಶ ಯೋಗಿಯ ಮುತ್ತಾತನೂ ಋಗ್ವೇದ ಓದಿದ್ದರೇನೊ, ಆದರೆ ಆಗ ಅವರಿಗೆ ಈ 'ಥಿಯರಿ' ಗೋಚರಿಸಿರಲಿಲ್ಲ. ಅಷ್ಟೇ ಏಕೆ, ೩೫೦೦ ವರ್ಷಗಳಿಂದ ಋಗ್ವೇದ ನಮ್ಮೊಡನಿದೆ, ಆದರೆ ಈವರೆಗೆ ಯಾರೂ ಆ ಸಿದ್ಧಾಂತವನ್ನು ವಿಶದಗೊಳಿಸಿ ವಿವರಿಸಿರಲಿಲ್ಲ. ಇನ್ನು ಐವತ್ತು ವರ್ಷಗಳ ಬಳಿಕ ಋಗ್ವೇದದಲ್ಲಿ ಇನ್ನಾವುದೋ ಒಂದು ಆಧುನಿಕ ವಿಜ್ಞಾನದ ಪ್ರಮೇಯ ಸಿಕ್ಕುತ್ತದೆ. ಜಪಾನಿನ ಅಥವಾ ಚೀಣಾದ ಯಾವನೋ ವಿಜ್ಞಾನಿ ಒಂದು ಸಿದ್ಧಾಂತವನ್ನು ಆ ವೇಳೆಗೆ ಮಂಡಿಸಿರುತ್ತಾನೆಂದು ಭಾವಿಸೋಣ. ಅದು ಬಂದ ತರುವಾಯದಲ್ಲಿ ಅದೇ ಸಿದ್ಧಾಂತ ನಮ್ಮ ವಿದ್ವಾಂಸ ಶಿಖಾಮಣಿಗಳಿಗೆ ಋಗ್ವೇದದಲ್ಲಿ ಕಂಡುಬರುತ್ತದೆ! ನೀರಿನಲ್ಲಿ ವಿದ್ಯುಚ್ಛಕ್ತಿಯನ್ನು ಕಂಡಿದ್ದ ಋಗ್ವೇದದ ಕವಿಗೆ ವಿದ್ಯುತ್ತನ್ನು ಉತ್ಪಾದಿಸುವ ತಂತ್ರಜ್ಞಾನ ದೊರೆಯಲಿಲ್ಲ, ಪಾಪ; ಇಲ್ಲದಿದ್ದರೆ ಋಗ್ವೇದವು ರಚನೆಯಾದ ಕಾಡು–ಮೇಡುಗಳೆಲ್ಲಾ ವಿದ್ಯುದ್ದೀಪಗಳಿಂದ ಝಗಮಗಿಸಿರುತ್ತಿದ್ದವು!

ಇಲ್ಲಿ ಇನ್ನೊಂದು ಸ್ವಾರಸ್ಯವಿದೆ: ಮಹೇಶ ಯೋಗಿ ವಿಶ್ವ ಸಮ್ಮೇಳನ ನಡೆಸಿದ ೧೯೮೫ರಲ್ಲಿ ಪಾಕಿಸ್ತಾನದ ಕೆಲವು ವಿಜ್ಞಾನಿಗಳು "ಅಂತರರಾಷ್ಟ್ರೀಯ ಇಸ್ಲಾಮಿ ವಿಜ್ಞಾನದ ಸಮ್ಮೇಳನ" ನಡೆಸಿದ್ದರು. ಅವರು ನಮ್ಮ ದೇಶದ ಹಿಂದಿನ ಒಬ್ಬ ಮಂತ್ರಿ ಮುರಳಿ ಮನೋಹರ ಜೋಶಿ ಸಂತತಿಯವರು. ಜೋಶಿ ಭೌತಶಾಸ್ತ್ರ ಪ್ರಾಧ್ಯಾಪಕ, ಆದರೆ "ಹಿಂದು ಭೌತವಿಜ್ಞಾನ" ಸಹ ಅವರಿಗೆ ಗೊತ್ತು. ಫಿಲಿಪ್ ಲೆನಾರ್ಡ್ ಎಂಬ ಹಿಟ್ಲರ್ ಹಿಂಬಾಲಕನೊಬ್ಬನಿದ್ದ. ಅವನು ಭೌತಶಾಸ್ತ್ರ ಪ್ರಾಧ್ಯಾಪಕ. ಆಲ್ಬರ್ಟ್ ಐನ್‌ಸ್ಟೈನರ ಭೌತಶಾಸ್ತ್ರವನ್ನು "ಕಳಪೆ ಯಹೂದಿ ಭೌತಶಾಸ್ತ್ರ" ಎಂದು ಆತ ಮೂದಲಿಸಿದ್ದ. ಅದೊಂದೇ ಅವನ ಬಗ್ಗೆ ಇಂದಿನ ವಿಜ್ಞಾನಿಗಳು ತಿಳಿದಿರುವುದು, ಅವನ ವಿಜ್ಞಾನ ಎಂದೋ ಅಳಿಸಿ ಹೋಯಿತು. ಐನ್‌ಸ್ಟೈನ್‌ನ ಹೆಸರು ಸದ್ಯಕ್ಕಂತೂ ಇನ್ನೂ ಅಳಿಸಿಹೋಗಿಲ್ಲ. ಅದಿರಲಿ, ಪಾಕಿಸ್ತಾನದ "ವಿಜ್ಞಾನಿಗಳು" ಸಮ್ಮೇಳನದಲ್ಲಿ ಕಂಡುಕೊಂಡ ಹೊಸ ತಿಳಿವಳಿಕೆ ಎಂಥದು? "ಆಧುನಿಕ ಭೌತಶಾಸ್ತ್ರ, ಜೀವಶಾಸ್ತ್ರ, ಗಣಿತಶಾಸ್ತ್ರ ಮತ್ತು ಖಗೋಳಶಾಸ್ತ್ರಗಳಲ್ಲಿ ಉಕ್ತವಾಗಿರುವ ಹೊಸ ಜ್ಞಾನ ಶಾಖೆಗಳೆಲ್ಲಾ ಕುರ್–ಆನ್‌ನಲ್ಲಿ ಆಗಲೇ ಸೂಕ್ಷ್ಮವಾಗಿ ಭಗವಂತನ ಬಾಯಿಂದಲೇ ಬಂದು ಬಿಟ್ಟಿವೆ" ಎಂದು ಸಮ್ಮೇಳನದ ನಿರ್ಣಯವೊಂದು ಘೋಷಿಸಿತು. ಅಂದರೆ, ವೈಜ್ಞಾನಿಕ ಪ್ರಯೋಗಶಾಲೆಗಳನ್ನೆಲ್ಲಾ ಮುಚ್ಚಿಹಾಕಿ ಸುಮ್ಮನೆ ವೇದ–ತಾಲ್ಮುಡ್ – ಬೈಬಲ್ – ಕುರಾನುಗಳ ಆಳವಾದ ಅಧ್ಯಯನ ಮಾಡಿ ಅದರಿಂದಲೇ ಸಂಶೋಧನೆಗಳನ್ನು ಮಾಡಿಕೊಳ್ಳಬಹುದು ಎಂದರ್ಥ. ೧೯೯೬ರಲ್ಲಿ ಎನ್. ಪಿ. ಪಾಂಡೆ ಎಂಬ ವಿದ್ವಾಂಸರು "ಭೌತವಿಜ್ಞಾನದಲ್ಲಿ ಮಾಯೆ" ಎಂಬ (ಇಂಗ್ಲಿಷ್) ಪುಸ್ತಕ ಪ್ರಕಟಿಸಿದ್ದರು. ಆಧುನಿಕ ಭೌತಶಾಸ್ತ್ರದ ಎಲ್ಲ ಪ್ರಮುಖ ಸಿದ್ಧಾಂತಗಳನ್ನೂ ಅವರು ಅದ್ವೈತ ವೇದಾಂತದಲ್ಲಿ "ಕಂಡುಹಿಡಿದಿದ್ದರು." ಇಂಥವರಿಗೆಲ್ಲಾ ಒಂದು ಪ್ರಶ್ನೆ ಮನಸ್ಸಿಗೆ ಬರುವುದಿಲ್ಲ: ಇಂದಿನ (ಆಧುನಿಕ) ವೈಜ್ಞಾನಿಕ ಸತ್ಯವು ವೇದ ಮುಂತಾದ ಪ್ರಾಚೀನ 'ಅಪೌರುಷೇಯ' ಗ್ರಂಥಗಳಲ್ಲಿದೆಯಲ್ಲವೆ? ಆದರೆ




ಇಂದಿನ ವೈಜ್ಞಾನಿಕ ಸತ್ಯವು ಸ್ಥಿರವಲ್ಲ, ಅಂತಿಮವಲ್ಲ. ನಾಳೆ ಅದು ವಿಸ್ತಾರಗೊಳ್ಳುತ್ತದೆ, ಪುನರ್‌ಪ್ರತಿಪಾದನೆಗೆ ಗುರಿಯಾಗುತ್ತದೆ, ಬದಲಾಗುತ್ತದೆ. ಅಂದರೆ, ಇಂದಿನ ಸತ್ಯವನ್ನು ಮುಂದಿನ ಇನ್ನೂ ಆಳವಾದ ಸತ್ಯವೊಂದು ಹಿಂದಕ್ಕೆ ತಳ್ಳುತ್ತದೆ. ಆಗೇನು ಮಾಡುವುದು? ಇಂದಿನ ಸತ್ಯವನ್ನು ಪ್ರಾಚೀನ ಗ್ರಂಥಗಳಿಗೆ ಆರೋಪಿಸಿದಂತೆ ನಾಳೆ ಮುಂದಿನ ಸತ್ಯವನ್ನೂ ಆರೋಪಿಸಬೇಕಾಗುತ್ತದಲ್ಲ!

ಇನ್ನು ಭಾರತೀ ಕೃಷ್ಣ ತೀರ್ಥರ ಕತೆ: ಅವರು "ವೈದಿಕ ಗಣಿತಶಾಸ್ತ್ರ" ಎಂಬ ಪುಸ್ತಕ ಬರೆದರು. ಈಗ ಮಕ್ಕಳಿಗೆ ಸುಲಭ ಸರಳ ಗಣಿತಶಾಸ್ತ್ರವನ್ನು ಅದರ ಜಾಡಿನಲ್ಲಿ ಹೇಳಿಕೊಡುವುದಾಗಿ ಎಲ್ಲೆಲ್ಲೂ ಜಾಹಿರಾತುಗಳು ಕಂಡು ಬರುತ್ತವೆ. ೧೯೬೫ರಲ್ಲಿ ಮೊದಲ ಮುದ್ರಣ ಕಂಡ ಈ ಪುಸ್ತಕ ಆಮೇಲೆ ಹದಿನೈದಿಪ್ಪತ್ತು ಮುದ್ರಣಗಳನ್ನು ಕಂಡಿದೆ. ಭಾರತೀ ಕೃಷ್ಣ ತೀರ್ಥರ ಮೊದಲ ಹೆಸರು ವೆಂಕಟರಾಮನ್ ಸರಸ್ವತಿ. ಸಂಸ್ಕೃತ ಪಂಡಿತರು ಮತ್ತು ಗಣಿತಶಾಸ್ತ್ರದಲ್ಲಿ ವಿಶೇಷ ಆಸಕ್ತಿ ಇದ್ದವರು. ಗಣಿತಶಾಸ್ತ್ರದ ಕೆಲವು ಪ್ರಮೇಯಗಳನ್ನು ಸೂತ್ರರೂಪದಲ್ಲಿ ಬರೆದು ಅದನ್ನು "ವೈದಿಕ ಗಣಿತಶಾಸ್ತ್ರ" ಎಂದು ಕರೆದರು. ಅದರಲ್ಲಿ "ವೈದಿಕ" ಗೌಣವಾಗಿತ್ತು, ಆದರೆ ನಂತರದ ಶಿಷ್ಯರು "ಗಣಿತಶಾಸ್ತ್ರ"ವನ್ನು ಗೌಣ ಮಾಡಿ "ವೈದಿಕ"ವನ್ನು ಮೆರೆಸಿದರು. ಅವರ ಹದಿನಾರು ಸೂತ್ರಗಳಿಗೆ ಅಥರ್ವವೇದದ ಪರಿಶಿಷ್ಟವು ಮೂಲಾಧಾರವೆಂದು ಕೃಷ್ಣ ತೀರ್ಥರು ಹೇಳಿದ್ದರು, ಆದರೆ ಪರಿಶಿಷ್ಟದಲ್ಲಿ ಅದರ ಸೂಚನೆಯೇನೂ ಇಲ್ಲ. "ಜಗದ್ಗುರು"ಗಳು ಸ್ವತಃ ಹೇಳಿದ್ದೇನೆಂದರೆ, "ವೇದವೆಂದರೆ ಜ್ಞಾನ, ಪ್ರಕೃತದ ಸೂತ್ರಗಳು ಗಣಿತದ ಜ್ಞಾನ ನೀಡುತ್ತವೆ, ಆದ್ದರಿಂದ ಅದು ವೈದಿಕ" ಎಂದು. ಅದನ್ನು ಗಮನಿಸುವ ಗೋಜಿಗೆ ಹೋಗದೆ ಎನ್.ಸಿ.ಇ.ಆರ್.ಟಿ.ಯ ಗಣಿತಶಾಸ್ತ್ರ ಪ್ರಾಧ್ಯಾಪಕ ಎಸ್. ಸಿ. ಶರ್ಮ "ಲೇಖಕರು ವೇದಗಳಿಂದ ಸೂತ್ರಗಳನ್ನು ಉಲ್ಲೇಖಿಸಿರುವುದು ಅದ್ಭುತವಾಗಿದೆ" ಎಂದು ಹೇಳಿ ತಮ್ಮ ಅಪಾರ ಅಜ್ಞಾನವನ್ನು ಪ್ರಕಟಗೊಳಿಸಿದ್ದಾರೆ.

೩೫೦೦ ವರ್ಷಗಳಿಂದ ನಮ್ಮೊಂದಿಗಿರುವ ಋಗ್ವೇದವನ್ನು ಮೂಲದಲ್ಲಾಗಲಿ, ಯಾವುದಾದರೊಂದು ಅನುವಾದದಲ್ಲಾಗಲಿ ಓದಿ ಅದರಲ್ಲೇನಿದೆ ಎಂದು ತಿಳಿದುಕೊಳ್ಳುವ ಮನಸ್ಸು ಬಾರದಿರುವುದು ಒಂದು ಸೋಜಿಗ. ಮೈಸೂರು ಅರಮನೆ ಪ್ರಕಟಿಸಿದ್ದ ಋಗ್ವೇದ ಭಾಷಾಂತರ ಈಗ ಎಲ್ಲರಿಗೂ ಲಭ್ಯವಿದೆ. ಸಾವಿರ ಪುಟಗಳ ಕಾದಂಬರಿಗಳ ನ್ನೋದುವ ಮಂದಿಗೆ ಋಗ್ವೇದದಲ್ಲಿರುವ ೧೦೨೮ ಸೂಕ್ತಗಳನ್ನು ನೇರವಾಗಿ ಪರಿಚಯಿಸಿಕೊಳ್ಳಲು ಅಡ್ಡಿಯೇನು? ಮಾನಸಿಕ ಸಿದ್ಧತೆ ಇಲ್ಲದಿರುವುದೆ, ಬೌದ್ಧಿಕ ಕೀಳರಿಮೆಯೆ, ಅಥವಾ ಸಂಪ್ರದಾಯವು ಹೇರಿರುವ ಅಭಿಪ್ರಾಯಗಳನ್ನು ಬದಲಿಸಿಕೊಳ್ಳಬೇಕಾದೀತೆಂಬ ಭೀತಿಯೆ? ಮೊದಲನೆಯದಾಗಿ, ಭೀತಿಯ ಅಗತ್ಯವೇನೂ ಇಲ್ಲ. ಗರುಡ ಪುರಾಣವನ್ನು ಓದಲು ಕೆಲವರಿಗೆ ಭಯವಂತೆ. ಅಲ್ಲಿರುವ ಬೀಭತ್ಸ ಕಲ್ಪನೆಗಳು ಅಂಥವು. ಋಗ್ವೇದದಲ್ಲಿ ಅಂಥದೇನೂ ಇಲ್ಲ. ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿ ಎಂಬ ಉದ್ದಾಮ ಸಂಸ್ಕೃತ ವಿದ್ವಾಂಸರೊಬ್ಬರು ಕಲ್ಕತ್ತೆಯಲ್ಲಿದ್ದರು. ನೂರು ವರ್ಷಗಳಿಗೂ ಮುಂಚೆ. ಯಾರೋ ಒಬ್ಬ ಯೂರೋಪಿನ ಪ್ರಾಧ್ಯಾಪಕ ಕಲ್ಕತ್ತೆಗೆ ಬಂದಿದ್ದ. ಅವನು ಈಶ್ವರಚಂದ್ರ ವಿದ್ಯಾಸಾಗರರ ಬಳಿಗೆ ಹೋಗಿ ತನಗೊಬ್ಬ ಒಳ್ಳೆಯ ಶಿಕ್ಷಕ ಬೇಕು, ತಾನು ಸಂಸ್ಕೃತ ಕಲಿಯಬೇಕು, ಎಂದು ಹೇಳಿದ. ಅವರು ಹರಪ್ರಸಾದ ಶಾಸ್ತ್ರಿಗಳನ್ನು ಹೋಗಿ ಕಾಣಲು ಆತನಿಗೆ ತಿಳಿಸಿದರು. ಶಾಸ್ತ್ರಿಗಳು ಸಂಪ್ರದಾಯಸ್ಥರು, ಆದರೆ ಮಡಿವಂತಿಕೆಯಿಂದ ವೇದದಲ್ಲಿರುವುದನ್ನು ವಸ್ತುನಿಷ್ಠವಾಗಿ ತಿಳಿದುಕೊಳ್ಳಲು ಮತ್ತು ಇತರರಿಗೆ ತಿಳಿಸಲು ಎಂದೂ ಹಿಂಜರಿ ಯಲಿಲ್ಲ. ಋಗ್ವೇದವನ್ನು ಬಂಗಾಳಿಗೆ ಅನುವಾದಿಸಿ ಪ್ರಕಟಿಸಿದ್ದಾರೆ ಕೂಡ. ಅದಕ್ಕೊಂದು ಮುಕ್ತವಾದ ಪೀಠಿಕೆ ಬರೆದಿದ್ದಾರೆ. ಅದನ್ನು ನವಕರ್ನಾಟಕ ಪ್ರಕಾಶನದ "ಪ್ರತಿರೋಧ" ಎಂಬ ಸಂಕಲನದಲ್ಲಿ (೨೦೦೪) ಕಾಣಬಹುದು. ಅದರ

ಸಂಪಾದಕರು ದೇವಿಪ್ರಸಾದ ಚಟ್ಟೋಪಾಧ್ಯಾಯ ಮತ್ತು ಕನ್ನಡಕ್ಕೆ ಅನುವಾದಿಸಿದವರು ಜಿ. ಕುಮಾರಪ್ಪ. ಹರಪ್ರಸಾದ ಶಾಸ್ತ್ರಿಗಳು ಆರಂಭದಲ್ಲಿ ಒಂದು ಮಾತು ಹೇಳಿದ್ದರು: "ಅತಿ ಸಂಪ್ರದಾಯಸ್ಥರಿಗೆ ನಾನು ಹೇಳುವುದು ಮುಜುಗರ ತರಬಹುದು. ಅಂತಹ ಮಾನಸಿಕ ದೌರ್ಬಲ್ಯ ಉಳ್ಳವರು ಇನ್ನು ಮುಂದಕ್ಕೆ ಓದುವುದು ಬೇಡ." ದೌರ್ಬಲ್ಯದ ಬದಲು ಶ್ರದ್ಧೆ ಉಳ್ಳವರು ಅದನ್ನೋದಿ ವೇದದ ನಿಜಸ್ವರೂಪವನ್ನು ತಿಳಿಯಲು ಸಾಧ್ಯ. ಅವರ ಕೆಲವು ಮಾತುಗಳನ್ನು ಉದ್ಧರಿಸುವುದು ಅಗತ್ಯ:

"ವೇದಗಳ ಹೆಸರು ಹೇಳುತ್ತಿದ್ದಂತೆಯೇ ನಮ್ಮ ದೇಶದ ಆಬಾಲವೃದ್ಧ ವನಿತಾದಿ ಜನರಲ್ಲಿ ಭಯಭಕ್ತಿ ಸಂಮಿಳಿತ ಒಂದು ಬಗೆಯ ಭಾವನೆ ಉದಯಿಸುತ್ತದೆ. ಯಾರಾದರೂ ವೇದ ಓದಿದರೆ ಸಾಕು ಅವನು ಮಹಾನ್ ಅದೃಷ್ಟಶಾಲಿ ಎಂದೋ, ಯಾರಾದರೂ ವೇದ ವ್ಯಾಖ್ಯೆ ಮಾಡಿದರೆ ಅವನು ಸಾಕ್ಷಾತ್ ಶಂಕರ ಅಥವಾ ನಾರಾಯಣನ ಅವತಾರ ಎಂದೋ ಭಾವಿಸುತ್ತಾರೆ. ವೇದಾಧ್ಯಯನ ಮಾಡಬೇಕಾದರೆ ದೇಹ ಮನಸ್ಸುಗಳೆರಡನ್ನೂ ಪವಿತ್ರಗೊಳಿಸಿಕೊಳ್ಳಬೇಕಾಗುತ್ತದೆ; ವೇದ ಮಂತ್ರ ಬಲದಿಂದ ಅಸಾಧ್ಯವನ್ನು ಸಾಧ್ಯಗೊಳಿಸಬಹುದು. ವಿಶ್ವಾಮಿತ್ರ ಮಂತ್ರಪಠನ ಮಾಡಿದ ಕೂಡಲೇ ಹನ್ನೆರಡು ವರ್ಷ ಬರಗಾಲ ಇದ್ದಲ್ಲಿ ಜಡಿ ಮಳೆ ಸುರಿಯಿತು; ಇಲ್ಲಿ ನಾನು ವೇದ ಮಂತ್ರ ಪಠಿಸಿದೆ ದೆಹಲಿಯಲ್ಲಿ ನನ್ನ ಶತ್ರು ಸಾವನ್ನಪ್ಪಿದನು; ವೇದ ಮಂತ್ರೋಚ್ಚಾರಣೆಯಿಂದ ಬಂಜೆಗೆ ಮಕ್ಕಳಾದವು; ರೋಗಿ ಆರೋಗ್ಯವನ್ನು ಮತ್ತೆ ಪಡೆಯುತ್ತಾನೆ; ಬಡವ ಶ್ರೀಮಂತನಾಗುತ್ತಾನೆ; ವೇದವನ್ನು ಪ್ರಮಾಣ (ಆಣೆ) ಮಾಡಿ ಹೇಳಿದರೆ ಅದರ ಮೇಲೆ ಬೇರೆ ಮಾತಿಲ್ಲ: – ಇವೆಲ್ಲಾ ಅಜ್ಞಾನಿಗಳ ನಂಬಿಕೆ. ಅದು ಓದಲಾಗದ್ದು, ಅರ್ಥವಾಗದ್ದು, ಸರಸ್ವತಿಯ ವಿಶೇಷ ಅನುಗ್ರಹ ಇಲ್ಲದೇ ಇದ್ದಲ್ಲಿ ಅದರಲ್ಲಿ ಪ್ರವೇಶವೇ ಸಾಧ್ಯವಿಲ್ಲ ಎನ್ನುವುದೂ ಸಹ ಅವರ ನಂಬಿಕೆ.

ಆದರೆ ವಾಸ್ತವಿಕವಾಗಿ ವೇದ ಎಂದರೆ ಏನು? ಇವು ಬೇರೆ ಬೇರೆ ಕಾಲಗಳಲ್ಲಿ, ಬೇರೆ ಬೇರೆ ಪರಿಸ್ಥಿತಿಗಳಲ್ಲಿ, ಬೇರೆ ಬೇರೆ ಕಾರಣಗಳಿಗಾಗಿ ಬೇರೆ ಬೇರೆ ಮಹಾಕವಿಗಳಿಂದ ರಚಿತವಾದ ಅನೇಕ ಕವಿತೆ, ಹಾಡುಗಳ ಸಂಗ್ರಹ ಮಾತ್ರ. ಪಾಲ್‌ಗ್ರೇವ್‌ನ The Golden Treasury of English Songs and Lyrical poems ಸಂಕಲನಕ್ಕೂ, ವೇದಗಳಿಗೂ ಯಾವ ವ್ಯತ್ಯಾಸವೂ ಇಲ್ಲ. ಈ ಇಂಗ್ಲಿಷ್ ಸಂಕಲನದಲ್ಲಿಯೂ ಸಹ ಬೇರೆ ಬೇರೆ ಮಹಾಕವಿಗಳು ಬರೆದ ವಿವಿಧ ಹಾಡು ಮತ್ತು ಗೀತೆಗಳಿವೆ. ಅನೇಕ ಋಷಿಗಳಿಂದ ರಚಿತವಾದ ಸೂಕ್ತಗಳು ವೇದಗಳಲ್ಲಿ ಸಂಕಲ್ಪಿಸಲ್ಪಟ್ಟಿವೆ."

ಮುಂದುವರಿದು ಹರಪ್ರಸಾದ ಶಾಸ್ತ್ರಿ ಹೇಳುತ್ತಾರೆ:

"ಇತಿಹಾಸಕಾರರು ಮತ್ತು ಪುರಾತತ್ವವಿದರು ವೇದಗಳ ಐತಿಹಾಸಿಕ ಮಹತ್ವವನ್ನು ಮಾತ್ರ ಗಮನಿಸುತ್ತಾರೆ. ಆದರೆ ವೇದಗಳಿಗೆ ಸಮಾನವಾದ ಕಾವ್ಯ ಜಗತ್ತಿನಲ್ಲಿ ಮತ್ತೊಂದಿಲ್ಲ ಎನ್ನುವುದನ್ನು ಕವಿ ಗಮನಿಸುತ್ತಾನೆ. ವೇದವು ಹೋಮರನ ಒಂದು ಮಹಾಕಾವ್ಯದಂತೆ ಇಲ್ಲ, ನಿಜ. ಆದರೆ, ವೇದಗಳ ಒಂದೊಂದು ಸೂಕ್ತವೂ ಒಂದೊಂದು ಮಹಾಕಾವ್ಯ. ಆಗಿನ್ನೂ ಮಾನವ ಸಂಸ್ಕೃತಿ ಶೈಶವ ಕಾಲ. ಈಗ ಹೊರಜಗತ್ತಿನ ಮೇಲೆ ಮನುಷ್ಯನ ಹಿಡಿತ ಹೆಚ್ಚಾಗಿರುವಷ್ಟು ಆಗ ಇರಲಿಲ್ಲ. ಆಗೆಲ್ಲ ಅಗ್ನಿ, ವಾಯು, ಮೇಘ, ಮಿಂಚು–ಸಿಡಿಲು ಇವೆಲ್ಲವೂ ದೇವತೆಗಳು. ಆಗೆಲ್ಲ ಅಗ್ನಿಯ ಅಧಿಷ್ಠಾತೃ ದೇವತೆ ಎಂದರೆ ಅಗ್ನಿಯೇ. ಅಧಿಷ್ಠಾತು ದೇವತೆಯ ಕಲ್ಪನೆ ಬೆಳೆಯಲು ಬಹಳಷ್ಟು ಚಿಂತನೆಯ ಅವಶ್ಯಕತೆ ಇದೆ. ಸಂಸ್ಕೃತಿಯ ಶೈಶವಾವಸ್ಥೆಯಲ್ಲಿ ಆ ಯೋಚನೆ ಮಾಡುವ ಶಕ್ತಿಯೂ ಅವರಿಗೆ ಇರಲಿಲ್ಲ. ಜಗತ್ತಿನ ಎಲ್ಲ ವಸ್ತುಗಳನ್ನೂ ಅವರು ಮಕ್ಕಳ ದೃಷ್ಟಿಯಲ್ಲಿ ನೋಡುತ್ತಿದ್ದರು. ಎಲ್ಲವನ್ನೂ ಉಜ್ವಲ ವರ್ಣ ವೈಚಿತ್ರ್ಯಗಳಲ್ಲಿ ನೋಡುತ್ತಿದ್ದರು. ಕವಿಯ ಕಣ್ಣುಗಳಲ್ಲಿ ನೋಡುತ್ತಿದ್ದರು. ಆದುದರಿಂದಲೇ ಹೋಮರನಂತೆ ಮಹಾಕಾವ್ಯ ರಚಿಸಲುಬೇಕಾದ ಜ್ಞಾನ, ಶಕ್ತಿ, ಅಂತರ್‌ಜಗತ್ತಿನ ಮೇಲೆ ಬೇಕಾದ ಹಿಡಿತಗಳು ಅವರಿಗೆ ಇರಲಿಲ್ಲ. ಹೀಗಾಗಿ ಅವರು ತಮ್ಮ ಹೃದಯದ ಗಂಭೀರ ಭಾವನೆ, ಭಯ, ಭಕ್ತಿ, ಸ್ನೇಹ, ಆತಂಕ, ಆಸೆ, ಭರವಸೆ ಇತ್ಯಾದಿಗಳನ್ನು ಮಾತ್ರ ಅಭಿವ್ಯಕ್ತಿಸುವಲ್ಲಿಗೆ ಅವರ ಶಕ್ತಿ ಮುಗಿಯುತ್ತಿತ್ತು. ಆದರೆ ಅವರು ಆ ಭಾವಗಳನ್ನು ಯಾವ ರೀತಿಯಲ್ಲಿ ಅಭಿವ್ಯಕ್ತಿಸಿದ್ದರು? ಆ ಭಾವನೆಗಳ ಅಭಿವ್ಯಕ್ತಿಯಲ್ಲಿ ಚಾತುರ್ಯವಿಲ್ಲ, ಶಕ್ತಿಯಿಲ್ಲ, ಚಿಂತನಶೀಲತೆ ಇಲ್ಲ. ಯಾವುದೇ ಭಾವ, ಭಯ, ಭಕ್ತಿ ಮನಸ್ಸಿನಲ್ಲಿ ಮೂಡುತ್ತಿರುವಂತೆಯೇ ಅದು ವಾಕ್ಯ ರೂಪದಲ್ಲಿ ಅಭಿವ್ಯಕ್ತಿಗೊಂಡಿದೆ. ಆ ವಾಕ್ಯ ಸರಳವಾದದು, ಪ್ರಾಂಜಲವಾದುದು. ಆದರೆ ಉದಾತ್ತವಾದದು. ಅಭಿವ್ಯಕ್ತಗೊಳ್ಳುತ್ತಿದ್ದ ಭಾವವೂ ಸಹ ಸರಳವಾದುದು, ಪ್ರಾಂಜಲವಾದದು ಮತ್ತು ಉದಾತ್ತವಾದುದು. ಅಲಂಕಾರ ದೋಷದ ಭಯವಿಲ್ಲ, ಸುರುಚಿ–ಕುರುಚಿಯ ಚಿಂತೆ ಇಲ್ಲ. ನಾಲ್ಕಾರು ಜನರಿಗೆ ಮೋಸ ಮಾಡಬೇಕೆನ್ನುವ ಆಲೋಚನೆ ಇಲ್ಲ. ಅವರ ಭಾವ ಮತ್ತು ಭಾಷೆಗಳು ಒಂದೇ ಆಗಿದ್ದವು. ವೇದ ಸೂಕ್ತ ಅಧ್ಯಯನ ಕಾಲದಲ್ಲಿ ಹೃದಯದ ವೈಶಾಲ್ಯತೆ ಉಂಟಾಗುತ್ತದೆ. ಪ್ರಕಾಂಡ ಸುಂದರ ಮತ್ತು ಹೊಸ ವಿಚಾರದ ಆಲೋಚನೆಯ ಕಲ್ಪನೆಯ ವಿಕಾಸ ಮತ್ತು ಉತ್ಕರ್ಷ ಉಂಟಾಗುತ್ತದೆ. ಆ ಕಾಲದಲ್ಲಿ ಅವರು ಏನನ್ನು ನೋಡಿದರೂ ಅದು ಅವರಿಗೆ ಭವ್ಯವಾದುದೂ, ಸುಂದರವಾದುದೂ, ಹೊಸತೂ ಆಗಿ ತೋರುತ್ತಿತ್ತು. ಈಗ ನಾವು ಹಿಮಾಲಯ ಪರ್ವತವನ್ನು ಕಂಡು ಭವ್ಯವಾದುದನ್ನು ಕಂಡಂತೆ ಹೇಗೆ ಹಿಗ್ಗುತ್ತೇವೋ ಹಾಗೆಯೇ ಅವರು ಸಾಮಾನ್ಯ ಪರ್ವತವನ್ನು ನೋಡಿ ಆನಂದಿತರಾಗುತ್ತಿದ್ದರು. ಕಾಲ ಕಾಲಕ್ಕೆ ಆದ ಸಾಮಾಜಿಕ ಬಂಧನಗಳ ಭಯದಿಂದ ನಾವು ನಮ್ಮ ಮನಸ್ಸಿನ ಅನೇಕ ಭಾವಗಳನ್ನು ಹೇಳಲಾಗುವುದಿಲ್ಲ. ಆದರೆ, ಅವರು ಅಂತಹ ಭಾವಗಳನ್ನು ನೂರುಪಟ್ಟು ಹೆಚ್ಚಿನ ಗಂಭೀರ ಹಾಗೂ ಸಹಜ ಭಾಷೆಯಲ್ಲಿ ಅಭಿವ್ಯಕ್ತಿಗೊಳಿಸುತ್ತಿದ್ದರು. ವಿಸ್ಮಯ ಎನ್ನುವುದೇ ಕವಿ ಹೃದಯದಲ್ಲಿ ಸರ್ವವ್ಯಾಪಿಯಾಗಿರುತ್ತದೆ. ಅವರೂ ಅಷ್ಟೆ ಅವರಲ್ಲಿ ವಿಸ್ಮಯ ತುಂಬಿಕೊಂಡಿತ್ತು. ಆದುದರಿಂದಲೇ ಅವರು ಕವಿಗಳಾಗಲು ಸಾಧ್ಯವಾಗಿತ್ತು. ಅವರಿಗೆ ಹೋಲಿಸಿದರೆ ಈಗಿನ ಕವಿಗಳು ಬಹಳಷ್ಟು ನೀರಸ."

ಶಾಸ್ತ್ರಿಗಳು ಹೆಸರಿಸಿರುವ ಪಾಲ್‌ಗ್ರೇವ್‌ನ "ಗೋಲ್ಡನ್ ಟ್ರೆಷರಿ"ಯಲ್ಲಿ ಇಂಗ್ಲಿಷ್ ಕವಿತೆಗಳನ್ನು ಕಾಲಾನುಕ್ರಮದಲ್ಲಿ ಜೋಡಿಸಲಾಗಿದೆ. ಕೆಲವು ಕವಿತೆಗಳನ್ನು ಬಿಟ್ಟರೆ ಉಳಿದವುಗಳನ್ನು ರಚಿಸಿದವರು ಯಾರೆಂದು ತಿಳಿದಿದೆ, ಅವರ ಬಗ್ಗೆ ಅಷ್ಟೋ ಇಷ್ಟೋ ಮಾಹಿತಿ ಲಭ್ಯವಿದೆ. ಋಗ್ವೇದವನ್ನು ಸಂಕಲನ ಮಾಡಿದವರು ತಮ್ಮದೇ ಅಚ್ಚುಕಟ್ಟಾದ ನಿರ್ದಿಷ್ಟ ಸ್ವರೂಪವನ್ನು ಸಂಕಲನಕ್ಕೆ ಕೊಟ್ಟಿದ್ದಾರೆ, ಆದರೆ ಕಾಲ ಮತ್ತು ಕರ್ತೃವಿನ ದೃಷ್ಟಿಯಿಂದ ನಿಖರವಾಗಿ ಏನನ್ನೂ ಹೇಳಲಾಗದು. "ಗೋಲ್ಡನ್ ಟ್ರೆಷರಿ"ಯಲ್ಲಿರುವ ಕವಿತೆಗಳನ್ನು ಮನಸ್ವೀ ಹಿಂದುಮುಂದು ಮಾಡಿ, ಕವಿಗಳ ಹೆಸರನ್ನು ನಮೂದಿಸದೆ, ಅಚ್ಚುಮಾಡಿದರೆ ಅದು ಋಗ್ವೇದಕ್ಕೆ ಹತ್ತಿರವಾಗಿಬಿಡುತ್ತದೆ. ಋಗ್ವೇದವನ್ನು ಎರಡು ವಿಧಗಳಲ್ಲಿ ಓರಣವಾಗಿರಿಸಲಾಗಿದೆ: ಒಂದು ಮಂಡಲಗಳ ರೂಪದಲ್ಲಿ, ಇನ್ನೊಂದು ಅಷ್ಟಕಗಳ ರೀತಿಯಲ್ಲಿ. ಇಲ್ಲಿ ಹತ್ತು ಮಂಡಲಗಳಿವೆ; ಬೇರೆ ರೀತಿಯಲ್ಲಿ ನೋಡಿದರೆ ಎಂಟು ಅಷ್ಟಕಗಳಿವೆ. ಅಷ್ಟಕಗಳ ಮಾದರಿಯ ವಿಭಜನೆಯು ಕೃತಕವಾದುದು, ಕವನಗಳ ಪಠಣ ಅಥವಾ ಕಲಿಕೆಯ ದೃಷ್ಟಿಯಿಂದ ಜೋಡಿಸಲ್ಪಟ್ಟುದು. ಕವನಗಳನ್ನು ಪ್ರತ್ಯೇಕವಾಗಿ ಗುರುತಿಸಬೇಕಾದರೆ ಮಂಡಲ ಪದ್ಧತಿಯ ವಿಭಜನೆ ಅನುಕೂಲಕರವಾಗಿದೆ. ಹಿಂದೆಯೇ ಪ್ರಸ್ತಾಪಿಸಿದಂತೆ, ಋಗ್ವೇದದಲ್ಲಿ ೧೦೨೮ ಸೂಕ್ತಗಳಿವೆ, ಅವನ್ನು ಹತ್ತು ಮಂಡಲಗಳಲ್ಲಿ ಓರಣವಾಗಿ ಜೋಡಿಸಲಾಗಿದೆ. ಕವಿಗಳು ರಚಿಸಿದ್ದ ಸೂಕ್ತಗಳು ಬಾಯಿಂದ ಬಾಯಿಗೆ ವರ್ಗಾಯಿಸಲ್ಪಡುತ್ತಿದ್ದು, ಒಂದು ಹಂತದಲ್ಲಿ ಅವನ್ನು ಜೋಡಿಸಲಾಗಿದೆ. ಲಿಪಿ ಇಲ್ಲದ ಕಾಲದಲ್ಲಿ ಇಂತಹ ಜೋಡಣೆ ಮಾಡಿದ್ದು ಕೌತುಕವೆನಿಸುತ್ತದೆ. ಮೊದಲನೆಯ ಮತ್ತು ಹತ್ತನೆಯ ಮಂಡಲಗಳಲ್ಲಿ ತಲಾ ೧೯೧ ಸೂಕ್ತಗಳಿವೆ. ಈ ಎರಡು ಮಂಡಲಗಳೂ ಋಗ್ವೇದದ ಕೊನೆಯ ಕಾಲಘಟ್ಟದವು. ಅದರಲ್ಲಿರುವ ಸೂಕ್ತಗಳನ್ನು ರಚಿಸಿದವರು ಹಲವರು ಮತ್ತು ಹಲವು ಪಂಗಡಗಳಿಗೆ ಸೇರಿದವರು. ಎರಡರಿಂದ ಏಳನೆಯ ಮಂಡಲದ ಕವಿಗಳು ಕ್ರಮವಾಗಿ ಗೃತ್ಸಮದ, ವಿಶ್ವಾಮಿತ್ರ, ವಾಮದೇವ, ಅತ್ರಿ, ಭರದ್ವಾಜ ಮತ್ತು ವಸಿಷ್ಠರ ಪಂಗಡಗಳಿಗೆ ಸೇರಿದವರೆಂದು ಹೇಳಲಾಗಿದೆ. ಎಂಟನೆಯ ಮಂಡಲದ ಕವಿಗಳು ಎಲ್ಲಾ ಪಂಗಡಗಳವರು, ಆದರೆ ಕಣ್ವ ಪಂಗಡದವರು ಹೆಚ್ಚು. ಶಶಕರ್ಣ, ಪರ್ವತ, ಸೋಭರಿ, ವಿಶ್ವಮನಾ, ನಾಭಾಕ, ಮುಂತಾದ ಹೆಸರುಗಳು ಇಲ್ಲಿ ದೊರೆಯುತ್ತವೆ. ಒಂಭತ್ತನೆಯ ಮಂಡಲದ ಸೂಕ್ತಗಳೆಲ್ಲಾ ಸೋಮನನ್ನು ಕುರಿತಾದವು, ಆದರೆ ಕರ್ತೃಗಳು ಬೇರೆ ಬೇರೆ ಪಂಗಡಗಳವರು. ಜೊತೆಗೆ ಮಂಡಲಗಳಲ್ಲಿ ಆಯಾ ದೇವತೆಗಳ ಸೂಕ್ತಗಳು ಕ್ರಮವಾಗಿ ಬರುತ್ತವೆ, ಅವುಗಳಲ್ಲೂ ಛಂದಸ್ಸಿನ ಪ್ರಕಾರ ಸೂಕ್ತಗಳನ್ನು ಜೋಡಿಸಲಾಗಿದೆ. ಒಟ್ಟಿನಲ್ಲಿ ಸೂಕ್ತಗಳ ಜೋಡಣೆಯಲ್ಲಿ

ನಿಖರವಾದ ಒಂದು ನಿಯಮವನ್ನು ಪಾಲಿಸಲಾಗಿದೆ.

ಋಗ್ವೇದದ ಕವಿಗಳು ಮತ್ತು ಅವರ ಪಂಗಡಗಳ ಜನ ಎಲ್ಲಿಯವರು ಎಂಬ ಪ್ರಶ್ನೆ ಬಹಳವಾಗಿ ಚರ್ಚೆಗೆ ಬಂದಿದೆ. ತಮ್ಮನ್ನು ತಾವು 'ಆರ್ಯ'ರೆಂದು ಕರೆದುಕೊಂಡ ಈ ಜನ ಭಾರತದ ವಾಯವ್ಯ ಪ್ರಾಂತ್ಯಗಳಿಗೆ ಸೇರಿದವರು. ಅಲ್ಲಿಯವರೋ ಅಥವಾ ಹೊರಗಿನಿಂದ ಬಂದು ಅಲ್ಲಿ ನೆಲೆಸಿದವರೋ ಎಂಬುದು ನಮ್ಮ ದೇಶದ ಸಾಂಸ್ಕೃತಿಕ ಇತಿಹಾಸದ ರಾಜಕೀಯಕ್ಕೆ ಸಿಲುಕಿಕೊಂಡಿದೆ. ಅವರು ಮಧ್ಯ ಏಷ್ಯಾದಿಂದ ಬಂದ ವಲಸಿಗರು ಎಂಬ ಅಭಿಪ್ರಾಯ ಪ್ರಚಲಿತವಿದೆ. ಅದನ್ನು ಒಪ್ಪಿದರೆ ಭಾರತದ "ಸ್ವಂತಿಕೆ"ಗೆ ಕುಂದುಂಟಾಗುತ್ತದೆಯೆಂದು ಕೆಲವರ ಅಂಜಿಕೆ; ಆದ್ದರಿಂದ ಅವರು ಇಲ್ಲಿಯ ಮೂಲ ನಿವಾಸಿಗಳು ಎಂದು ಸಾಧಿಸಲು ಹರಸಾಹಸ ಮಾಡುತ್ತಾರೆ. ಸಿಂಧೂ ನದಿಯ ನಾಗರಿಕತೆಯ ನಿರ್ಮಾತೃಗಳು ಮತ್ತು ವೈದಿಕ ಸಾಹಿತ್ಯ ರಚಿಸಿದ ಪಂಗಡಗಳು, ಎಲ್ಲಾ ಒಂದೇ ಎಂದು ಇವರು ವಾದಿಸುತ್ತಾರೆ. ಆರ್ಯರು ಹೊರಗಿನವರು ಎಂದು ಬಿಟ್ಟರೆ ಭಾರತದ ಇತಿಹಾಸದಲ್ಲಿ ನಂತರದ ಶತಮಾನಗಳಲ್ಲಿ ಹೊರಗಿನಿಂದ ಬಂದವರನ್ನು "ಸಂಸ್ಕೃತಿಯ ನಾಶಕರು" ಎಂದು ದೂಷಿಸಲಾಗುವುದಿಲ್ಲವಲ್ಲ, ಎಂಬುದು ಇದರ ರಾಜಕೀಯ. ಇಸ್ಲಾಂ ಧರ್ಮೀಯರು ಭಾರತದ ಘನತೆಯನ್ನು ಹಾಳು ಮಾಡಿದರೆಂಬ ಘೋಷಣೆಯನ್ನು ರಾಜಕೀಯ ಅಸ್ತ್ರವಾಗಿ ಬಳಸಬೇಕಾದರೆ ಆರ್ಯರು ಹೊರಗಿನವರಲ್ಲವೆಂದು ಸಾಧಿಸುವುದು ಅವಶ್ಯಕ. ಇಲ್ಲದಿದ್ದರೆ ಉನ್ನತಮಟ್ಟದ ಹರಪ್ಪ ಸಂಸ್ಕೃತಿಯನ್ನು ಹೊರಗಿನಿಂದ ಬಂದ "ಆರ್ಯ"ರು ಹಾಳು ಗೆಡವಿದರು, ಇಲ್ಲಿಯ ಮೂಲನಿವಾಸಿಗಳನ್ನು ಅನಾರ್ಯರೆಂದು ಜರಿದರು, ಎಂಬ ಆಪಾದನೆಗೆ ಉತ್ತರವಿಲ್ಲದೆ ಹೋಗುತ್ತದೆ. ಸಿಂಧು ನಾಗರಿಕತೆಯ ನಿರ್ಮಾತೃಗಳು ವೇದಕಾಲೀನ ಜನಸಮುದಾಯವೇ ಆಗಿದ್ದರೆ ಒಮ್ಮೆ ಪತನಗೊಂಡ ನಾಗರಿಕತೆಯನ್ನು ಅವರು ಪುನರ್ನಿರ್ಮಾಣ ಏಕೆ ಮಾಡಲಿಲ್ಲವೆಂಬ ಸಂಶಯ ಹಾಗೆಯೇ ಉಳಿದುಬಿಡುತ್ತದೆ. ಒಂದು ಸ್ವಾರಸ್ಯಕರ ಪ್ರಸಂಗವನ್ನು ನೆನಪಿಸಿಕೊಳ್ಳಬಹುದು: ಹರಪ್ಪ ಮತ್ತು ವೈದಿಕ ಸಂಸ್ಕೃತಿಗಳ ಜನ ಭಿನ್ನರು ಎಂಬ ವಾದಕ್ಕೆ ಒಂದು ಪುರಾತತ್ವಶಾಸ್ತ್ರದ ಪುರಾವೆಯನ್ನು ಸಾಮಾನ್ಯವಾಗಿ ಮುಂದಿಡುವುದುಂಟು. ಋಗ್ವೇದದಲ್ಲಿ ಕುದುರೆ ಅನೇಕ ಬಾರಿ ಪ್ರಸ್ತಾಪಿಸಲ್ಪಟ್ಟಿದೆ, ಆದರೆ ಹರಪ್ಪ ನಾಗರಿಕತೆಯ ಅವಶೇಷಗಳಲ್ಲಿ ದೊರೆತಿರುವ ಮೊಹರುಗಳಲ್ಲೆಲ್ಲೂ ಕುದುರೆ ಕಾಣಸಿಗದು. ಬೇರೆ ಹಲವಾರು ಪ್ರಾಣಿ-ಪಕ್ಷಿಗಳಿವೆ, ಆದರೆ ಕುದುರೆ ಇಲ್ಲ. ಏಕೆಂದರೆ, ಹರಪ್ಪ ಜನರಿಗೆ ಕುದುರೆ ತಿಳಿದಿರಲಿಲ್ಲ. ಮಧ್ಯ ಏಷ್ಯದಿಂದ ಬಂದ "ಆರ್ಯ"ರು ತಮ್ಮ ಜೊತೆ ಕುದುರೆಯನ್ನು ತಂದರು, ಆದ್ದರಿಂದ ಋಗ್ವೇದದಲ್ಲಿ ಕುದುರೆಯ ಪ್ರಸ್ತಾಪಗಳಿವೆ. ಇದನ್ನು ಹೇಗಾದರೂ ಎದುರಿಸಬೇಕೆಂದು ತೀರ್ಮಾನಿಸಿದ ಒಬ್ಬ "ಭಾರತೀಯ ವಿಜ್ಞಾನಿ" ಅಮೇರಿಕಾದಲ್ಲಿ ಕಂಪ್ಯೂಟರ್ ತಜ್ಞರಾಗಿದ್ದುದರಿಂದಲೋ ಏನೋ ಒಂದು ಪವಾಡ ಮಾಡಿಬಿಟ್ಟರು. ಹರಪ್ಪ ಮೊಹರುಗಳಲ್ಲಿ ಒಂದನ್ನು ಅವರು ಆಯ್ದುಕೊಂಡು ಅದರಲ್ಲಿ ಕುದುರೆಯ ಅರ್ಧಭಾಗ ಇದೆಯೆಂದು ತರ್ಕ ಹೂಡಿದರು. ಆ ಪ್ರಾಣಿಯ ಹಿಂಭಾಗವನ್ನು ಕಂಪ್ಯೂಟರಿನಿಂದ "ಬೆಳೆಸಿ" ಅದು ಕುದುರೆ ಎಂದರು ಈ ವಿದ್ವಾಂಸರು. ಅದಕ್ಕೆ ವಿಟ್ಜೆಲ್ ಎಂಬ ಒಬ್ಬ ವಿದ್ವಾಂಸ "ಇಲ್ಲದ ಕುದುರೆಯನ್ನು ಸೃಜಿಸಿದ ವಿದ್ವಾಂಸ" ಎಂದು ಅವರಿಗೆ ಪಟ್ಟ ಕಟ್ಟಿದರು.

ಸುಧಾಂಶು ರಾನಡೆ ಎಂಬೊಬ್ಬ ಪತ್ರಕರ್ತರು ಹಿಂದೆ "ದಿ ಹಿಂದು" ಪತ್ರಿಕೆಯಲ್ಲಿ ಕೆಲಸಕ್ಕಿದ್ದರು. ಅವರು ವೇದವನ್ನೋದಿಕೊಂಡಿದ್ದ ಒಳ್ಳೆಯ ವಿದ್ವಾಂಸ. ಅವರು ಪ್ರಸ್ತುತ ಲೇಖಕನಿಗೆ ಬರೆದಿದ್ದ ಒಂದು ಪತ್ರದಲ್ಲಿ ಒಂದಂಶವನ್ನು ಒತ್ತಿ ಹೇಳಿದ್ದರು: ಸಿಂಧು ನದಿಯ ದಂಡೆಯಿಂದ ಗಂಗಾ ಬಯಲಿಗೆ ಹೋಗುವಾಗ ಹಾದಿಯಲ್ಲೆಲ್ಲೂ ಮರಳುಗಾಡಿಲ್ಲ. ವೇದದಲ್ಲಿ ಅದು ಒಳ್ಳೆಯ ವನಪ್ರದೇಶ ಎಂದು ಚಿತ್ರಿತವಾಗಿದೆ. ಆದರೆ ಋಗ್ವೇದದಲ್ಲಿ ಮರಳುಗಾಡನ್ನು ಹಾಯ್ದುಬರುವ ಅನುಭವದ ದಾಖಲೆ ಇದೆ. ಮಧ್ಯ ಏಷ್ಯದಿಂದ ಭಾರತದ ವಾಯವ್ಯ ವಿಭಾಗಕ್ಕೆ ಬರುವಾಗ ಮರಳುಗಾಡು ದಾಟಬೇಕಾದ್ದು ಅನಿವಾರ್ಯ. ಅದರ ಅನುಭವ ದಾಖಲಿಸಿರುವ ಋಗ್ವೇದದ ಕವಿಗೆ ಅಂತಹ ಅನುಭವ ಇದ್ದಿತ್ತೇ ಅಥವಾ ಬೇರೆಯವರ ಅನುಭವದ ನೆನಪನ್ನು ಅವನು ದಾಖಲಿಸಿದ್ದಾನೆಯೇ, ಎಂಬ ಪ್ರಶ್ನೆ ಅಪ್ರಾಸಂಗಿಕವಲ್ಲ. ಅಂದರೆ, ಋಗ್ವೇದದ ಕವಿಗಳ ಸಮುದಾಯವು ಭಾರತದ ಮೂಲನಿವಾಸಿಗಳ ಭಾಗವೋ, ಹೊರಗಿನಿಂದ ಬಂದವರ ಭಾಗವೋ ಎಂಬ ಪ್ರಶ್ನೆಗೆ 'ಇದು ಹೀಗೆಯೇ ಸರಿ' ಎಂದು ಹೇಳಲು ಸಾಕಷ್ಟು ಪುರಾವೆಗಳಿಲ್ಲ. ಮಧ್ಯ ಏಷ್ಯದ ಬೋಘಾಸ್ ಕೋಯಿ ಎಂಬಲ್ಲಿ ಮಿಟಾನ್ನಿ ಜನಾಂಗದವರ ಕೆಲವು ದಾಖಲೆಗಳು ಸಿಕ್ಕಿವೆ. ಅವು ಕ್ರಿ. ಪೂ. ೧೪೦೦ರ ಸುಮಾರಿನವು. ಅವು ಯಾವುದೋ ಒಪ್ಪಂದದ ದಾಖಲೆಗಳು. ಅವುಗಳಲ್ಲಿ ಒಂದು ಒಪ್ಪಂದಕ್ಕೆ ಸಾಕ್ಷಿಗಳೆಂದು ನಾಸತ್ಯರನ್ನು, ಅಂದರೆ ಅಶ್ವಿನಿ ದೇವತೆಗಳನ್ನು, ಹೆಸರಿಸಲಾಗಿದೆ. ಹಾಗಿದ್ದರೆ "ಆರ್ಯ"ರ ಜೊತೆ ನಾಸತ್ಯರು ಭಾರತಕ್ಕೆ ಬಂದರೋ, ಅಥವಾ ಬೇರಾರದೋ ಜೊತೆ ಅವರು ಭಾರತದಿಂದ ಬೋಘಾಸ್ ಕೋಯಿ ಕಡೆಗೆ ಪ್ರಯಾಣ ಬೆಳೆಸಿದರೋ, ಎಂಬ ಪ್ರಶ್ನೆ ಏಳುತ್ತದೆ. ಅದನ್ನು ಮುಂದೆಯೂ ನಿರಂತರವಾಗಿ ಚರ್ಚಿಸುತ್ತಲೇ ಇರಬಹುದು! ಈ ಸಂಬಂಧದಲ್ಲಿ ಇನ್ನೊಂದು ಅಂಶವಿದೆ: ಋಗ್ವೇದದಲ್ಲಿ 'ಅರ್ಮಕ' ಮತ್ತು 'ಅರ್ಮ' ಎಂಬ ಶಬ್ದಗಳು ಅಲ್ಲಲ್ಲಿ ಬಂದಿವೆ. ಭೂತಾರ್ಮ, ಸಂಜೀವಾರ್ಮ, ಮಾದ್ರಾರ್ಮ, ಇತ್ಯಾದಿಗಳು ಊರುಗಳ ಹೆಸರುಗಳು. 'ಅರ್ಮ' ಎಂದರೆ "ವಿನಷ್ಟಗ್ರಾಮ", ಅಥವಾ ಪಾಳುಬಿದ್ದ ಊರು ಅಥವಾ ಪಾಳೆಯ, ಎಂದು ಅಷ್ಟಾಧ್ಯಾಯಿಯಲ್ಲಿ ವ್ಯಾಕರಣಾಚಾರ್ಯ ಪಾಣಿನಿ ತಿಳಿಸಿದ್ದಾನೆ. ಈ "ಅರ್ಮಕ"ಗಳಿಂದ ಇಟ್ಟಿಗೆಗಳನ್ನು ತಂದು ಯಜ್ಞಶಾಲೆಯಲ್ಲಿ ಚಿತಿಗಳನ್ನು ನಿರ್ಮಿಸಬೇಕೆಂದು ಹೇಳುವಾಗ ಶ್ರೌತಸೂತ್ರಗಳಲ್ಲಿ 'ಅರ್ಮ-ಕಪಾಲ' ಎಂಬ ಪ್ರಯೋಗವಿದೆ. ಹರಪ್ಪ ಸಂಸ್ಕೃತಿಯ ಕಾಲದ ಊರುಗಳು ಇವು. ಋಗ್ವೇದದ 'ಆರ್ಯ'ರು ಅವನ್ನು ನಿರ್ಮಿಸಲಿಲ್ಲ, ಅಲ್ಲಿಂದ ಇಟ್ಟಿಗೆಗಳನ್ನು ಹೊತ್ತುಕೊಂಡು ಹೋದರು, ಅಷ್ಟೆ. ಪಿಗಟ್ ಎಂಬ ವಿದ್ವಾಂಸನು ಒದಗಿಸಿರುವ ಮಾಹಿತಿ ನೋಡಿ: ೧೯ನೆಯ ಶತಮಾನದ ಮಧ್ಯಭಾಗದಲ್ಲಿ ವಿಲಿಯಂ ಬ್ರಂಟನ್ ಎಂಬುವವನು ಹರಪ್ಪ ಪ್ರದೇಶದಲ್ಲಿದ್ದ ಪ್ರಾಚೀನ ಅವಶೇಷಗಳ ಪೈಕಿ ಬೆಟ್ಟದಷ್ಟು ಬಿದ್ದಿದ್ದ ಸುಟ್ಟ ಇಟ್ಟಿಗೆಗಳನ್ನು ದೋಚಿದ. ಅವನ ನಿರ್ದೇಶನದಲ್ಲಿ ಆಗ್ಗೆ ಲಾಹೋರಿನಿಂದ ಮುಲ್ತಾನ್‌ಗೆ ರೈಲ್ವೆ ಮಾರ್ಗದ ನಿರ್ಮಾಣವಾಗುತ್ತಿತ್ತು. ಹಳಿಗಳನ್ನು ಕೂಡಿಸಲು ನಿಲುಭಾರ (ಬಲ್ಲಾಸ್ಟ್ ಮೆಟೀರಿಯಲ್) ಅಗತ್ಯ. ಈಗ ಅದಕ್ಕೆ ಜಲ್ಲಿಕಲ್ಲು ಬಳಸಲಾಗುತ್ತದೆ. ಬ್ರಂಟನ್ ಅದಕ್ಕೆ ಹರಪ್ಪ ಕಾಲದ ಇಟ್ಟಿಗೆಗಳನ್ನು ಬಳಸಿದ. ಅದರಿಂದಾಗಿ ಇಂದಿಗೂ ಆ ಮಾರ್ಗದಲ್ಲಿ ೨೧ನೆಯ ಶತಮಾನದ ಜನ ಸುಮಾರು ಐದು ಸಾವಿರ ವರ್ಷಗಳ ಹಿಂದೆ ಮಾಡಲಾಗಿದ್ದ ಸುಟ್ಟ ಇಟ್ಟಿಗೆಗಳ ಸಹಾಯದಿಂದ ಗಟ್ಟಿಯಾಗಿ ನಿಂತಿರುವ ರೈಲ್ವೆ ಹಳಿಗಳ ಮೇಲೆ ಸಂಚಾರ ಮಾಡುತ್ತಿದ್ದಾರೆ.

ವೈದಿಕ 'ಆರ್ಯ'ರು ಹರಪ್ಪ ಸಂಸ್ಕೃತಿಯ ಇಟ್ಟಿಗೆಗಳಿಂದ 'ಚಿತಿ'ಗಳನ್ನು ನಿರ್ಮಿಸಿಕೊಂಡರು, ವಸಾಹತುಶಾಹಿಯ ಪ್ರತಿನಿಧಿ ಬ್ರಂಟನ್ ಅವನ್ನು ರೈಲ್ವೆ ಹಳಿಗಳ ನಡುವೆ ತುಂಬಿಸಿದ. ಅಂದರೆ, ಹರಪ್ಪ-ಮೊಹೆಂಜೊದಾರೊ ನಾಗರಿಕತೆಯ ನಿರ್ಮಾತೃಗಳು ಋಗ್ವೇದದ ಕವಿಗಳ ಜನಸಮುದಾಯದವರಲ್ಲ. ಚರಿತ್ರೆಯಲ್ಲಿ ದಾಖಲಾಗಿರುವಂತೆ ಅವರು ಪ್ರಾಚೀನ ಭಾರತದ ಮೊದಲ ನಿವಾಸಿಗಳು.

*(ಮುಂದಿನ ಸಂಚಿಕೆಯಲ್ಲಿ ಮುಂದುವರಿಯುತ್ತದೆ)*




**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಅಭಿವೃದ್ಧಿ ನೀತಿಗಳು – ಪ್ರಭುತ್ವದ ಪಾತ್ರ – ನಕ್ಸಲೀಯರ ಹಿಂಸೆ – ಪುನರವಲೋಕನಕ್ಕೆ ಸಕಾಲ



ನಕ್ಸಲೀಯರೂ ತಮ್ಮ ಗುರಿಯನ್ನು ತಲುಪಲು ಅನುಸರಿಸುತ್ತ ಬಂದಿರುವ ಕಾರ್ಯತಂತ್ರವನ್ನು ಪುನರವಲೋಕನದ ಪ್ರಕ್ರಿಯೆಗೆ ಒಳಪಡಿಸಬೇಕು. ರಷ್ಯಾ, ಕ್ಯೂಬಾಗಳಲ್ಲಿ ಸಮಾಜವಾದಿ ಕ್ರಾಂತಿಯಾಗುವ ಮುನ್ನ, ಎಲ್ಲ ಜನವರ್ಗಗಳನ್ನು ಸಂಘಟಿಸಿ, ಕ್ರಾಂತಿಗಾಗಿ ಅವರನ್ನು ತಯಾರು ಮಾಡುವುದರಲ್ಲಿ ಅಲ್ಲಿನ ಕ್ರಾಂತಿಕಾರಿಗಳು ಸಫಲರಾಗಿದ್ದರು. ಈ ಎರಡು ದೇಶಗಳಲ್ಲಿ ಮತ್ತು ಚೀನಾದಲ್ಲೂ ಸಹ ಪ್ರಜಾಪ್ರಭುತ್ವ ವ್ಯವಸ್ಥೆ ಇರಲಿಲ್ಲ. ನಮ್ಮ ರಾಷ್ಟ್ರದಲ್ಲಿ, ಒಂದು ಹಂತದಲ್ಲಿ, ಪ್ರಜಾಪ್ರಭುತ್ವ ವ್ಯವಸ್ಥೆ ತಳವೂರಿದೆ. ಅದರಲ್ಲಿ ನ್ಯೂನತೆಗಳಿವೆ, ನಿಜ. ಆದರೆ, ನಿಜವಾದ ಅರ್ಥದಲ್ಲಿ 'ಪ್ರಜಾಪ್ರಭುತ್ವವಾದಿ ಕ್ರಾಂತಿ'ಯಾಗಲು ವಿಪುಲ ಅವಕಾಶಗಳಿವೆ.

**ಮ. ಶ್ರೀ. ಮುರಳಿ ಕೃಷ್ಣ**

ಛತ್ತೀಸಗಡದಲ್ಲಿ, ಮೇ ೨೫, ೨೦೧೩ರಂದು ಮತ್ತೊಮ್ಮೆ ಕೆಂಪಿನ ಓಕುಳಿ ಹರಿಯಿತು. ರಾಜಧಾನಿ ರಾಯ್‌ಪುರದಿಂದ ಸುಮಾರು ೪೦೦ ಕಿ. ಮೀ. ದೂರದಲ್ಲಿರುವ, ಜಗದಾಲ್‌ಪುರ ಮತ್ತು ಸುಕ್ಮ ನಡುವಿನ ಬೆಟ್ಟ ಮತ್ತು ಅರಣ್ಯ ಪ್ರದೇಶದಲ್ಲಿರುವ ದರ್ಭಾ ಎಂಬಲ್ಲಿ, ಪರಿವರ್ತನಾ ರ‍್ಯಾಲಿಯಲ್ಲಿ ಭಾಗವಹಿಸಿ ಹಿಂದಿರುಗುತ್ತಿದ್ದ ಕಾಂಗ್ರೆಸ್ ನಾಯಕರಿದ್ದ ವಾಹನಗಳ ಮೇಲೆ ನಕ್ಸಲೀಯರು ಭಾರಿ ದಾಳಿ ನಡೆಸಿ, ೨೭ ಮಂದಿಯನ್ನು ಭೀಕರವಾಗಿ ಹತ್ಯೆ ಮಾಡಿದರು. ಈ ಘಟನೆಯಲ್ಲಿ, ಸಲ್ವಾ ಜುಡುಂ ಸಂಘಟನೆಯ ಸಂಸ್ಥಾಪಕ ಹಾಗೂ ಆದಿವಾಸಿಗಳ / ಕಾಂಗ್ರೆಸ್ ಪಕ್ಷದ ಪ್ರಭಾವಶಾಲಿ ನಾಯಕ ಮಹೇಂದ್ರ ಕರ್ಮನನ್ನು ಬರ್ಬರವಾಗಿ ಕೊಲ್ಲಲಾಯಿತು. ಮಾರನೆಯ ದಿನ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ನಂದಕುಮಾರ್ ಪಟೇಲ್ ಮತ್ತು ಆತನ ಪುತ್ರನ ಶವಗಳು ಸಮೀಪದ ಅರಣ್ಯದಲ್ಲಿ ಪತ್ತೆಯಾದವು. ೨೦೧೦ರಲ್ಲಿ ದಾಂತೇವಾಡದಲ್ಲಿ ಸಿಆರ್‌ಪಿಎಫ್ ತುಕಡಿಯ ಮೇಲೆ ನಕ್ಸಲೀಯರು ಮಾಡಿದ ದಾಳಿಯಲ್ಲಿ ೭೬ ಯೋಧರು ಮರಣ ಹೊಂದಿದ್ದರು. ಹೀಗೆ, ಛತ್ತೀಸಗಡದಲ್ಲಿ ರಕ್ತದೋಕುಳಿಯ ಸಂಪುಟಕ್ಕೆ ಹೊಸ ಪುಟಗಳು ಸೇರುತ್ತಲೇ ಇವೆ !! ಹಿಂಸೆ, ಪ್ರತಿಹಿಂಸೆ ಮತ್ತೆ ಹಿಂಸೆಯ ವಿಷವರ್ತುಲ ಸುತ್ತುತ್ತಲೇ ಇದೆ. ಪ್ರಭುತ್ವದ ಹಿಂಸೆಗೆ ನಮ್ಮದು ರಕ್ಷಣಾತ್ಮಕ ಪ್ರತಿರೋಧದ ಹಿಂಸೆ ಎಂಬುದು ನಕ್ಸಲೀಯರ ಸಮರ್ಥನೆ. ಆದರೆ ಪ್ರಭುತ್ವ ಮತ್ತು ನಕ್ಸಲೀಯರ ನಡುವಣ ಸಂಘರ್ಷದಲ್ಲಿ ಅಧಿಕ ಸಂಖ್ಯೆಯ ಸಾಮಾನ್ಯ ಜನರು ಹತರಾಗಿದ್ದಾರೆ. ಈ ಪರಿಯ ಹಿಂಸಾಕಾಂಡಗಳು ಖಂಡನೀಯವೇ ಸರಿ.

ಭಾರತ ಕಮ್ಯುನಿಸ್ಟ್ ಪಕ್ಷ ೧೯೬೪ರಲ್ಲಿ ಬಿರುಕನ್ನು ಕಂಡಿತು. ಅದು ಸುಧಾರಣಾವಾದಿ ಪಥ (ರಿವಿಷನಿಸಮ್) ಹಿಡಿದಿದೆ ಎಂದು ಆರೋಪಿಸಿ, ಒಂದು ಬಣ ಹೊರನಡೆದು, ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷವನ್ನು (ಸಿಪಿಎಂ) ಸ್ಥಾಪಿಸಿತು. ೧೯೬೭ರಲ್ಲಿ ಮಾವೋವಾದದಿಂದ ಪ್ರಭಾವಿತಗೊಂಡ ಒಂದು ಬಣ, ಮೇಲಿನ ಆಪಾದನೆಯನ್ನೇ ಸಿಪಿಎಂ ಮೇಲೆ ಮಾಡಿ, ನಕ್ಸಲೀಯ ಸಂಘಟನೆಗೆ ನಾಂದಿ ಹಾಡಿತು. ಚಾರು ಮಜುಮ್‌ದಾರ್, ಕನು ಸನ್ಯಾಲ್ ಮತ್ತು ಕೆಲವು ಬೆಂಬಲಿಗರು ಪಶ್ಚಿಮ ಬಂಗಾಳದ ಡಾರ್ಜಿಲಿಂಗ್ ಜಿಲ್ಲೆಯ ನಕ್ಸಲ್‌ಬಾರಿ ಎಂಬ ಸಣ್ಣ ಸ್ಥಳದಲ್ಲಿ ಈ ಸಂಘಟನೆಯನ್ನು ಹುಟ್ಟುಹಾಕಿದರು. ಒಂದು ಜಿಲ್ಲೆಯ ಒಂದು ಪೊಲೀಸ್ ಠಾಣೆಯ ವ್ಯಾಪ್ತಿಯಿಂದ ನಮ್ಮ ರಾಷ್ಟ್ರದ ಸುಮಾರು ೨೦೦೦ಕ್ಕೂ ಹೆಚ್ಚಿನ ಪೊಲೀಸ್ ಠಾಣೆಗಳು, ೨೨೩ ಜಿಲ್ಲೆಗಳು ಮತ್ತು ೨೦ ರಾಜ್ಯಗಳಲ್ಲಿ ಈ ಸಂಘಟನೆ ಪಸರಿಸಿದೆ ಎಂದು ಅಂದಾಜಿಸಲಾಗಿದೆ. ಕೇಂದ್ರ ಸರ್ಕಾರದ ಒಂದು ಮೂಲದ ಅನ್ವಯ ಇದರ ಪ್ರಾಬಲ್ಯ ರಾಷ್ಟ್ರಾದ್ಯಂತ ೧೭೦ ಜಿಲ್ಲೆಗಳಲ್ಲಿದೆ. ಇನ್ನೊಂದು ವರದಿಯ ಪ್ರಕಾರ, ೧೩ ರಾಜ್ಯಗಳ ೧೫೬ ಜಿಲ್ಲೆಗಳಲ್ಲಿ ನಕ್ಸಲೀಯರು ನಿಯಂತ್ರಣವನ್ನು ಹೊಂದಿದ್ದಾರೆ. ಈ ಅಂಕಿ–ಸಂಖ್ಯೆಗಳಲ್ಲಿ ವ್ಯತ್ಯಾಸಗಳಿದ್ದರೂ, ಅವು, ಈ ಸಂಘಟನೆಯ ಬೆಳವಣಿಗೆಯನ್ನು ಸೂಚಿಸುತ್ತವೆ.

ನಕ್ಸಲೀಯ ಸಂಘಟನೆಯ ಉಗಮ, ಪಡೆದುಕೊಂಡಿರುವ ವ್ಯಾಪ್ತಿ ಇತ್ಯಾದಿಗಳನ್ನು ಸೂಕ್ಷ್ಮವಾಗಿ ನಿಕಷಕ್ಕೊಳಪಡಿಸಿದಾಗ, ಅದು ಗ್ರಾಮೀಣ ಪ್ರದೇಶಗಳಲ್ಲಿ, ಅದರಲ್ಲೂ ಮುಖ್ಯವಾಗಿ ಆದಿವಾಸಿಗಳು / ಬುಡಕಟ್ಟುಗಳು ಹೆಚ್ಚಾಗಿರುವ ಪ್ರಾಂತ್ಯಗಳಲ್ಲಿ ಬೇರೂರಿರುವುದು ಬೆಳಕಿಗೆ ಬರುತ್ತದೆ. ಸ್ವಾತಂತ್ರ್ಯ ಗಳಿಸಿದ ತರುವಾಯ ಅನೇಕ ಬೃಹತ್ ಗಾತ್ರದ ಅಭಿವೃದ್ಧಿ ಯೋಜನೆಗಳು ಅನುಷ್ಠಾನಗೊಂಡವು. ಪ್ರಗತಿಪಥದ ದಾಪುಗಾಲು ನಡಿಗೆ, ಅಸಂಖ್ಯಾತ ಮಂದಿಯ ಕಂಗಳಲ್ಲಿ ಭರವಸೆಯ ಹೊಳಪನ್ನು ಮೂಡಿಸಿದವು. ಜೊತೆಜೊತೆಯಲ್ಲೇ, ಅಸಂಖ್ಯಾತ ಜನರು ಕಂಬನಿಗರೆದರು. ಅವರ ಬಾಳೂ ಮೂರಾಬಟ್ಟೆಯಾಯಿತು. ನೆಲೆಗಳನ್ನು ಕಳೆದುಕೊಂಡು ತಾಯ್ನಾಡಿನಲ್ಲೇ ನಿರಾಶ್ರಿತರಾದರು. ಅಂತಹವರಲ್ಲಿ ಹೆಚ್ಚಿನವರು ಆದಿವಾಸಿಗಳು, ದೀನರು,

ದಲಿತರು ಹಾಗೂ ಸಮಾಜದ ಅಂಚಿನಲ್ಲಿರುವವರೇ ಆಗಿದ್ದರು! ಶತಶತಮಾನಗಳಿಂದ ಉಡುಗಿ ಹೋಗಿದ್ದ ಅವರ ದನಿ ತಾರಕ ಸ್ಥಾಯಿಗೆ ಏರಿ, ಶಕ್ತಿ ಪ್ರತಿಭಟನೆ ವ್ಯಕ್ತವಾಗಲು ಸಾಧ್ಯವಾಗಲೇ ಇಲ್ಲ.

ಈ ವಿಷಯಕ್ಕೆ ಸಂಬಂಧಿಸಿದಂತೆ ಯೋಜನಾ ಆಯೋಗದ ಸದಸ್ಯ ಬಿ. ಮುಂಗೇಕರ್ ಒಂದು ವರದಿ ಸಲ್ಲಿಸಿದ್ದನ್ನು ಸ್ಮರಿಸಬಹುದು. ಅದು ಒಂದು ಆಘಾತಕಾರಿ ವಾಸ್ತವವನ್ನು ಬಹಿರಂಗಗೊಳಿಸಿತು. ಅದರಂತೆ, ೧೯೫೧–೧೯೯೦ರ ಅವಧಿಯಲ್ಲಿ ಸುಮಾರು ೪೦ ಮಿಲಿಯ ಮಂದಿ ನಿರಾಶ್ರಿತ 'ರಾದರು. ಅದರಲ್ಲಿ ಸುಮಾರು ಶೇ. ೪೦ರಷ್ಟು ಮಂದಿ ಆದಿವಾಸಿಗಳಾಗಿದ್ದರು. ಇದುವರೆಗೆ ಸುಮಾರು ಶೇ. ೨೫ರಷ್ಟು ಜನರಿಗೆ ಮಾತ್ರ ಪುನರ್ವಸತಿ ಸೌಲಭ್ಯ ದೊರಕಿದೆಯೆಂದು ಈ ವರದಿಯಲ್ಲಿ ತಿಳಿಸಲಾಗಿದೆ. ಅಂದರೆ, ಅಭಿವೃದ್ಧಿಯ ಕಕ್ಷೆಯಿಂದ ಹೊರಗುಳಿದವರಲ್ಲಿ ಹೆಚ್ಚಿನವರು ಆದಿವಾಸಿಗಳು. ಪ್ರಸ್ತುತ ಈ ಜನವಿಭಾಗ ವಿಪುಲ ವಾಗಿರುವ ಪ್ರದೇಶಗಳಲ್ಲಿ ನಕ್ಸಲ್‌ವಾದ ಪ್ರಬಲವಾಗಿದೆ.

ಈ ರೀತಿಯ ಆತಂಕಕಾರಿ ಬೆಳವಣಿಗೆಯ ಬಗೆಗೆ ಕೇಂದ್ರ ಸರ್ಕಾರದ ಕೆಲವು ಉನ್ನತ ಅಧಿಕಾರಿಗಳು ಮುಂಗಾಣ್ಕೆಯನ್ನು ಹೊಂದಿದ್ದರು. ೧೯೬೭ರಲ್ಲಿ ನಕ್ಸಲ್‌ಬಾರಿಯಲ್ಲಿ ಭುಗಿಲೆದ್ದ ಹಿಂಸೆಯ ಹಿನ್ನೆಲೆಯಲ್ಲಿ, ಕೇಂದ್ರ ಸರ್ಕಾರದ ಗೃಹ ಸಚಿವಾಲಯದ ಅಂದಿನ ರಾಜಕೀಯ ಮತ್ತು ಭದ್ರತಾ ನೀತಿ ಯೋಜನೆಯ ನಿರ್ದೇಶಕ ರಾಗಿದ್ದ ಬಿ. ಎಸ್. ರಾಘವನ್, 'ದಿ ಕಾಸಸ್ ಆ್ಯಂಡ್ ನೇಚರ್ ಆಫ್ ಅಗ್ರೇರಿಯನ್ ಟೆನ್ಷನ್ಸ್' ಎಂಬ ನಿಬಂಧವನ್ನು ಸಲ್ಲಿಸಿದರು. ಅದರಲ್ಲಿ, ಕೃಷಿ ಕ್ಷೇತ್ರದಲ್ಲಿ ಸುಧಾರಣೆಗಳಾಗದಿದ್ದರೆ, ಹಸಿರು ಕ್ರಾಂತಿ, ಕೆಂಪು ಕ್ರಾಂತಿಯಾಗಿ ಪರಿವರ್ತನೆ ಯಾಗುತ್ತದೆಯೆಂದು ಎಚ್ಚರಿಸಿದ್ದರು. ಆದರೆ ಈ ತರಹದ ಎಚ್ಚರಿಕೆಗಳನ್ನು ಸರ್ಕಾರಗಳು ಗಹನವಾಗಿ ಪರಿಗಣಿಸಲಿಲ್ಲ. ಈ ವಿಷಯಕ್ಕೆ ಸಂಬಂಧಿಸಿದ ವರದಿಗಳು / ಸರ್ವೇಕ್ಷಣಗಳು ಆಡಳಿತರಂಗದ ಕಪಾಟುಗಳಲ್ಲಿ ಭದ್ರವಾದವು!

ಒಂದರ್ಥದಲ್ಲಿ ಆಡಳಿತಾರೂಢ ಸರ್ಕಾರಗಳು ನಕ್ಸಲೀಯ ಸಮಸ್ಯೆಯನ್ನು ಕಾನೂನು ಮತ್ತು ಸುವ್ಯವಸ್ಥೆಯ ನಿಟ್ಟಿನಿಂದ ಮಾತ್ರ ಪರಿಗಣಿಸುತ್ತ ಬಂದಿದೆ ಎಂದರೆ ತಪ್ಪಾಗುವುದಿಲ್ಲ. ಆದರೆ ಇದೊಂದು ಸಮಾಜೋ–ಆರ್ಥಿಕ ಜ್ವಲಂತ ಸಮಸ್ಯೆ. ಇದರ ಹಿಂದೆ ಇರುವುದು ಅಸಮಾನತೆ, ಶೋಷಣೆ ಮತ್ತು ವಿತರಣಾ ನ್ಯಾಯದ (ಡಿಸ್ಟ್ರಿಬ್ಯೂಟಿವ್ ಜಸ್ಟೀಸ್) ತೀವ್ರ ಕೊರತೆಯಂತಹ ಅಂಶಗಳು. ಇವುಗಳ ಬಗೆಗೆ ಸರ್ಕಾರಗಳು ಕ್ರಮಗಳನ್ನು ತೆಗೆದು ಕೊಂಡಿಲ್ಲ ಎಂದು ಹೇಳುವಂತಿಲ್ಲ. ಆದರೆ ಈ ಕ್ರಮಗಳು ಅರ್ಬುದಕ್ಕೆ ಮುಲಾಮನ್ನು ಹಚ್ಚಿದಂತೆ ಆಗಿದೆ! ಆಡಳಿತರಂಗದ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಿಡುವ ಇಲಾಖೆಗಳ ಕೆಲವು ಉನ್ನತ ಅಧಿಕಾರಿಗಳು ಈಶಾನ್ಯ ಭಾರತದಲ್ಲಿ ಉಗ್ರಗಾಮಿ ಚಟುವಟಿಕೆಗಳನ್ನು ಬಗ್ಗು ಬಡಿಯುವು ದರಲ್ಲಿ ಮೊದಲು ಬಲವನ್ನು ಪ್ರಯೋಗಿಸಲಾಯಿತು. ತತ್ಪರಿಣಾಮವಾಗಿ ಬಂಡುಕೋರರು ಸಂಧಾನಕ್ಕೆ ಬಂದರು. ತರುವಾಯ ಶಾಂತಿ ಒಪ್ಪಂದಗಳಿಗೆ ಸಹಿ ಹಾಕಲಾಯಿತು. ಖಾಲಿಸ್ಥಾನ ಪ್ರತ್ಯೇಕತಾವಾದಿ ಹೋರಾಟದಲ್ಲೂ ಕೆ. ಪಿ. ಎಸ್. ಗಿಲ್ ನೇತೃತ್ವದಲ್ಲಿ ಪೊಲೀಸರು ವಿಶೇಷ ಶಕ್ತಿ ಬಳಸಿದ್ದರಿಂದ ಅದನ್ನು ಹತ್ತಿಕ್ಕಲಾಯಿತು. ಆದುದರಿಂದ ನಕ್ಸಲೀಯರನ್ನೂ ಇದೇ ರೀತಿಯಲ್ಲಿ ಸದೆಬಡಿಯಬೇಕೆಂಬುದು ಅವರ ವಾದ. ಆದರೆ ನಕ್ಸಲೀಯರ ಹೋರಾಟಕ್ಕೂ, ಮೇಲೆ ಪ್ರಸ್ತಾಪಿಸಿರುವ ಹೋರಾಟಗಳಿಗೂ ವ್ಯತ್ಯಾಸಗಳಿವೆ. ನಕ್ಸಲೀಯರು (ಮಾವೋವಾದಿಗಳು) ಇಡೀ ವ್ಯವಸ್ಥೆ ಯನ್ನೇ ಸಶಸ್ತ್ರ ಹೋರಾಟದ ಮೂಲಕ ಬದಲಾಯಿಸಿ, ಒಂದು ಶೋಷಣಾಮುಕ್ತ ಸಮ ಸಮಾಜವನ್ನು ಸ್ಥಾಪಿಸುವ ಗುರಿಯನ್ನು ಹೊಂದಿ ದ್ದಾರೆ. ಈ ತರಹದ ಧ್ಯೇಯೋದ್ದೇಶ ಈಗಾಗಲೇ ಉಲ್ಲೇಖಿಸಿರುವ ಇತರ ಶೋಷಣೆಗಳಿಗೆ ಇರಲಿಲ್ಲ/ ಇರುವುದಿಲ್ಲ ಎಂಬುದು ಮನನಯೋಗ್ಯ ಅಂಶ.

ಇತ್ತೀಚಿನ ವರ್ಷಗಳಲ್ಲಿ ಛತ್ತೀಸಗಡ ಹೆಚ್ಚು ಸುದ್ದಿಯಲ್ಲಿದೆ. ಅಲ್ಲಿ ಜರುಗಿರುವ/ಜರುಗುತ್ತಿರುವ ಕೆಲವು ಪ್ರಕರಣಗಳತ್ತ ಗಮನಹರಿಸೋಣ... ನವೆಂಬರ್ ೧, ೨೦೦೦ರಂದು ಛತ್ತೀಸಗಡ ರಾಜ್ಯ ಅಸ್ತಿತ್ವಕ್ಕೆ ಬಂದಿತು. ಹದಿನಾರು ಜಿಲ್ಲೆಗಳಿರುವ ಈ ರಾಜ್ಯದಲ್ಲಿ ಹೇರಳವಾದ ನೈಸರ್ಗಿಕ ಸಂಪತ್ತಿದೆ. ಇಲ್ಲಿ ಕಾಪರ್ (ತಾಮ್ರ), ಕೋಲ್ (ಕಲ್ಲಿದ್ದಲು) ಮತ್ತು ಲಿಗ್ನೈಟ್, ಐರನ್ (ಕಬ್ಬಿಣದ ಅದುರು), ಮ್ಯಾಂಗನೀಸ್, ಕ್ರೋಮೈಟ್, ಬಾಕ್ಸೈಟ್ (ಅಲ್ಯೂಮಿನಂ ಅದುರು), ಲೈಮ್‌ಸ್ಟೋನ್ (ಸುಣ್ಣದ ಕಲ್ಲು); ಡೈಮಂಡ್(ವಜ್ರ) ಮುಂತಾದ ಖನಿಜಗಳ ನಿಕ್ಷೇಪವೇ ಇದೆ. ನಮ್ಮ ರಾಷ್ಟ್ರದಲ್ಲಿ ಉನ್ನತಮಟ್ಟದ ಕಬ್ಬಿಣದ ಅದುರಿನ ಸಂಪನ್ಮೂಲಗಳು ಕಡಿಮೆ ಪ್ರಮಾಣದಲ್ಲಿವೆ. ಆದರೆ ಇದರ ಭಂಡಾರವೇ ಛತ್ತೀಸಗಡದ ಬೈಲಾಡಿಲ್ಲಾ ಹಾಗೂ ಸುತ್ತಮುತ್ತಲಿನ ಪ್ರದೇಶಗಳಲ್ಲಿವೆ. ಕೇಂದ್ರ ಸರ್ಕಾರ ನವ–ಉದಾರವಾದದ (ನಿಯೋ ಲಿಬರಲಿಸಂ) ಭಾಗವಾಗಿ 'ನೂತನ ಗಣಿ ನೀತಿ'ಯನ್ನು ಜಾರಿಗೊಳಿಸಿದ ತರುವಾಯ ಇಲ್ಲಿನ ವನ್ಯ ಪ್ರಾಂತ್ಯಗಳಿಗೆ ಗಣಿ ಕಂಪನಿಗಳು ಲಗ್ಗೆ ಹಾಕಿದವು. ಗಣಿಗಾರಿಕೆಗೆ ಅನುಕೂಲ ಮಾಡಿಕೊಡಲು ದೊಡ್ಡ ಮಟ್ಟದ 'ಭೂಸ್ವಾಧೀನ ಪ್ರಕ್ರಿಯೆ'ಗಳು ಜರುಗಿದವು. ಈಗಲೂ ಜರುಗುತ್ತಿವೆ. ಪರ್ಯಾವರಣಕ್ಕೆ ಆಘಾತಕಾರಿ ಹೊಡೆತಗಳನ್ನು ನೀಡಲಾಗಿದೆ. ನದಿಗಳ ನೀರು ಕಲುಷಿತಗೊಂಡಿದೆ. ಪ್ರಾಣಿ–ಪಕ್ಷಿ–ಸಸ್ಯ ಸಂಕುಲ ಗಳಿಗೂ ಹಾನಿಯಾಗಿದೆ. ಈ ರಾಜ್ಯದಲ್ಲಿ ಆದಿವಾಸಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇಂತಹ 'ಅಭಿವೃದ್ಧಿ' ಯೋಜನೆಗಳ ಅನುಷ್ಠಾನದಿಂದ ಅವರನ್ನು ಒಕ್ಕಲೆಬ್ಬಿಸಲಾಗುತ್ತಿದೆ. ಪರಂಪರಾನು ಗತವಾಗಿ ಬಂದ ನೆಲೆಗಳನ್ನು ಕಳೆದುಕೊಂಡ ಆದಿವಾಸಿಗಳ ಪಾಡು ಅತಂತ್ರವಾಗಿದೆ. ಇಂತಹ ಯೋಜನೆಗಳ ವಿರುದ್ಧ ಆದಿವಾಸಿಗಳು ಶಾಂತಿ ಯುತವಾಗಿ ಪ್ರತಿಭಟನಾ ಚಳುವಳಿಗಳನ್ನು ನಡೆಸುತ್ತಲೇ ಬಂದಿದ್ದಾರೆ. ಆದರೆ ಅವರ ಕೂಗು ಅರಣ್ಯರೋದನವಾಗಿದೆ. (ಮಣಿಪುರದ ಐರೋಮ್ ಶರ್ಮಿಲಾ ಅಲ್ಲಿ ಜಾರಿಯಲ್ಲಿರುವ ಸಶಸ್ತ್ರ ಪಡೆಗಳ ವಿಶೇಷ ಅಧಿಕಾರ ಕಾಯಿದೆಯ ವಿರುದ್ಧ ಕಳೆದ ಸುಮಾರು ಹನ್ನೆರಡು ವರ್ಷಗಳಿಂದ ನಿರಶನ ಸತ್ಯಾಗ್ರಹ ಮಾಡುತ್ತಿದ್ದಾರೆ. ಆದರೆ ಸರ್ಕಾರದ ಪ್ರತಿಕ್ರಿಯೆ – ಗೋರ್ಕಲ್ಲ ಮೇಲೆ ಮಳೆ ಸುರಿದಂತೆ ಇರುವ ಪ್ರಕರಣ ನಮ್ಮೆದುರಿದೆ). ಕಾರ್ಪೋರೇಟ್ ಕಂಪನಿಗಳ ಲೂಟಿಗೆ ರಾಜ್ಯ ಸರ್ಕಾರ ಮಣೆ ಹಾಕಿದೆ. ಇವೆಲ್ಲದರ ವಿರುದ್ಧ ಸ್ಥಳೀಯರು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸುತ್ತಿದ್ದಾರೆ. ನಕ್ಸಲೀಯರು ಆದಿವಾಸಿಗಳ ಅಳಿವು–ಉಳಿವಿನ ಹೋರಾಟಕ್ಕೆ ಬೆಂಬಲ ನೀಡುತ್ತಿದ್ದಾರೆ. ಇದೇ ರೀತಿಯ ಪರಿಸ್ಥಿತಿ ಆದಿವಾಸಿಗಳು ಹೆಚ್ಚಾಗಿರುವ ಜಾರ್ಖಂಡ್, ಒಡಿಸ್ಸಾ ಮತ್ತಿತರ ರಾಜ್ಯಗಳ ಪ್ರದೇಶಗಳಲ್ಲೂ ಇದೆ.

ಆದಿವಾಸಿಗಳ ನೆರವಿಗೆ ನಕ್ಸಲೀಯರು ಇದ್ದಾರೆ ಎಂಬ ಕಾರಣವೊಡ್ಡಿ, ಆ ಸಮುದಾಯಗಳ ಯುವಕರ ಒಂದು ಪಡೆಯನ್ನು ಛತ್ತೀಸಗಡದಲ್ಲಿ ಕಟ್ಟಲಾಯಿತು. ಇದಕ್ಕೆ 'ಸಲ್ವಾ ಜುಡುಂ' ಎಂದು ಹೆಸರಿಡಲಾಯಿತು. ನಕ್ಸಲೀಯರನ್ನು ಮಟ್ಟ ಹಾಕುವುದು ಈ ಯೋಜನೆಯ ಉದ್ದೇಶವಾಗಿತ್ತು. ಇದರ ರೂವಾರಿಯಾಗಿದ್ದವನು ಕಾಂಗ್ರೆಸ್ ನಾಯಕ ಮಹೇಂದ್ರ ಕರ್ಮ. ಈ ಪಡೆಯ ಕಾರ್ಯಾಚರಣೆ ಗಳಿಗಾಗಿ ಅದಕ್ಕೆ ಶಸ್ತ್ರಾಸ್ತ್ರಗಳನ್ನು ಪೂರೈಸಲಾಗಿತ್ತು. ಅಂದರೆ ಪ್ರಭುತ್ವವೇ ಒಂದು ವಿಭಾಗದ ಜನರನ್ನು ಇನ್ನೊಂದು ವಿಭಾಗದ ಜನರ ಮೇಲೆ ಎತ್ತಿಕಟ್ಟಿ, ಆಕ್ರಮಣ ಮಾಡುವ ಯೋಜನೆಯನ್ನು ತಯಾರಿಸಿತು.

**ಅಭಿನಂದನೆಗಳು**



ನವಕರ್ನಾಟಕ ಪ್ರಕಟಿಸಿದ, ಜನಪ್ರಿಯ ಮನೋವೈದ್ಯ ಡಾ॥ ಸಿ. ಆರ್. ಚಂದ್ರಶೇಖರ್ ಬರೆದ 'ವೃದ್ಧರ ಮನಸ್ಸು ಹೀಗೇಕೆ?' ಎಂಬ ಕೃತಿಗೆ ಕರ್ನಾಟಕ ಸಂಘ, ಶಿವಮೊಗ್ಗ ಇವರು ನೀಡುವ ೨೦೧೨ನೇ ಸಾಲಿನ 'ಡಾ॥ ಎಚ್. ಡಿ. ಚಂದ್ರಪ್ಪಗೌಡ ವೈದ್ಯ ಸಾಹಿತ್ಯ ಪ್ರಶಸ್ತಿ' ಯನ್ನು ಲೇಖಕರಿಗೆ ನೀಡಿ ಗೌರವಿಸಲಾಗಿದೆ. ಪ್ರಶಸ್ತಿ ಪುರಸ್ಕೃತ ಡಾ॥ ಸಿ. ಆರ್. ಚಂದ್ರಶೇಖರ್ ಅವರಿಗೆ ಹೊಸತು ಹಾಗೂ ನವಕರ್ನಾಟಕ ಬಳಗದ ಅಭಿನಂದನೆಗಳು.



# ಸೂಚನೆ

‘ಎಲ್ಲವನ್ನೂ ಬ್ಯಾಗಲ್ಲಿ
ಹಾಕ್ಕೊಂಡ್ಯಾ ಮಗ್ಳೂ ?’

‘ಹೂಂಕಣವ್ವಾ...
ಊಟ
ನೀರು
ಪ್ಯಾಡು
ಡೆಟಾಲು
ಬ್ಯಾಂಡೇಜು
ತಲೆನೋವಿನ ಮಾತ್ರೆ
ಟಾರ್ಚು
ಚಿಕ್ಕ ಕತ್ತಿ
ಪರ್ಸು...
ಎಲ್ಲ ತೆಗ್ದಿಟ್ಟಿದ್ದೀನಿ ಕಣವ್ವ.’

‘ಮಗ್ಳೂ ...
ಮುಂದಿನ ತಿಂಗ್ಳು ಸಂಬ್ಳ ಆದ್ರೆ
ಅದನ್ನೂ ತಗೊ ಆಯ್ತಾ...

...ಒಂದು ಕೋವಿ
ಒಳ್ಳೆಯ ಒಂದು ಕೋವಿ !’

ಮಲಯಾಳಂ ಮೂಲ : **ಕುಂಬಳಂಗಾಡ್ ಉನ್ನಿಕೃಷ್ಣನ್** ಕನ್ನಡಕ್ಕೆ : **ಕಾಜೂರು ಸತೀಶ್**
ಶಿಕ್ಷಕ, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಕರಿಕೆ ಕಾಲೋನಿ, ಮಡಿಕೇರಿ ತಾಲೂಕು – ೫೭೧ ೨೪೭

---

ಇದಕ್ಕೆ ಅಧಿಕಾರಾರೂಢ ಬಿಜೆಪಿಯ ರಮಣ್ ಸಿಂಗ್ ಸರ್ಕಾರದ ಬೆಂಬಲವೂ ದೊರಕಿತು. ಇದರ ಪರಿಣಾಮದಿಂದ ಆದಿವಾಸಿಗಳ ನಿರಂತರ ಶೋಷಣೆ ನಡೆಯಿತು. ಅವರಲ್ಲಿ ಅನೇಕರನ್ನು ಅವರ ನೆಲೆಗಳಿಂದ ಉಚ್ಚಾಟಿಸಿ, ತಾತ್ಕಾಲಿಕ ಕ್ಯಾಂಪುಗಳಲ್ಲಿ ಇರಿಸಲಾಯಿತು. ಅಲ್ಲೋ... ಸೌಕರ್ಯಗಳ ತೀವ್ರ ಅಭಾವವಿತ್ತು. ಲೂಟಿ, ಶಕ್ತಿಪ್ರಯೋಗ, ಹೆಂಗಸರ ಮೇಲೆ ಅತ್ಯಾಚಾರ ಇತ್ಯಾದಿಗಳು ಈ ಪಡೆಯಿಂದ ಜರುಗಿದವು. ನಕ್ಸಲೀಯರ ಬೆಂಬಲಿಗರೆಂಬ ಶಂಕೆಯ ಆಧಾರದ ಮೇಲೆ ಅನೇಕ ಸಾಮಾಜಿಕ/ರಾಜಕೀಯ ಕಾರ್ಯಕರ್ತರನ್ನು, ಮಾನವ ಹಕ್ಕುಗಳ ಹೋರಾಟಗಾರರನ್ನು ಬಂಧಿಸಲಾಯಿತು. ‘ಸಲ್ವಾ ಜುಡುಂ’ನ ವಿರುದ್ಧ ದನಿ ಎತ್ತಿದವರು ಸರ್ಕಾರದ ಕೆಂಗಣ್ಣಿಗೆ ಗುರಿಯಾಗಬೇಕಾಯಿತು. ಛತ್ತೀಸಗಡದಲ್ಲೇ ಸುಮಾರು ಎರಡೂವರೆ ದಶಕಗಳಿಂದ ನೆಲೆಯೂರಿ, ಅಲ್ಲಿನ ಕುಗ್ರಾಮವೊಂದರಲ್ಲಿ ಆಸ್ಪತ್ರೆಯನ್ನು ಪ್ರಾರಂಭಿಸಿ, ಆದಿವಾಸಿಗಳಿಗೆ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುತ್ತಿದ್ದ ಶಿಶುವೈದ್ಯತಜ್ಞ ಹಾಗೂ ಅಂತರರಾಷ್ಟ್ರೀಯ ಮಟ್ಟದ ಮಾನವ ಹಕ್ಕು ಹೋರಾಟಗಾರ ಡಾ॥ ಬಿನಾಯಕ್ ಸೇನ್‌ರಂತಹವರೇ ರಾಯ್‌ಪುರದ ಜೈಲಿನಲ್ಲಿ ಎರಡು ವರ್ಷ ಕೊಳೆಯಬೇಕಾಯಿತು. ರಾಯ್‌ಪುರ ಜೈಲಿನಲ್ಲಿ ಅಧಿಕಾರಿಗಳ ಸಮಕ್ಷಮದಲ್ಲೇ ಸೇನರು, ಮಾನವೀಯ ನೆಲೆಯಿಂದ, ನಕ್ಸಲೀಯ ನಾಯಕರೊಬ್ಬರಿಗೆ, ಸರ್ಕಾರದ ಸಮ್ಮತಿ ಪಡೆದುಕೊಂಡೇ ಚಿಕಿತ್ಸೆ ನೀಡುತ್ತಿದ್ದರು. ಆಗ ಅವರು ನಕ್ಸಲೀಯರ ದೂತರಾಗಿದ್ದರೆಂದು ಆರೋಪಿಸಿ, ಖಟ್ಲೆಯನ್ನು ಹೂಡಲಾಯಿತು. ಅವರಿಗೆ ನಾಡಿನ ಸರ್ವೋಚ್ಚ ನ್ಯಾಯಾಲಯದಿಂದ ಜಾಮೀನು ಸಿಕ್ಕಿದ್ದರೂ ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ವಿಷಯ ಜೀವಂತವಾಗಿದೆ. ‘ಸಲ್ವಾ ಜುಡುಂ’ ಸಂಬಂಧಿಸಿದಂತೆ ಸರ್ವೋಚ್ಚ ನ್ಯಾಯಾಲಯ ಛತ್ತೀಸಗಡ ಸರ್ಕಾರವನ್ನು ತರಾಟೆಗೆ ತೆಗೆದುಕೊಂಡಿದೆ. ಇಂತಹ ಪಡೆಗಳನ್ನು ರಚಿಸಲು ಸಂವಿಧಾನದಲ್ಲಿ ಅವಕಾಶವಿಲ್ಲ ಎಂದು ಸರ್ವೋಚ್ಚ ನ್ಯಾಯಾಲಯ ಘೋಷಿಸಿದರೂ, ಅಲ್ಲಿನ ಸರ್ಕಾರ ‘ಸಲ್ವಾ ಜುಡುಂ’ನ್ನು ವಿಸರ್ಜಿಸಲು ಮುಂದಾಗಿಲ್ಲ! ದಂತೇವಾಡದಲ್ಲಿ ಸುಮಾರು ಎರಡು ದಶಕಗಳಿಂದ ನೆಲೆನಿಂತು, ಅಲ್ಲಿನ ಆದಿವಾಸಿಗಳ ಹಿತದಲ್ಲಿ ಚಟುವಟಿಕೆಗಳನ್ನು ನಡೆಸುತ್ತಿದ್ದ ಹಿಮಾಂಶು ಕುಮಾರ್ ಎಂಬ ಗಾಂಧೀವಾದಿ, ‘ಸಲ್ವಾ ಜುಡುಂ’ನ್ನು ಖಂಡಿಸುತ್ತಿದ್ದರು. ಇದನ್ನು ಸಹಿಸದ ಅಧಿಕಾರಾರೂಢರು ಅವರ ವಾಸಸ್ಥಾನದ ಮೇಲೆ ದಾಳಿ ನಡೆಸಿದರು. ಅಕ್ರಮವಾಗಿ ನಿವಾಸವನ್ನು ಕಟ್ಟಿಸಿದ್ದಾರೆ ಎಂದು ಆಪಾದಿಸಿ, ಅವರಿಗೆ ಕಿರುಕುಳವನ್ನು ನೀಡಲಾಯಿತು. ಈ ಬೆಳವಣಿಗೆಗಳಿಂದ ರೋಸಿಹೋದ ಅವರು ಈಗ ದೆಹಲಿಯಲ್ಲಿ ನೆಲೆಸಿದ್ದಾರೆ!! ಇದು ಛತ್ತೀಸಗಡದಲ್ಲಿರುವ ಗ್ರೌಂಡ್ ಝೀರೊ ಪರಿಸ್ಥಿತಿ.

ಪ್ರಧಾನಿ ಮನಮೋಹನ್ ಸಿಂಗ್ – “ಮಾವೋವಾದ ನಮ್ಮ ರಾಷ್ಟ್ರದ ಭದ್ರತೆ ಎದುರಿಸುತ್ತಿರುವ ಅತಿ ದೊಡ್ಡ ಕುತ್ತು” ಎಂದು ಹೇಳುತ್ತಿರುತ್ತಾರೆ. ಆದರೆ ಇದನ್ನು ಪ್ರಭುತ್ವದ ಬಲದಿಂದಲೇ ಹೊಸಕಿ ಹಾಕಬೇಕೆಂಬುದನ್ನು ಅವರೇ ಚೇರ್‌ಮೆನ್ ರಾಗಿರುವ ಯೋಜನಾ ಆಯೋಗದ ವಿವಿಧ ಅಧ್ಯಯನಗಳ ವರದಿಗಳು ಅಲ್ಲಗಳೆಯುತ್ತವೆ. ಉದಾಹರಣೆಗಾಗಿ, ಯೋಜನಾ ಆಯೋಗ ೨೦೦೮ರಲ್ಲಿ ರಚಿಸಿದ ತಜ್ಞರ ಗುಂಪಿನ ನಿರ್ಣಯವನ್ನು ಗಮನಿಸಬಹುದು. ಈ ಗುಂಪು, ಆಂಧ್ರಪ್ರದೇಶ, ಬಿಹಾರ, ಛತ್ತೀಸಗಡ, ಒಡಿಸ್ಸಾ ಮತ್ತು ಜಾರ್ಖಂಡ್ ರಾಜ್ಯಗಳಲ್ಲಿನ ಸಮಾಜೋ–ಆರ್ಥಿಕ ಪರಿಸ್ಥಿತಿಯನ್ನು ಆಳವಾಗಿ ಅಧ್ಯಯನ ಮಾಡಿತು. ‘ಹಿಂಸೆ ಮತ್ತು ಭಯೋತ್ಪಾದನೆಯನ್ನು ಅಭಿವೃದ್ಧಿ ಆಯಾಮದಿಂದ ಅರ್ಥಮಾಡಿಕೊಳ್ಳಬೇಕು ಹಾಗೂ ಇವುಗಳನ್ನು ಆಡಳಿತಾತ್ಮಕವಾಗಿ ಮತ್ತು ರಾಜಕೀಯವಾಗಿ ಎದುರಿಸಬೇಕೇ ವಿನಾ ಪೊಲೀಸರ ಪಶುಬಲದಿಂದಲ್ಲ’ ಎಂದು ತನ್ನ ತೀರ್ಮಾನವನ್ನು ನೀಡಿತು. ಅದು ನೀಡಿದ ವರದಿಯ ಒಂದು ಹೇಳಿಕೆ ಹೀಗಿದೆ : “ಮಾವೋವಾದದ ಪ್ರಕ್ರಿಯೆಯನ್ನು ಎದುರುಗೊಳ್ಳಲು ಸರ್ಕಾರ ಅನುಸರಿಸಿರುವ ವಿಧಾನಗಳು, ಪೊಲೀಸರ ಮತ್ತು ಈ ವಿಧಾನಗಳಿಂದ ಜರುಗಿದ/ಜರುಗುವ ಅಶಾಂತಿಯ ಬಗೆಗೆ ಜನರ ಅಪನಂಬಿಕೆಯನ್ನು ಹೆಚ್ಚಿಸಿದೆ. ಪೊಲೀಸರ ಉಪದ್ರವದ ವಿರುದ್ಧದ ಪ್ರತಿಭಟನೆಗಳೇ ಅಶಾಂತಿಯ ಪ್ರಮುಖ ಘಟನೆಗಳಾಗುತ್ತವೆ. ಪರಿಣಾಮವಾಗಿ, ಮಾವೋವಾದಿಗಳು ಪ್ರಭಾವಶಾಲಿಗಳಾಗಿರುವ ಪ್ರದೇಶಗಳಲ್ಲಿ, ಪೊಲೀಸರು ಇನ್ನೂ ಹೆಚ್ಚಿನ ಮಟ್ಟದ ಹಿಂಸೆಯಲ್ಲಿ ತೊಡಗುತ್ತಾರೆ.” ಇಂತಹ ವರದಿಗಳು ಅನೇಕ ಒಳನೋಟಗಳನ್ನು ನೀಡುತ್ತವೆ.

ನಕ್ಸಲೀಯರೂ ತಮ್ಮ ಗುರಿಯನ್ನು ತಲುಪಲು ಅನುಸರಿಸುತ್ತ ಬಂದಿರುವ ಕಾರ್ಯತಂತ್ರವನ್ನು ಪುನರವಲೋಕನದ ಪ್ರಕ್ರಿಯೆಗೆ ಒಳಪಡಿಸಬೇಕು. ರಷ್ಯಾ, ಕ್ಯೂಬಾಗಳಲ್ಲಿ ಸಮಾಜವಾದಿ ಕ್ರಾಂತಿಯಾಗುವ ಮುನ್ನ, ಎಲ್ಲ ಜನವರ್ಗಗಳನ್ನು ಸಂಘಟಿಸಿ, ಕ್ರಾಂತಿಗಾಗಿ ಅವರನ್ನು ತಯಾರು ಮಾಡುವುದರಲ್ಲಿ ಅಲ್ಲಿನ ಕ್ರಾಂತಿಕಾರಿಗಳು ಸಫಲರಾಗಿದ್ದರು. ಈ ಎರಡು ದೇಶಗಳಲ್ಲಿ ಮತ್ತು ಚೀನಾದಲ್ಲೂ ಸಹ ಪ್ರಜಾಪ್ರಭುತ್ವ ವ್ಯವಸ್ಥೆ ಇರಲಿಲ್ಲ. ನಮ್ಮ ರಾಷ್ಟ್ರದಲ್ಲಿ, ಒಂದು ಹಂತದಲ್ಲಿ, ಪ್ರಜಾಪ್ರಭುತ್ವ ವ್ಯವಸ್ಥೆ ತಳವೂರಿದೆ. ಅದರಲ್ಲಿ ನ್ಯೂನತೆಗಳಿವೆ, ನಿಜ. ಆದರೆ, ನಿಜವಾದ ಅರ್ಥದಲ್ಲಿ ‘ಪ್ರಜಾಪ್ರಭುತ್ವವಾದಿ ಕ್ರಾಂತಿ’ಯಾಗಲು ವಿಪುಲ ಅವಕಾಶಗಳಿವೆ. ಮಾರ್ಕ್ಸ್, ಏಂಗೆಲ್ಸ್ ಮತ್ತಿತರ ಕಮ್ಯುನಿಸ್ಟ್ ಚಿಂತಕರು ಪ್ರತಿಪಾದಿಸಿರುವ ಸಿದ್ಧಾಂತಗಳನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡಿದವರಿಗೆ / ಮಾಡುವವರಿಗೆ ಈ ಎಲ್ಲ ಅಂಶಗಳು ತಿಳಿದೇ ಇರುತ್ತವೆ. ಕೆಲವು ಪೊಲೀಸರನ್ನಾಗಲಿ ಅಥವಾ ಭದ್ರತಾ ಪಡೆಯ ಸಿಬ್ಬಂದಿಯವರನ್ನಾಗಲಿ ಹತ್ಯೆ ಮಾಡುವುದರಿಂದ ಯಾವ ಬಗೆಯ ಸಾಮಾಜಿಕ ಪಲ್ಲಟವೂ ಆಗುವುದಿಲ್ಲ. ನಕ್ಸಲೀಯರು ಮುಖ್ಯವಾಹಿನಿಗೆ ಬಂದು, ಪ್ರಜಾಸತ್ತಾತ್ಮಕವಾಗಿ ಪ್ರತಿಭಟನೆಗಳಲ್ಲಿ ತೊಡಗಿದರೆ, ಜನಪರ ಚಳುವಳಿಗಳಿಗೆ ಮತ್ತಷ್ಟು ಬಲ ಬಂದೀತು. ಇಲ್ಲದಿದ್ದರೆ ಸಮಷ್ಟಿಯ ಬಗೆಗೆ ಸದಾಶಯಗಳನ್ನು ಇಟ್ಟುಕೊಂಡಿರುವ ಅವರಲ್ಲಿ ಇರುವ ಅನೇಕರು ಹಿಂಸೆಗೆ ಬಲಿಯಾಗುತ್ತಾರೆ, ಅಷ್ಟೇ.

**ಮ. ಶ್ರೀ. ಮುರಳಿ ಕೃಷ್ಣ**
೩೮, ೩ನೇ ಅಡ್ಡರಸ್ತೆ, ರಾಜ್ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು–೫೬೦೦೬೧




## ವಿಶ್ವ ಕಥಾವಾಹಿನಿ

**(ವಿಶ್ವಕಥಾಕೋಶ ಪ್ರಸ್ತಾವನೆಗಳ ಸಂಕಲನ)**

ನಿರಂಜನ

**ಪುಟ : ೩೫೨**

**ಬೆಲೆ : ರೂ. ೨೦೦**

**ನವಕರ್ನಾಟಕ ಪ್ರಕಾಶನ**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೧

*ನಿರಂಜನರ ಸಮರ್ಥ ಸಂಪಾದಕತ್ವದಲ್ಲಿ ನವಕರ್ನಾಟಕ ಹೊರತಂದ 'ವಿಶ್ವ ಕಥಾ ಕೋಶ' ಕನ್ನಡ ಓದುಗರು ಎಂದಿಗೂ ಮರೆಯಲು ಸಾಧ್ಯವಿಲ್ಲ! ಪ್ರಪಂಚದ ಎಲ್ಲ ದೇಶಪ್ರದೇಶಗಳಿಂದ ಆಯ್ದ ಕಥೆಗಳ ಕಣಜ ಅದು. ಒಮ್ಮೆಲೇ ಎಲ್ಲ ದೇಶಗಳ ಕಥೆಗಳನ್ನು ಹರಡಿ ಓದಿ ಎಂದರೆ ಹೇಗೆ ? ಅದಕ್ಕಾಗಿ ಪ್ರತಿಯೊಂದು ಸಂಪುಟಕ್ಕೂ ನಿರಂಜನರು ಪ್ರತ್ಯೇಕ ಪ್ರಸ್ತಾವನೆಯನ್ನು ನೀಡಿ ಅಲ್ಲಿನ ಸಾಂಸ್ಕೃತಿಕ, ಸಾಮಾಜಿಕ, ಸಾಹಿತ್ಯಿಕ ವಾತಾವರಣವನ್ನು ಪೂರ್ವಭಾವಿಯಾಗಿ ನೀಡಿದ್ದರು. ಯಾವ ದೇಶದ ಸಂಸ್ಕೃತಿ ಹೇಗೆ ಅರಳಿತು, ರಾಜಕೀಯ ಪಲ್ಲಟಗಳೇನು ? ಚಾರಿತ್ರಿಕ ಅಟ್ಟಹಾಸಗಳೇನು ? ಶೋಷಿತರ ಧ್ವನಿ ಸಾಹಿತ್ಯದಲ್ಲೆಷ್ಟು ದಾಖಲಾಯಿತು ? ಮೂಗನಿಗೆ ಬಾಯಿ ಬರದಿದ್ದರೇನು ? ಲೇಖನಿ ಇತ್ತಲ್ಲವೇ ? ಇವೇ ಮುಂತಾದ ಸ್ವಾರಸ್ಯಕರ ಅಂಶಗಳು ನಮಗೆ ಜಗತ್ತಿನ ಮೂಲೆ ಮೂಲೆಗಳನ್ನೂ ಪರಿಚಯಿಸುವಂಥವು. ಚರಿತ್ರೆಯ ಒಂದು ಭಾಗದಂತೆ ಗೋಚರಿಸುವ ಇವನ್ನು ಓದಿದರೆ ಮುಂದೆ ಕಥೆಗಳ ನಾಡಿಮಿಡಿತದ ಅನುಭವ ಸುಲಭ. "ನಿರಂಜನರ ಪ್ರಸ್ತಾವನೆಗಳನ್ನೆಲ್ಲ ಪ್ರತ್ಯೇಕ ಸಂಪುಟವನ್ನಾಗಿಸಿ ಪ್ರಕಟಿಸಿ" ಎಂಬ ಆಗ್ರಹಪೂರ್ವಕ ಬೇಡಿಕೆ ಇಂದು ನಿನ್ನೆಯದಲ್ಲ; ಬಹು ವರ್ಷಗಳದ್ದು! ಇದೀಗ 'ವಿಶ್ವ ಕಥಾಕೋಶ' ಸಂಪುಟಗಳಲ್ಲಿ ಚಿಕ್ಕ ಪುಟ್ಟ ತೊರೆಗಳಂತೆ ಕಾಣುತ್ತಿದ್ದ ಪ್ರಸ್ತಾವನೆಗಳೆಲ್ಲ ಒಂದಾಗಿ 'ವಿಶ್ವ ಕಥಾವಾಹಿನಿ'ಯಾಗಿ ಭೋರ್ಗರೆದು ಬರುತ್ತಿವೆ – ಸ್ವಾಗತಿಸಿ.*

## ಸಾಮಾಜಿಕ ಕ್ರಾಂತಿ ಜ್ಯೋತಿ ಮಹಾತ್ಮ ಜ್ಯೋತಿಬಾ ಫುಲೆ

ರವಿ ರಾ. ಅಂಚನ್

**ಪುಟ : ೯೨** **ಬೆಲೆ : ರೂ. ೬೫**

**ಅಭಿಮುಖಿ ಪ್ರಕಾಶನ,** ನಂ. ಎಂ ३೭/ಬಿ, ೨ನೇ ಮಹಡಿ, ೮ನೇ ಅಡ್ಡರಸ್ತೆ ಲಕ್ಷ್ಮೀನಾರಾಯಣಪುರ, ಬೆಂಗಳೂರು – ೫೬೦ ೦೨೧

*ಮಹಾರಾಷ್ಟ್ರದ ಪುಣೆಯನ್ನು ತನ್ನ ಕಾರ್ಯಕ್ಷೇತ್ರವನ್ನಾಗಿಸಿ ಸಮಾಜಸುಧಾರಕರಾಗಿ ದುಡಿದವರು ಜ್ಯೋತಿಬಾ ಫುಲೆ. ಇವರ ಅಜ್ಜ, ತಂದೆ, ತಾಯಿ ಅಕ್ಷರಸ್ಥರಲ್ಲದಿದ್ದರೂ ವ್ಯವಹಾರಚತುರರಾಗಿದ್ದರು. ಅಂದಿನ ಕಾಲದಲ್ಲಿ ಬೇರೂರಿದ್ದ ಸಾಮಾಜಿಕ ಕಂಟಕಗಳೆಂದರೆ ಜಾತಿಪದ್ಧತಿ, ಪಾಳೆಯಗಾರಿ ವ್ಯವಸ್ಥೆ, ಬಾಲ್ಯವಿವಾಹ, ಸತಿ ಪದ್ಧತಿ. ಇವುಗಳನ್ನು ಬದಲಿಸಿ ಹೊಸ ಸಮಾಜ ವ್ಯವಸ್ಥೆಯನ್ನು ಕಟ್ಟುವುದು ಸುಲಭವೇನೂ ಆಗಿರಲಿಲ್ಲ. ಜನಜಾಗೃತಿ ಮೂಡಿಸುವುದು ಮೊದಲ ಕೆಲಸವಾಗಿತ್ತು. ಸಮಾಜಸೇವೆಗಾಗಿಯೇ ಸತ್ಯಶೋಧಕ ಸಮಾಜವೆಂಬ ಸಂಸ್ಥೆ ಕಟ್ಟಿದರು. ಪ್ರಗತಿಪರ ಕಾರ್ಯಕ್ರಮಗಳನ್ನು ಸುಧಾರಣೆಗಳನ್ನು ತರಲು ಶ್ರಮಿಸಿದರು. ಒಂದೆಡೆ ಬಂಡವಾಳಶಾಹಿ – ಇನ್ನೊಂದೆಡೆ ಪುರೋಹಿತಶಾಹಿ ವ್ಯವಸ್ಥೆ ಇವೆರಡನ್ನೂ ಎದುರು ಹಾಕಿಕೊಂಡು ಕ್ರಾಂತಿಕಾರಿ ಹೆಜ್ಜೆಗಳನ್ನು ದಿಟ್ಟವಾಗಿಯೇ ಇಟ್ಟರು. ಅನೇಕ ಅಡೆತಡೆಗಳು, ಸಂಪ್ರದಾಯವಾದಿಗಳ ಕಿರುಕುಳ ಸಾಕಷ್ಟಿದ್ದು ಸಹಿಸಲಸಾಧ್ಯವಾಗಿತ್ತು. ಇವರ ಯಶಸ್ಸಿನ ಮಾರ್ಗದಲ್ಲಿ ಒತ್ತಾಸೆಯಾಗಿ ನಿಂತವರೆಂದರೆ ಇವರ ಪಾಲಿತ ಮಾತೆ ಸುಗುಣಾಬಾಯಿ ಹಾಗೂ ಸಹಧರ್ಮಿಣಿ ಸಾವಿತ್ರಿ ಬಾಯಿ. ಸಮಾನತೆಗಾಗಿ ಹೋರಾಟ, ಸ್ತ್ರೀ ಶಿಕ್ಷಣ, ದಲಿತರು – ಕಾರ್ಮಿಕರುಗಳಿಗೆ ಅವರವರ ಸ್ಥಿತಿಗಳ ಬಗ್ಗೆ ಅರಿವು ಮೂಡಿಸುವುದು – ಇವೆಲ್ಲ ಮಹಾತ್ಮ ಫುಲೆ ಕೈಗೊಂಡ ಸುಧಾರಣಾ ಕ್ರಮಗಳು. ಈ ಪುಸ್ತಕ ಅವರ ಬಗ್ಗೆ ಇನ್ನಷ್ಟು ಮತ್ತಷ್ಟು ತಿಳಿಸುತ್ತದೆ.*




## ಅಕಾಲ ಮಳೆ ಸುರಿದಾಗಿನ ಕಥೆ

ಆನಂದ ವಿಂಗಕರ ; ಅನು : ಚಂದ್ರಕಾಂತ ಪೋಕಳೆ

**ಪುಟ : ೧೪೪** **ಬೆಲೆ : ರೂ. ೯೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಇಬ್ಬರು ಸ್ನೇಹಿತರು. ಅವರಲ್ಲೊಬ್ಬ ರೈತ. ಇಬ್ಬರೂ ಒಂದೊಂದು ಘನಘೋರ ತಪ್ಪು ಮಾಡಿದ್ದಾರೆ. ಮುಂದೆ ಮನಸ್ಸಾಕ್ಷಿಯಿಂದಾಗಿ ಸ್ವಯಂಕೃತಾಪರಾಧದ ಸುಳಿಯಿಂದ ಹೊರ ಬರಲಾರರು. ಮಾಡಬಾರದ್ದು ಮಾಡಿದಾಗ ಆಗಬಾರದ್ದು ಆಗುವುದೆಂಬಂತೆ ಇವರ ಅಕೃತ್ಯಗಳಿಂದಾಗಿ ಮೂಕಪ್ರಾಣಿಗಳಾದ ಊರಿನ ನಾಯಿಗಳು, ಕಾಗೆಗಳು ಹಿಂಡುಹಿಂಡಾಗಿ ಸತ್ತುಬೀಳುತ್ತವೆ. ಊರೆಲ್ಲ ವಾಸನೆ. ದಾರುಣವಾಗಿ ಊಳಿಡುತ್ತಿರುವ ನಾಯಿಯೊಂದರ ಆರ್ತನಾದ ಅಪಸ್ವರ. ಅದು ಸರಿಪಡಿಸಲಾಗದ ದುರಂತದ ಕೂಗು. ಹೀಗೆ ಇಲ್ಲಿ ಎರಡು ಸಂಕೇತಗಳು ಕಾದಂಬರಿ ಉದ್ದಕ್ಕೂ ಕಾಡುತ್ತವೆ. ಇದು ನಿನ್ನದೇ ಹೆಣ, ಹೊರು ಎಂಬಂತೆ ಸವಾಲೆಸೆಯುತ್ತವೆ. ಅಂದು ಅಕಾಲದಲ್ಲಿ ವಿಪರೀತ ಮಳೆ ಸುರಿಯುತ್ತದೆ. ರೈತನಿಗೆ ಅಕಾಲವೃಷ್ಟಿ – ಅನಾವೃಷ್ಟಿ – ಅತಿವೃಷ್ಟಿ ಮೂರೂ ಮಾರಕವೇ. ಪ್ರಕೃತಿ ವಿಕೋಪಕ್ಕೆ ಹೋದಾಗ ಜೀವಸಂಕುಲಕ್ಕೆ ಉಳಿಗಾಲವಿಲ್ಲ. ಮನುಷ್ಯ ತುಂಬ ಸ್ವಾರ್ಥಿ. ನಿಸರ್ಗದ ಆಟಗಳನ್ನೆಲ್ಲ ತನ್ನ ಅನುಕೂಲಕ್ಕೆ ತಕ್ಕಂತೆ ವ್ಯಾಖ್ಯಾನಿಸಿ ಒಳಿತು–ಕೆಡುಕನ್ನು ನಿರ್ಧರಿಸಿಬಿಟ್ಟಿದ್ದಾನೆ. ಕೆಟ್ಟದ್ದು ತನಗೆ ಬೇಡ! ಅದನ್ನಾತ ಇತರರಿಗೆ ಧಾರಾಳವಾಗಿ ಮಾಡುತ್ತಾನೆ. ವಿಶ್ವಾಸಕ್ಕೆ ಹೆಸರಾದ ನಾಯಿಗೆ ಕೇಡುಬಗೆದು ಅದು ಊಳಿಟ್ಟರೆ ಕೇಡು ಎನ್ನುತ್ತಾನೆ... ಹೊಲಸು ತಿಂದು ಸ್ವಚ್ಛ ಮಾಡುವ ಕಾಗೆಗಳು ಸಾಯುವಂತೆ ತಾನೇ ಮಾಡಿದ್ದರೂ ಅವು ಕರ್ಕಶವಾಗಿ ಕೂಗಬಾರದು ಎನ್ನುತ್ತಾನೆ... ಸಕಾಲದಲ್ಲಿ ಮಳೆಯಾಗಿ ಭೂಮಿ ಮೊಗೆಮೊಗೆದು ಕೊಟ್ಟಿದ್ದರೂ ಅಕಾಲಿಕ ಮಳೆಯಿಂದಾಗಿ ಹಾನಿಯಾದಾಗ ಶಪಿಸುತ್ತಾನೆ. ಕಾದಂಬರಿ ಹೀಗೆ ಸಾಗುತ್ತದೆ – ಓದಿ ನೋಡಿ.*

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*




## ಹೌದು ನಾನು ಕೌದಿ

ವಿಜಯಕಾಂತ ಪಾಟೀಲ

**ಪುಟ : ೧೪ + ೬೮** **ಬೆಲೆ : ರೂ. ೬೦**

**ಪಲ್ಲವ ಪ್ರಕಾಶನ,** ಚನ್ನಪಟ್ಟಣ, ವಯಾ ಎಮ್ಮಿಗನೂರು, ಬಳ್ಳಾರಿ – ೫೮೩ ೧೧೩

*ಸಂಕಲನದ ಶೀರ್ಷಿಕೆಯೇ ಕವಿಯ ತುಡಿತವನ್ನೂ, ಆಶಯವನ್ನು ವ್ಯಕ್ತಪಡಿಸುತ್ತದೆ. ಸೂಕ್ಷ್ಮ ಗ್ರಹಿಕೆಯುಳ್ಳ ವಿಜಯಕಾಂತ ಪಾಟೀಲರು ವೃತ್ತಿಯಲ್ಲಿ ವಕೀಲ ಹಾಗೂ ಕೃಷಿಯನ್ನು ಅವಲಂಬಿಸಿದ್ದರೂ ಸಾಹಿತ್ಯದ ಕಡೆಯ ಆಸಕ್ತಿಯೂ ಅಷ್ಟೇ ತೀವ್ರತರವಾಗಿದೆ. ಈ ಆಸಕ್ತಿ ಹೇಗೆ ಬೆಳೆಯಿತೋ ಗೊತ್ತಿಲ್ಲ. ಆದರೆ ಸಾಹಿತ್ಯದ ಲಯಗಳನ್ನು ಹಿಡಿಯುವಲ್ಲಿ ಯಶಸ್ವಿಯಾಗಿದ್ದಾರೆ. ಇದಕ್ಕೆ ಈ ಸಂಕಲನವೇ ಸಾಕ್ಷಿ. ವೃತ್ತಿ–ಪ್ರವೃತ್ತಿಗಳನ್ನು ಸಮಾನವಾಗಿ ನಿರ್ವಹಿಸುವುದು ಅಷ್ಟು ಸುಲಭದ ಮಾತಲ್ಲ. ಆದರೆ ಪಾಟೀಲರಿಗೆ ಅದು ಸಿದ್ಧಿಸಿದೆ. ಸುಮಾರು ೩೭ ಕವಿತೆಗಳನ್ನು ಒಳಗೊಂಡಿರುವ ಈ ಸಂಕಲನದ ಪ್ರಾರಂಭದ ಹಲವು ಕವಿತೆಗಳು ಸಮಾಜಮುಖಿಯ ಹಿನ್ನೆಲೆಯಲ್ಲಿ ತೀವ್ರವಾಗಿ ಸ್ಪಂದಿಸುತ್ತವೆ. ಸಮಾಜದ ಹಲವು ಮಗ್ಗುಲುಗಳನ್ನು ಚಿತ್ರಿಸುತ್ತವೆ ಹಾಗೂ ಸಮಾಜದ ಕನ್ನಡಿಯಂತೆ ವರ್ತಿಸುತ್ತವೆ. ಹಣ, ಅಧಿಕಾರ, ಧರ್ಮ ಮತ್ತು ಜಾತಿ ರಾಜಕಾರಣದ ವಿರಾಟ್ ಸ್ವರೂಪವನ್ನು ಕಂಡ ಕವಿ ದಿಗ್ಭ್ರಮೆಗೊಳ್ಳುತ್ತಾನೆ. ಅನಕ್ಷರಸ್ಥರಿಗಿಂತಲೂ ಅಕ್ಷರಸ್ಥ ಸಮುದಾಯದೊಳಗಿನ ಜಾತಿಯ ಕಸವನ್ನು ಕಂಡು ಬೆಚ್ಚಿಬೀಳುತ್ತಾನೆ. ಇಂದಿನ ಪ್ರಭುತ್ವಗಳ ಅಭಿವೃದ್ಧಿ ಮಾದರಿಗಳು ಸೃಷ್ಟಿಸಿರುವ ಅವಾಂತರಗಳು, ಕೃಷಿ ಭೂಮಿಯ ಅಪಹರಣ, ಕೃಷಿಯ ವ್ಯಾಪಾರೀಕರಣ ಹಸುರನ್ನು ವಿಷಯುಕ್ತಗೊಳಿಸಿರುವಿಕೆಯ ಕುರಿತು ಕವಿತೆಗಳು ದೀರ್ಘವಾಗಿ ಚರ್ಚಿಸುತ್ತವೆ. ಕವಿತೆಗಳ ಶೀರ್ಷಿಕೆಗಳಾದ 'ನಾ ಮರವಾಗುವೆ', 'ಸೋರುತಿಹುದು', 'ಆಡು ಮುಟ್ಟದ ಸೊಪ್ಪು', 'ಅನ್ನ–ಅಗುಳು', 'ಹೊನ್ನಗಾಳ ಬಣವಿ', 'ಬಯಲಾದರೂ ನಗು', 'ಕಳೆ' ಮುಂತಾದ ರೂಪಕಗಳು ಚರ್ಚೆಗೆ ಪೂರಕವಾಗಿವೆ. ಈ ಶೀರ್ಷಿಕೆಗಳು ನಿಜವಾಗಿಯೂ ವಿಜಯಕಾಂತರನ್ನು ಕವಿಯಾಗಿಸಿವೆ. ಪ್ರಾರಂಭದಲ್ಲಿ ಉದ್ದನೆಯ ಆಲಾಪದಂಥ ಕವಿತೆಗಳಿದ್ದು, ಕೊನೆ ಕೊನೆಗೆ ಚುಟುಕುಗಳಾಗಿ, ಜೀಕುಗಳಂಥ ಕವಿತೆಗಳ ಕಡೆ ಕವಿಗೆ ವಿಶೇಷ ಒಲವಿದ್ದಂತಿದೆ. ಇವು ಕವಿ ಮನಸ್ಸಿನ ಮಧುರ ಭಾವಗಳನ್ನು ಹೊರಹಾಕುತ್ತವೆ. ಕವಿತೆಗಳ ಮುಖ್ಯ ಲಕ್ಷಣ, 'ಭಾವ ಪ್ರಾಮಾಣಿಕತೆ'. ಓದುಗ ಬಯಸುವುದು ಕವಿಯ ಭಾವನೆಗಳ ಪ್ರಾಮಾಣಿಕ ಅಭಿವ್ಯಕ್ತಿಯನ್ನು. ಈ ಹಿನ್ನೆಲೆಯಲ್ಲಿ ಕವಿ–ಕವನ ಸಂಕಲನ ಎರಡೂ ಪ್ರಶಂಸನೀಯ.*

**ಜನಪದ ಕಲೆ ಸಂಸ್ಕೃತಿ** *ಡಾ॥ ಎಚ್. ಟಿ. ಪೋತೆ*

**ಪುಟ : viii + ೮೪= ೯೨** **ಬೆಲೆ : ರೂ. ೧೦೦**

**ಕುಟುಂಬ ಪ್ರಕಾಶನ,** ವರ್ಷಾ ನಿಲಯ, ಪ್ಲಾಟ್ ನಂ. ೮೧/೮೨, ಪ್ರಬುದ್ಧ ನಗರ, ವಿಶ್ವವಿದ್ಯಾಲಯ ಅಂಚೆ, ಕುಸನೂರ ರಸ್ತೆ , ಗುಲಬರ್ಗಾ

ಮಾನವ ಸಂಸ್ಕೃತಿಯನ್ನು ಅರಿಯುವ ಸಾಧನಗಳಲ್ಲಿ ಜಾನಪದವು ಪ್ರಮುಖವಾದುದು. ಇದು ಸಂಸ್ಕೃತಿಯ ಒಳ ಪದರುಗಳನ್ನು ಬಿಡಿಸಿ ಮಾನವನ ಬದುಕು–ಬಾಳಿನ ಹಿನ್ನೆಲೆಯನ್ನು ಮತ್ತು ರೀತಿ–ನೀತಿಗಳನ್ನು ಹಾಗೂ ಅವನ ಅಭಿವ್ಯಕ್ತಿ ವಿಧಾನಗಳನ್ನು ತೆರೆದಿಡುತ್ತದೆ. ಇದು ಆಧುನಿಕ ಸಮಾಜದ ಅನೇಕ ಸಮಸ್ಯೆಗಳಿಗೆ ಪರಿಹಾರಗಳನ್ನು ನೀಡುವಂಥದ್ದಾಗಿದೆ. ಸಮಾಜ–ಸಾಹಿತ್ಯ–ಸಂಸ್ಕೃತಿ ಇವು ಒಂದಕ್ಕೊಂದು, ಸಂಬಂಧ ಹೊಂದಿದ್ದು ಪರಸ್ಪರ ಅಗಲಿ ಬದುಕಲಾರವು, ಬೆಳೆಯಲಾರವು. ಇದು ಕಾಲಾತೀತ ಸತ್ಯ. ಇಂತಹ ಅರಿಯುವ, ಬದುಕುವ, ಬೆಳೆಯುವ ಹಿನ್ನೆಲೆಯಿಂದ ಜನಪದ ಸಂಶೋಧನೆ ನಡೆಯಬೇಕು, 'ಡಾ೦॥ ಎಚ್. ಟಿ. ಪೋತೆ' ಯವರ 'ಜನಪದ ಕಲೆ ಸಂಸ್ಕೃತಿ' ಕೃತಿ ಈ ಹಿನ್ನೆಲೆಯಿಂದ ಪ್ರಮುಖವೆನಿಸುತ್ತದೆ. ಆಧುನಿಕತೆಯ ಒಡೆತನಕ್ಕೆ ಸಿಕ್ಕಿ ಯಂತ್ರಗಳ ಯಾಜಮಾನ್ಯದಿಂದ ನಶಿಸುತ್ತಿರುವ ಜನಪದ ಸಾಹಿತ್ಯ ಹಾಗೂ ಕಲಾಪ್ರಕಾರಗಳನ್ನು ಲೋಕ ದೃಷ್ಟಿಯಿಂದ ಗಮನಿಸಬೇಕಾದ ಅಗತ್ಯವನ್ನು ಈ ಕೃತಿ ಮನಗಾಣಿಸುತ್ತದೆ. ಜನಪದ ಕಲೆಗಳು ಹಳೆಯವೆಂದು ಪರಿಗಣಿಸಿದರೂ ಅವುಗಳ ಪುನರ್ ಸೃಷ್ಟಿಗೊಳ್ಳುವ ಮೂಲಕ ನಶಿಸುತ್ತಿರುವ ಜನಪದ ಕಲೆಗಳು ಆಧುನಿಕ ಜಗತ್ತಿನಲ್ಲಿ ಯಾವ ರೀತಿ ಚಿಗುರೊಡೆಯುತ್ತಿವೆ ಅದರ ಅನಿವಾರ್ಯತೆಯನ್ನು ಕೃತಿ ವಿವರಿಸುತ್ತದೆ. ಜನಪದ ಸಂಸ್ಕೃತಿಯನ್ನು ವಿವಿಧ ನೆಲೆಗಳಿಂದ ಕಾಣುವ ಈ ಕೃತಿ ಶಿಷ್ಟ ಸಾಹಿತ್ಯದಿಂದ ಬೇರಾದ ಜನಪದವನ್ನು ಮರೆತರೆ ಮಾನವ ಸಾಂಸ್ಕೃತಿಕ, ನೈತಿಕ ನಡವಳಿಕೆಯಲ್ಲಿ ಎಡವಟ್ಟಾದೀತೆಂಬ ಕಳವಳವನ್ನು ವ್ಯಕ್ತಪಡಿಸುತ್ತದೆ. ಜನಪದ ಕಲೆ–ಸಂಸ್ಕೃತಿಯ ಬಹು ಆಯಾಮಗಳ ವಿವರಗಳನ್ನು ಸಂಕೇತಿಸುವ ಕೃತಿ ಹೈದರಾಬಾದ್ ಕರ್ನಾಟಕದ ಪ್ರಾದೇಶಿಕ ವಾದ್ಯ, ಪರಿಕರಗಳು, ಕವಿ ಅವರ ಕಾವ್ಯ ಸಾಹಿತ್ಯದ ಮಹತ್ವವನ್ನು ವಿವರಿಸುವ ಅಮೂಲ್ಯ ಕೃತಿಯಾಗಿದ್ದು ಜಾನಪದ ತಜ್ಞರ, ವಿದ್ಯಾರ್ಥಿಗಳ ಕೈಪಿಡಿಯಂತಿದೆ.




**ಸುಮಿತ್ರಾನಂದನ ಪಂತ ಕವಿತೆಗಳು**



*ಸಂ. ಅನು : ಪ್ರೊ॥ ಕಾಶೀನಾಥ ಅಂಬಲಗೆ*

**ಪುಟ : ೮೮** **ಬೆಲೆ : ರೂ. ೭೦**

**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ , ಕಲಬುರ್ಗಿ – ೫೮೫ ೧೦೫

ಹಿಂದಿ ಸಾಹಿತ್ಯದ ಜ್ಞಾನಪೀಠ ಪುರಸ್ಕೃತ ಕವಿ 'ಸುಮಿತ್ರಾನಂದನ್ ಪಂತ'ರು ರಚಿಸಿರುವ ಕವಿತೆಗಳನ್ನು ಕನ್ನಡಕ್ಕೆ 'ಪ್ರೊ. ಕಾಶೀನಾಥ ಅಂಬಲಗೆ' ಅನುವಾದಿಸಿದ್ದಾರೆ. ಹಿಂದಿಯ ಕಾವ್ಯ ಪ್ರಪಂಚಕ್ಕೆ ಹೊಸ ಹಾದಿಯನ್ನು ತೋರಿದವರು, ಹೊಸ ದಿಕ್ಕಿಗೆ ಕೊಂಡೊಯ್ದು ಆಧುನಿಕ ಹಿಂದಿ ಸಾಹಿತ್ಯವನ್ನು ಶ್ರೀಮಂತಗೊಳಿಸಿದವರು ಸುಮಿತ್ರಾನಂದನ್. ಈ ಸಂಕಲನದ ಪ್ರತಿ ಕವಿತೆಯೂ ಸೃಜನಶೀಲತೆಯ ಕಸುವಿನಿಂದ ಕೂಡಿದೆ. ಆಧುನಿಕ ಪ್ರಜ್ಞೆಯ ಈ ಕಾವ್ಯ ಸಂಕಲನ ವರ್ತಮಾನದ ಸಂಘರ್ಷಗಳ ಹಿನ್ನೆಲೆಯಲ್ಲಿ ಹೊಸ ಸಾಂಸ್ಕೃತಿಕ ಪ್ರೇರಣೆಗಳನ್ನೂ, ಹೊಸ ಸೌಂದರ್ಯಪ್ರಜ್ಞೆಯ ಭಾವನೆಗಳನ್ನೂ ಭೌತಿಕ ಹಾಗೂ ಆಧ್ಯಾತ್ಮಿಕ ವಿಕಾಸಗಳನ್ನು ಸಮನ್ವಯಗೊಳಿಸುತ್ತದೆ. ನೈತಿಕ ಮತ್ತು ಮಾನವೀಯ ಪ್ರಜ್ಞೆಯ ಬೆಳಕನ್ನು ಕಟ್ಟಿಕೊಡುತ್ತದೆ. ಸುಮಾರು ೪೦ ಕವನಗಳನ್ನೊಳಗೊಂಡಿರುವ ಕಾವ್ಯಕೃತಿ ಪ್ರಾರಂಭದಲ್ಲಿ ಪ್ರಕೃತಿಯ ನಿರ್ಮಲ ಸೌಂದರ್ಯವನ್ನು ಚಿತ್ರಿಸುತ್ತಾ, ಸಮಾಜವಾದದ ವಿಚಾರಧಾರೆಗಳಿಗೆ ಪ್ರಭಾವಿತಗೊಂಡು ಲೋಕ ಕಲ್ಯಾಣದ ಆಶಯಗಳ ಕುರಿತು ಮಾತನಾಡುತ್ತದೆ. ನಂತರದಲ್ಲಿ ಸತ್ಯದರ್ಶನದ ಹುಡುಕಾಟದಲ್ಲಿ ತೊಡಗುತ್ತದೆ. ಹೀಗೆ ವಿಶ್ವ ಮಾನವತೆಯ ಸತ್ಯವನ್ನು ಹುಡುಕುವ ಮತ್ತು ಪ್ರತಿಪಾದಿಸುವ ಇಲ್ಲಿನ ಕವಿತೆಗಳು ಮತ್ತೆ ಮತ್ತೆ ಓದಿಸಿಕೊಳ್ಳುತ್ತವೆ. ಪ್ರತಿಬಾರಿಯ ಓದೂ ಸಹ ಹೊಸ ಹೊಸ ಅರ್ಥಗಳನ್ನು ಸ್ಫುಟಿಸುತ್ತದೆ. ಒಟ್ಟಾರೆ ಸಾಮಾಜಿಕ ಚಿಂತನೆಯ ಮಾಗಿದ ಅನುಭವ ಈ ಸಂಕಲನದಲ್ಲಿ ಕಾಣಬಹುದು. ಹಾಗೆಯೇ ಸಮಾಜವನ್ನು ಆಧುನಿಕ ನೆಲೆಯಿಂದ ಕಾಣುವುದು ಸಹ ಕವಿಯ ಸಮಕಾಲೀನ ಪ್ರಜ್ಞೆಗೆ ಸಾಕ್ಷಿಯಾಗಿದೆ. ಅನುವಾದವೂ ಸಹ ಕವಿಯ ಆಶಯಗಳಿಗೆ ಭಂಗ ಬರದಂತೆ ಮೂಡಿಬಂದಿದೆ. ಒಟ್ಟಾರೆ ಕನ್ನಡ ಸಾಹಿತ್ಯ ಲೋಕ ಇಂತಹ ಮಹಾಕವಿಗಳ ಕಾವ್ಯಗಳಿಂದ ತನ್ನ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ವಿಸ್ತರಿಸಿಕೊಳ್ಳುವ ಮೂಲಕ ಅನುವಾದಗಳಿಗೆ ಬಾಗಿಲನ್ನು ತೆರೆದಿರುವುದು ಹಾಗೂ ಅನುವಾದಕರ ಪ್ರಯತ್ನಗಳು ಆಶಾದಾಯಕ.

**– ರಮೇಶ ಕೋಲಾರ**

*ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧*

## ಸಾದರ ಸ್ವೀಕಾರ

**ಮಾಯಾ ಬಜಾರ್** (ಮಕ್ಕಳಿಗಾಗಿ ನಾಟಕ) ಎಸ್. ಮಾಲತಿ
**ಪುಟ : iv + ೨೮** **ಬೆಲೆ : ರೂ. ೨೫**

**ಚಿತ್ರ ವಿಜ್ಞಾನ** (ವಿಜ್ಞಾನದ ಚಿತ್ರಗಳ ಸುಲಭ ಕಲಿಕೆ)
ಸತೀಶ್ ಯಲ್ಲಾಪುರ
**ಪುಟ : ೪ + ೫೬** **ಬೆಲೆ : ರೂ. ೫೦**

**ಮಕ್ಕಳಿಗಾಗಿ ರಾಮಾಯಣ ದರ್ಶನಂ**
ಡಾ॥ ಆರ್. ವಿ. ಭಂಡಾರಿ
**ಪುಟ : iv + ೩೨** **ಬೆಲೆ : ರೂ. ೨೫**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ, ಅರೇ ಅಂಗಡಿ, ಹೊನ್ನಾವರ, ಉತ್ತರ ಕನ್ನಡ - ೫೮೧೩೩೪

**ನೆಲಗಂಪು** (ಕವನಗಳು) ಪೇತ್ರಿ ವಿಶ್ವನಾಥ್ ಆರ್. ಶೆಟ್ಟಿ
**ಪುಟ : ೮೪** **ಬೆಲೆ : ರೂ. ೭೦**

**ಶರಂತಿ – ಮೌನಿ ಮಾತೆ** ಶಕುಂತಲಾ ಆರ್. ಪ್ರಭು
**ಪುಟ : ೧೨೮** **ಬೆಲೆ : ರೂ. ೧೦೦**
**ಅಭಿಮುಖಿ ಪ್ರಕಾಶನ,** ನಂ. ಎಂ ೩೭/ಬಿ, ೨ನೇ ಮಹಡಿ, ೮ನೇ ಕ್ರಾಸ್, ಲಕ್ಷ್ಮೀನಾರಾಯಣಪುರ, ಬೆಂಗಳೂರು - ೨೧

**ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಳ್ಳುವುದು ಹೇಗೆ ?**
ಜೆ. ಆರ್. ಲಕ್ಷ್ಮಣರಾವ್
**ಪುಟ : ೯೬** **ಬೆಲೆ : ರೂ. ೫೦**

**ಇಂದ್ರಜಾಲದ ಅಂತರಂಗ** ಜಿ. ವಿ. ಗಣೇಶಯ್ಯ
**ಪುಟ : ೮೮** **ಬೆಲೆ : ರೂ. ೪೫**

**ಸೌರಶಕ್ತಿಯ ಕಥೆ** ಅರವಿಂದ ಗುಪ್ತ,
ಅನು : ಟಿ. ಆರ್. ಅನಂತರಾಮು
**ಪುಟ : ೫೨** **ಬೆಲೆ : ರೂ. ೬೫**

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ.ಪೆ. ೫೧೯೯, ಬೆಂಗಳೂರು - ೫೬೦ ೦೦೧

**ನನ್ನವಳು** (ಕಾದಂಬರಿ) ಎನ್. ರಮೇಶ
**ಪುಟ : xiv + ೫೮ = ೭೨** **ಬೆಲೆ : ರೂ. ೫೨**
**ಶ್ರೀರಾಮ ಟ್ಯೂಟೋರಿಯಲ್ಸ್,** ಗಿರೀಶನಗರ, ಎಪಿಎಂಸಿ ಯಾರ್ಡ್, ಜಮಖಂಡಿ - ೫೮೭ ೩೦೧

**ಸತ್ಯಮಂಡಲ** (ನಾಟಕ) ಡಾ॥ ಎನ್. ಕರಿಬಸಪ್ಪ
**ಪುಟ : iv + ೪೪** **ಬೆಲೆ : ರೂ. ೪೮**
**ಕೋಕಿಲಾ ಪ್ರಕಾಶನ,** ಚವಲಿಹಳ್ಳಿ ಅಂಚೆ ಚಿತ್ರದುರ್ಗ ತಾಲ್ಲೂಕು ಮತ್ತು ಜಿಲ್ಲೆ

**ದಲಿತ ಲೋಕ** ಡಾ॥ ಎಚ್. ಟಿ. ಪೋತೆ
**ಪುಟ : x + ೧೪೦ = ೧೫೦** **ಬೆಲೆ : ರೂ. ೧೦೦**
**ಕುಟುಂಬ ಪ್ರಕಾಶನ,** ವರ್ಷಾ ನಿಲಯ, ಪ್ಲಾಟ್ ನಂ. ೮೧/೮೨, ಪ್ರಬುದ್ಧ ನಗರ, ವಿಶ್ವವಿದ್ಯಾಲಯ ಅಂಚೆ, ಕುಸನೂರ ರಸ್ತೆ, ಗುಲಬರ್ಗಾ

**ಚುನಾವಣೆ, ಮತದಾನ ಮತ್ತು ಮಾಹಿತಿ ಹಕ್ಕು**
ವೈ. ಜಿ. ಮುರಳೀಧರನ್
**ಪುಟ : ೪೮** **ಬೆಲೆ : ರೂ. ೧೦**

**ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ (ನೋಂ),** ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಹೃದಯ ಬಾನಂಗಳದ ಬೆಳಕು** (ಕಾದಂಬರಿ) ಅಸ್ತ್ರ
**ಪುಟ : ೧೪೨** **ಬೆಲೆ : ರೂ. ೭೫**
**ಅಂಕ ಪ್ರಕಾಶನ,** ೯೫೫, ಕಾಳಿದಾಸ ನಗರ, ೪ನೇ ಮೇನ್, ಹೊಸಕೆರೆ ಹಳ್ಳಿ, ಬಿಎಸ್‌ಕೆ ೩ನೇ ಹಂತ, ಬೆಂಗಳೂರು - ೮೫

**ರಂಗುರಂಗಿನ ಗಜ಼ಲ್‌ಗಳು**
ಸಂ. ಹಾಗೂ ಅನು: ಪ್ರೊ॥ ಕಾಶೀನಾಥ ಅಂಬಲಗೆ
**ಪುಟ : xii + ೫೬ = ೬೮** **ಬೆಲೆ : ರೂ. ೫೦**
**ಪ್ರಗತಿ ಪ್ರಕಾಶನ,** ಜಯನಗರ, ವಿಶ್ವವಿದ್ಯಾಲಯ ರಸ್ತೆ, ಕಲಬುರ್ಗಿ - ೫೮೫ ೧೦೫

**ಮಲಯಾಳ ಕವಿತೆಗಳು** ಕನ್ನಡಕ್ಕೆ : ಕೆ. ಕೆ. ನಾಯರ್
**ಪುಟ : ೧೨೮+ iv = ೧೩೨** **ಬೆಲೆ : ರೂ. ೮೦**
**ಕಿಟಕಿ ಪ್ರಕಾಶನ,** ನಂ. ೧೧೭, ೨ನೇ ಕ್ರಾಸ್, ದಕ್ಷಿಣ, ಅನಿಕೇತನ ರಸ್ತೆ, ಕುವೆಂಪು ನಗರ, ಮೈಸೂರು - ೨೩

**ಕೊರಡ ಕೊನರು** (ಎರಡನೇ ಕವನ ಸಂಕಲನ)
ಟಿ. ಬಸವರಾಜ್, ತೂಲಹಳ್ಳಿ
**ಪುಟ : xviii + ೧೬೬ = ೧೮೪** **ಬೆಲೆ : ರೂ. ೧೦೦**
**ನಿವೇದಿತ ಪ್ರಕಾಶನ,** ನಂ. ೩೪೩೭, ೧ನೇ ಮಹಡಿ, ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೨೮



# ಬಿಕ್ಕುತ್ತಿದೆ ಭೂಮಿ; ಬಿಕೋ ಎನುತಿದೆ ವಸಂತಕಾಲ

ಎಲ್. ಸಿ. ನಾಗರಾಜ್

ಕೃಷಿ ವಿಜ್ಞಾನವನ್ನ ನಾನು ತಿರಸ್ಕರಿಸಿಲ್ಲ, ಶುದ್ಧ ಕೃಷಿ ವಿಜ್ಞಾನವನ್ನ ನಾನು ಸ್ವೀಕರಿಸಿರುವ ಬಗ್ಗೆ ನನ್ನ ಲೇಖನದಲ್ಲೇ ಸಾಕ್ಷಿಗಳಿವೆ. (ಡಾ॥ ವಿಲಿಯಂ, ಎ. ಆಲ್‌ಬ್ರೆಕ್ಟ್, ಸರ್ ಆಲ್ಬರ್ಟ್ ಹೊವಾರ್ಡ್ ಮತ್ತು ದೊಕಾಚೇವ್ ಬಗೆಗಿನ ನನ್ನ ಮೆಚ್ಚುಗೆ). ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ವಿಶ್ರಾಂತ ಉಪಕುಲಪತಿ, ಮಣ್ಣಿನ ಫಲವಂತಿಕೆಯಲ್ಲಿ ಗೆದ್ದಲು ಹುಳುಗಳು ವಹಿಸುವ ಪಾತ್ರ ಕುರಿತಂತೆ ಆಳವಾದ ಸಂಶೋಧನೆ ಮಾಡಿರುವ ಡಾ॥ ಜಿ. ಕೆ. ವೀರೇಶ್ ಮತ್ತು ಡಾ॥ ರಾಮಕೃಷ್ಣ ಪರಂ ಅವರ ಮಣ್ಣು ಫಲವಂತಿಕೆ ಕುರಿತ ಲೇಖನಗಳ ಬಗ್ಗೆ ನನಗೆ ಮೆಚ್ಚಿಗೆಯಿದೆ. ನನಗೆ ತಿರಸ್ಕಾರವಿರುವುದು ಸರ್ಕಾರಿ ತತ್ವಜ್ಞಾನದ ಚೌಕಟ್ಟಿನೊಳಗೆ ಬಂದಿಯಾಗಿರುವ ಆನ್ವಯಿಕ ಕೃಷಿ ವಿಜ್ಞಾನಿಗಳ ಬಗೆಗೆ. ಕೃಷಿ ವಿಜ್ಞಾನದ ಆನ್ವಯಿಕ ಮಾದರಿಗಳು ಮೊದಲು ಕೃಷಿ ವಿಜ್ಞಾನದ ತಾಕುಗಳಲ್ಲಿ ಪ್ರಯೋಗಗೊಂಡು ನಂತರ ರೈತಾಪಿಗಳ ತಾಕುಗಳಿಗೆ, ವರ್ಗಾವಣೆಗೊಳ್ಳುತ್ತವೆ; ಈ ಪ್ರಯೋಗಗಳು ಕೃಷಿ ಬಗೆಗಿನ ಪಾರಂಪರಿಕ ಅರಿವು (ಸಾಂಪ್ರದಾಯಿಕ ಅಲ್ಲ)ಗಳನ್ನು ಗಣನೆಗೆ ತೆಗೆದುಕೊಳ್ಳದೇ ನಿರಂಕುಶವಾಗಿ ನಡೆದುಕೊಳ್ಳುತ್ತಿವೆ. ಮಣ್ಣು ಬಹುವಿಧ ಜೀವಗಳ ಆಹಾರ ಸರಪಳಿ, ಭಾರತೀಯ ಗ್ರಾಮಗಳದ್ದು ಬಹುವಿಧ ಸಂಸ್ಕೃತಿ, ಕೃಷಿ ಸಂಬಂಧಿ ಉಪಕಸುಬು ಮತ್ತು ಕುಶಲತೆಗಳ ಸಾಮಾಜಿಕ ವ್ಯವಸ್ಥೆ ನಮ್ಮದು ಎಂದು ನನ್ನ ಲೇಖನದಲ್ಲಿ ಸೂಚ್ಯವಾಗಿ ಹೇಳಿದ್ದಾಗ್ಯೂ ಪ್ರತಿವಾದಿ ಲೇಖಕರು ನನ್ನ ಲೇಖನವನ್ನು ಫ್ಯಾಸಿಸ್ಟ್ ಚಿಂತನಾಕ್ರಮದ ಚೌಕಟ್ಟಿಗೆ ಬಲವಂತವಾಗಿ ಗಿಡಿಯುವ ಪ್ರಯತ್ನ ಮಾಡಿದ್ದಾರೆ. ಭೂಮಿ, ಮಣ್ಣು ಫಲವಂತಿಕೆ, ಕೀಟ ನಿರ್ವಹಣೆ, ನೀರಿನ ಬಳಕೆ, ಧಾನ್ಯ ಸಂಗ್ರಹಣೆ ಕುರಿತಂತೆ ಕನ್ನಡನಾಡಿನ ಅನೇಕ ಆಚರಣೆಗಳನ್ನ ದಾಖಲಿಸಿರುವ ಜಾನಪದ ವಿದ್ವಾಂಸರುಗಳಲ್ಲಿ ಫ್ಯಾಸಿಸ್ಟ್ ಚಿಂತನೆಗಳಿವೆ ಅಂತ ಎಂದೂ ನನಗೆ ಅನಿಸಿಲ್ಲ. ಈ ಯಾವ ಆಚರಣೆಗಳಲ್ಲೂ ನಿರ್ದಿಷ್ಟ ಧಾರ್ಮಿಕ ಚಹರೆ, ಸಸ್ಯಾಹಾರ ಬೋಧನೆ ಅಥವಾ ಸಹಧರ್ಮಗಳ ಆಹಾರ ಸಂಸ್ಕೃತಿಗಳನ್ನ ಹೀಗಳೆಯುವ ಅಂಶಗಳಿಲ್ಲ. ಬದಲಾಗಿ ನಿಸರ್ಗದೊಂದಿಗಿನ ಅನುಸಂಧಾನ ಮತ್ತು ಈ ಮೂಲಕ ಸಮಸ್ತ ಜೀವಸಂಕುಲದ ಆಹಾರ ಬುಟ್ಟಿಯನ್ನ ಖಚಿತಪಡಿಸಿ ಕೊಳ್ಳುವ ದಾರ್ಶನಿಕತೆಗಳಿವೆ.

ಕೃಷಿ ಮಣ್ಣಿನ ಭೌತಿಕ ಸಂರಚನೆಯನ್ನು ಸುಧಾರಿಸಿ ಕೊಳ್ಳುವ ಕುರಿತಂತೆ ಒಂದು ಆಚರಣೆ ಇದೆ. ಗ್ರಾಮದ ಹಿರೀಕರು ಯುವಕರನ್ನ ಆಕರ್ಷಿಸುತ್ತಾರೆ, ಕೆರೆ–ಕುಂಟೆಗಳಿಗೆ ಕರೆದುಕೊಂಡು ಹೋಗುತ್ತಾರೆ. ಮಣ್ಣನ್ನು ಅಗೆದು, ಅದರ ಗುಣಪರೀಕ್ಷೆ ಮಾಡುತ್ತಾರೆ. ಆ ಭಾಗಗಳಿಂದ ಸಂಗ್ರಹಿಸಿದ ಮಣ್ಣಿನಿಂದ ಪುಟ್ಟ ಆಕೃತಿಗಳನ್ನ ರಚಿಸುತ್ತಾರೆ; ಈ ಆಕೃತಿಗಳಿಗೆ ಗರಿಕೆಯ ಪತ್ರೆಗಳನ್ನ ನೆಟ್ಟು ನೆರಳಿನಲ್ಲಿ ವೃತ್ತಾಕಾರವಾಗಿ ಜೋಡಿಸಿ ನಡುವೆ ಒಂದು ಒಲೆಯನ್ನು ನಿರ್ಮಿಸುತ್ತಾರೆ. ಈ ವೇಳೆಗೆ ಯುವಕರು ಬೇಟೆಯಾಡಿ ತಂದ ಮೀನು, ಏಡಿ, ಸೀಗಡಿ ಮುಂತಾದ ಜಲಚರಗಳಿಂದ ತಿನಿಸುಗಳನ್ನ ತಯಾರಿಸುತ್ತಾ, ಮಣ್ಣಿನ ಬಗ್ಗೆ ವಿವರಿಸುತ್ತಾ ಕೂರುತ್ತಾರೆ. ಊಟದ ನಂತರ ಗರಿಕೆ ನೆಟ್ಟ ಮಣ್ಣಿನ ಆಕೃತಿಗಳನ್ನ ಪರಿಶೀಲಿಸುತ್ತಾರೆ; ಯಾವ ಆಕೃತಿಗಳಲ್ಲಿ ಗರಿಕೆ ಪತ್ರೆಗಳು ಬಾಡಿರುವುದಿಲ್ಲವೋ ಆ ಆಕೃತಿಗಳನ್ನ ತಯಾರಿಸಿದ ಕೆರೆಯ ಭಾಗಗಳಿಗೆ

ವಿಜ್ಞಾನದ ದುರ್ಬಲಕೆಯನ್ನು ಖಂಡಿಸುವುದಕ್ಕೂ ವಿಜ್ಞಾನವನ್ನೇ ಹೀಯಾಳಿಸಿ ತೆಗಳುವುದಕ್ಕೂ ವ್ಯತ್ಯಾಸವಿದೆ. ವಿಜ್ಞಾನ ಮತ್ತು ತಂತ್ರಜ್ಞಾನಗಳ ಹೆಸರಿನಲ್ಲಿ ಅಥವಾ ಅವುಗಳ ಮುಸುಕಿನಲ್ಲಿ ಸ್ವಂತದ ಲಾಭ ಹೆಚ್ಚಿಸಿಕೊಳ್ಳಲು ಕಾದು ಕುಳಿತಿರುವ ಕಂಪನಿಗಳುಂಟು, ಅವುಗಳನ್ನು ಪೋಷಿಸುವುದನ್ನು ವ್ರತವನ್ನಾಗಿಸಿಕೊಂಡಿರುವ ವಿಜ್ಞಾನಿಗಳೂ ಉಂಟು. ಕೃಷಿ ವಿಜ್ಞಾನದ ಸಂದರ್ಭದಲ್ಲಿ ಈ ಎರಡು ಧ್ರುವಗಳಿರುವಾಗ ಸರಿಯಾದ, ಪರಿಸರ ಹಾಗೂ ರೈತಪರವಾದ, ನಿಲುವು ಯಾವುದಾಗಬೇಕು ? 'ಹೊಸತು' ಜನವರಿ ೨೦೧೩ರ ಸಂಚಿಕೆಯಲ್ಲಿ ಶ್ರೀ. ಎಲ್. ಸಿ. ನಾಗರಾಜ್ "ಅವನತಿಯತ್ತ ಭಾರತದ ಕೃಷಿ" ಎಂಬ ಲೇಖನದಲ್ಲಿ ಇದನ್ನು ಕುರಿತ ಒಂದು ಚರ್ಚೆ ಆರಂಭಿಸಿದರು. ಅದಕ್ಕೆ ಪ್ರತಿಕ್ರಿಯೆಯಾಗಿ ಏಪ್ರಿಲ್ ೨೦೧೩ರ ಸಂಚಿಕೆಯಲ್ಲಿ ಶ್ರೀ. ಪ್ರದೀಪ್ ಬೆಳಗಲ್ ಮತ್ತು ಶ್ರೀ. ಕೆ. ಎಂ. ಗುರುಸಿದ್ಧಮೂರ್ತಿಯವರ "ಕೃಷಿ ವಿಜ್ಞಾನ ತಿರಸ್ಕರಿಸುವುದು ಕೃಷಿ ಬಿಕ್ಕಟ್ಟಿಗೆ ಪರಿಹಾರವಲ್ಲ" ಎಂಬ ಲೇಖನ ಪ್ರಕಟವಾಯಿತು. ಅದಕ್ಕೆ ಶ್ರೀ. ಎಲ್. ಸಿ. ನಾಗರಾಜ್ ಬರೆದ ಪ್ರತಿಕ್ರಿಯೆಯ ಸಂಕ್ಷಿಪ್ತ ರೂಪವನ್ನು ಈ ಸಂಚಿಕೆಯಲ್ಲಿ ಪ್ರಕಟಿಸಲಾಗುತ್ತಿದೆ. ಚರ್ಚೆಯನ್ನು ಮುಂದುವರಿಸಲು ಬೇರೆ ಓದುಗರಿಗೂ ಸ್ವಾಗತವಿದೆ. ಪ್ರತಿಕ್ರಿಯೆಗಳು ಇನ್ನೂರು ಪದಗಳನ್ನು ಮೀರಕೂಡದೆಂಬುದು ಪತ್ರಿಕೆಯ ಮನವಿ.

ಮರಳುತ್ತಾರೆ, ಆ ಮಣ್ಣನ್ನ ತಮ್ಮ ಹೊಲಗಳಿಗೆ ಸಾಗಿಸಿಕೊಳ್ಳುತ್ತಾರೆ. ಕೃಷಿ ಮಣ್ಣಿನ ಭೌತಿಕ ಸಂರಚನೆಯನ್ನ ಸುಧಾರಿಸಿಕೊಳ್ಳುವ ಈ ಪೂರ್ವಿಕ–ಪಾರಂಪರಿಕ ಜ್ಞಾನ ಪದ್ಧತಿಯನ್ನ ತಲೆಮಾರಿನಿಂದ ತಲೆಮಾರಿಗೆ ದಾಟಿಸುವ ಪ್ರಕ್ರಿಯೆ ಕಾಲ ಮತ್ತು ಚರಿತ್ರೆಗಳಲ್ಲಿ ಒಂದು ಆಚರಣೆಯಾಗಿ ರೂಪುಗೊಂಡಿದೆ.

ಕೃಷಿ ವಿಜ್ಞಾನಿಗಳು ಸತ್ಯ ಹೇಳುವುದು ನಿವೃತ್ತರಾದ ನಂತರ ಮಾತ್ರ, ಅಲ್ಲಿಯತನಕ ಶುದ್ಧ ವಿಜ್ಞಾನ ನಿವೃತ್ತ ಸ್ಥಿತಿಯಲ್ಲಿರುತ್ತದೆ; ಅಮೆರಿಕದ ಮೊನ್ಸಾಂಟೊ ಕಂಪನಿ ಆನ್ವಯಿಕ ವಿಜ್ಞಾನಗಳನ್ನ ನಿರ್ದೇಶಿಸುತ್ತಿರುತ್ತದೆ. ವಿಜ್ಞಾನಿಗಳು ಸರಕಾರಿ ತತ್ವಜ್ಞಾನದ ಚೌಕಟ್ಟಿನೊಳಗೆ, ಉಸಿರುಗಟ್ಟಿಸುವ ವಾತಾವರಣದಲ್ಲಿ ಕೃಷಿ ವಿಜ್ಞಾನದ ಪುರೋಹಿತರಂತೆ ಕೆಲಸ ಮಾಡುತ್ತಿರುತ್ತಾರೆ. ಕೃಷಿ ಮಣ್ಣಿನ ಫಲವಂತಿಕೆ ಕುರಿತಂತೆ ಕನ್ನಡದಲ್ಲಿ ಎರಡು ಒಳ್ಳೆಯ ಪುಸ್ತಕಗಳು ಪ್ರಕಟವಾಗಿವೆ. ಒಂದು ಡಾ॥ ಜಿ. ಕೆ. ವೀರೇಶ್ ಅವರದು, ಇನ್ನೊಂದು ಮಣ್ಣು ವಿಜ್ಞಾನಿ ಡಾ॥ ರಾಮಕೃಷ್ಣ ಪರಂ ಅವರದು. ಈ ಎರಡೂ ಪುಸ್ತಕಗಳನ್ನ ಪ್ರಕಟಿಸಿರುವುದು ಕೃಷಿ ವಿಶ್ವವಿದ್ಯಾಲಯದ ಪ್ರಸಾರಾಂಗವಲ್ಲ ಆದರೆ ಖಾಸಗಿ ಪ್ರಕಾಶನ ಸಂಸ್ಥೆಗಳು.

ನನ್ನ ಲೇಖನದಲ್ಲಿ ಮಾಲಿಬ್ಡಿನಂ ಧಾತು (ಟ್ರೇಸ್ ಎಲಿಮೆಂಟ್) ವನ್ನು ಲಘು ಪೋಷಕಾಂಶ ಎಂದು ತಪ್ಪಾಗಿ ನಮೂದಿಸಿದ್ದೆ. ಅದು ಸರಿಯಲ್ಲ. ಅದು ಒಂದು ಧಾತು. ಆದರೆ ಕೃಷಿ ಆನ್ವಯಿಕ ವಿಜ್ಞಾನಿಗಳು ಪ್ರಕಟಿಸಿರುವ ಮಣ್ಣು ವಿಜ್ಞಾನ ಕುರಿತ ಪುಸ್ತಕಗಳಲ್ಲಿ ಅದನ್ನು ಲಘು ಪೋಷಕಾಂಶ ಎಂದೇ ನಮೂದಿಸುತ್ತಿದ್ದಾರೆ. ಉದಾಹರಣೆಗೆ, ಮಣ್ಣು ಪರೀಕ್ಷೆ, ಮಂಟಪ ಮಾಲೆ, ಕನ್ನಡ ವಿಶ್ವವಿದ್ಯಾಲಯ. ಮಾಲಿಬ್ಡಿನಂ, ಮಣ್ಣಿನಲ್ಲಿ ಸಹಜವಾಗಿ ಇರುತ್ತದೆ, ಉತ್ಪಾದಿಸಲು ಆಗುವುದಿಲ್ಲ ಎಂದಿದ್ದಾರೆ ಪ್ರತಿವಾದಿಗಳು. ಫ್ಯಾಕ್ಟರಿ ಕಟ್ಟಿ ಉತ್ಪಾದನೆ ಮಾಡಿ ಅಂತಾ ನಾನೆಲ್ಲಿ ಹೇಳಿದ್ದೆ? ಮಾಲಿಬ್ಡಿನಂ ಧಾತುವನ್ನು ಉತ್ಪಾದಿಸಲು ಆಗುವುದಿಲ್ಲವಾ?

## ಓ ಎನ್ನಬಾರದೆ... ಮರೆತು



ಬಿಳಿ ಅಂಗಿಯ
ಕರಿ ಮುಖದಲ್ಲಿ
ಇಟ್ಟ ಹಣೆ ಬೊಟ್ಟು
ತೊಟ್ಟಾದರೂ ನೀತಿ
ಇಟ್ಟಿತ್ತೆಂದು
ಕಂಡಿತ್ತು ನೋಡು

ಕಂಡವಗ ಕೈಮುಗಿದು
ನೇರ ನೇರ ಎಂದೇಳುತ್ತಲೇ
ಗರಗಸದ ನೆನಪ
ಆಳದ ಮಡುವಿಗೆ ದಬ್ಬಿ
ದಡದ ಮೇಲೆ ಬೊಬ್ಬಿಡುವ
ನಿನ್ನ ಜಾಣತನ
ಅದರೊಳಗಿನ ಹಗೆತನ
ಬೆಲ್ಲದೊಳಗಿನ ಬೆಂಚುಕಲ್ಲ ಕಡಿದಂತೆ
ಮೆದೆ ಹುಲ್ಲಲಿ ಮಲಗಿರೋ
ಕಾಳಸರ್ಪದಂತೆ
ದೂರ ದೂರ ಸರಿಸೋ ನಿನ್ನ ಚಾಳಿ
ಯಾರಿಗೆ ಸೈ ಹೇಳು

ಸಾವರಿಸಿಕೋ ಇನ್ನಾದರೂ
ಮೈಕೈ ಕೆಸರಾದರೂ
ಒಳಗಿರೋ ಆತ್ಮನ ಕರೆಗೊಮ್ಮೆ
ಓ ಎನ್ನಬಾರದೆ ಮರೆತು

**ರುದ್ರಪ್ಪ ಹನಗವಾಡಿ**
ನಂ. ೧೨, ಟೀಚರ್ಸ್ ಕಾಲೋನಿ, ಕೋರಮಂಗಲ, ಬೆಂಗಳೂರು – ೫೬೦ ೦೩೪

ಹಾಗಿದ್ದರೆ ಮಾಲಿಬ್ಡಿನಂ ಫಾರ್ಟಿಫೈಡ್ ಸೂಪರ್ ಫಾಸ್ಫೇಟ್ ಮುಂತಾದುವೆಲ್ಲಾ ಉತ್ಪಾದನೆಯಾಗುತ್ತಿವೆಯಲ್ಲವೆ? ಮಾಲಿಬ್ಡಿನಂ ನೈಸರ್ಗಿಕವಾಗಿ ಅಯಾನುಗಳ ರೂಪದಲ್ಲಿ ಘಟಿಸಬೇಕೆಂದರೆ ಕೆಲವು ಪೂರ್ವ ಷರತ್ತುಗಳಿವೆ: (ಅ) ಕೃಷಿ ಭೂಮಿಯ ಮೇಲ್ಮಣ್ಣು ಕೊಚ್ಚಣೆಯಾಗಿರಬಾರದು; (ಆ) ರಾಸಾಯನಿಕ ಪ್ರಧಾನ ಪೋಷಕಾಂಶ (ನೈಟ್ರೋಜನ್, ಫಾಸ್ಫರಸ್ ಮತ್ತು ಪೊಟ್ಯಾಷ್) ಒಳಸುರಿಗಳು ಮಣ್ಣಿನಲ್ಲಿ ಕಿರುಪೋಷಕಾಂಶಗಳು ಹಾಗೂ ಧಾತುಗಳ ನಡುವೆ ಪರಸ್ಪರ ವಿರೋಧಿ ಸ್ವಭಾವವನ್ನು ಪ್ರಚೋದಿಸಿರಬಾರದು. ಅಂದರೆ, ರಾಸಾಯನಿಕ ಒಳ ಸುರಿಗಳು ಫಸಲಿಗೆ ಅತ್ಯವಶ್ಯಕವಾದ ಕಿರುಪೋಷಕಾಂಶಗಳು ಮತ್ತು ಧಾತುಗಳು ಮಣ್ಣಿನಲ್ಲಿ ನೈಸರ್ಗಿಕವಾಗಿ ಘಟಿಸದಂತೆ ಅವುಗಳನ್ನು ಗಮನ ಮಾಡುತ್ತಿರುತ್ತವೆ (ಡಾ॥ ಹ್ಯೂಬರ್, ಪರ್ಡೂ ಯೂನಿವರ್ಸಿಟಿ). ಇದು ರಾಸಾಯನಿಕಗಳು, ಒಳಸುರಿಗಳು ಮಣ್ಣಿನಲ್ಲಿ ಪ್ರಚೋದಿಸಿರುವ ಮತ್ತು ಉಂಟುಮಾಡಿರುವ ಮುಚ್ಚಿಟ್ಟ ಹಸಿವು.

ಯಾವುದೇ ಪ್ರಮಾಣದ ರಾಸಾಯನಿಕ ಒಳಸುರಿಗಳು (ಎನ್.ಪಿ.ಕೆ., ಡಿ.ಎ.ಪಿ., ಯೂರಿಯಾ ಇತ್ಯಾದಿಗಳು), ಅಂದರೆ ಲೀಬಿಗ್‌ನ ಮ್ಯಾಕ್ರೊನ್ಯೂಟ್ರಿಯೆಂಟ್ ಥಿಯರಿಯಂತೆ, ಮಣ್ಣಿನಲ್ಲಿ ಕಿರುಪೋಷಕಾಂಶಗಳು ಘಟಿಸುವಂತೆ, ಬಿಡುಗಡೆಯಾಗದಂತೆ ತಡೆ ಒಡ್ಡುತ್ತವೆ ಮತ್ತು ಕಿರುಪೋಷಕಾಂಶ–ಧಾತುಗಳ ಅಯಾನುಗಳ ನಡುವೆ ವಿರೋಧಿ ಸ್ವಭಾವವನ್ನು ಉಂಟುಮಾಡುತ್ತವೆ. ಉದಾಹರಣೆಗೆ, ರಾಸಾಯನಿಕ ಸ್ಥಿತಿಯಲ್ಲಿ ಮಣ್ಣಿನ ಕ್ಯಾಲ್ಸಿಯಂ ಪ್ರಮಾಣ ಪ್ರಾಬಲ್ಯ ಸಾಧಿಸಿದರೆ ಕಬ್ಬಿಣದ ಅಯಾನುಗಳು ಇಲ್ಲದಂತಾಗುತ್ತವೆ, ಅಥವಾ ಕಬ್ಬಿಣದ ಅಯಾನುಗಳು ಪ್ರಾಬಲ್ಯ ಸಾಧಿಸಿದರೆ ಕ್ಯಾಲ್ಸಿಯಂ ಇಲ್ಲದಂತಾಗುತ್ತದೆ. ಮಾಲಿಬ್ಡಿನಂ ಧಾತು ಮಣ್ಣಿನಲ್ಲಿ ಸಹಜವಾಗಿ ಫಲಿಸಬೇಕೆಂದರೆ ಮಣ್ಣಿನ ಭೌತಿಕ ಸಂರಚನೆ, ಮಣ್ಣಿನ ನೆಯ್ಗೆ, ಆದರ್ಶ ಸ್ಥಿತಿಯಲ್ಲಿರಬೇಕು. ಮಣ್ಣಿನಲ್ಲಿರುವ ಶಿಲಾಕಣಗಳು ಬೇಸಿಗೆಯಲ್ಲಿ ಬಿಸಿಲಿನಿಂದ, ಚಳಿಗಾಲದಲ್ಲಿ ಹಿಮದಿಂದ ಮತ್ತು ಮಳೆಗಾಲದಲ್ಲಿ ಮಳೆಯಿಂದ ಆಯಾ ಋತುಗಳು ಉಂಟುಮಾಡುವ ಶಿಥಿಲತೆಗೆ ಮೈಯೊಡ್ಡಿರಬೇಕು. ಮಳೆಗಾಲದಲ್ಲಿ ಮಣ್ಣಿನ ಶಿಲಾಕಣಗಳ ಸುತ್ತಲೂ ಪಾಚಿ ಬೆಳೆದು ಎಂತಹ ಕಠಿಣ ಶಿಲೆಗಳನ್ನು ಕೂಡ ಶಿಥಿಲಗೊಳಿಸಿ ಈ ಮೂಲಕ ಮಾಲಿಬ್ಡಿನಂ ಧಾತುವನ್ನು ಅಯಾನುಗಳ ರೂಪದಲ್ಲಿ ಬಿಡುಗಡೆಗೊಳಿಸುತ್ತಿರುತ್ತದೆ.

ಅಮೆರಿಕದ ಪ್ರಭುತ್ವ ವಿಯೆಟ್ನಾಂ ಮೇಲೆ ಯುದ್ಧ ಮಾಡಿತು. ವಿಯೆಟ್ನಾಮಿನ ಮ್ಯಾಂಗ್ರೋವ್ ವೃಕ್ಷಗಳ ಮೇಲೆ 'ಗ್ಲೈಸೋಫೇಟ್' ಎಂಬ ಉರಿ ರಾಸಾಯನಿಕವನ್ನ ವ್ಯೋಮದಿಂದ ಸಿಂಪಡಿಸಿತು. ಈ ಯುದ್ಧದಲ್ಲಿ ಅಮೆರಿಕ ಗೆಲ್ಲಲಿಲ್ಲ, ಆದರೆ ಅಪಾರ ಪ್ರಮಾಣದ 'ಗ್ಲೈಸೋಫೇಟ್' ಉರಿ ರಾಸಾಯನಿಕ ಮಿಕ್ಕುಹೋಗಿತ್ತು. ಅಮೆರಿಕದ ಕಾರ್ಪೊರೇಟ್ ಎಫಿಷಿಯೆನ್ಸಿ ರಾಕ್ಷಸ ಸ್ವರೂಪದ್ದು (ಈ ರಾಕ್ಷಸ ಪ್ರವೃತ್ತಿಯೇ ದಕ್ಷಿಣ ಅಮೆರಿಕದ ಮೂವರು ಪ್ರತಿಭಾವಂತ ಕವಿಗಳನ್ನ ಕೊಂದುಹಾಕಿತು); ಕವಿಗಳನ್ನು ಕೊಂದ ದೇಶದ ಮೊನ್ಸಾಂಟೊ ಕಂಪನಿ ಮಿಕ್ಕು ಹೋದ 'ಗ್ಲೈಸೋಫೇಟ್' ರಾಸಾಯನಿಕವನ್ನ 'ರೌಂಡ್ ಅಪ್' ಮತ್ತು 'ಆಲ್ ಕ್ಲಿಯರ್' ಎಂಬ ಲೇಬಲ್ಲು ಹಚ್ಚಿ ಅಭಿವೃದ್ಧಿಶೀಲ ದೇಶಗಳಿಗೆ ಮಾರಾಟ ಮಾಡುತ್ತಿದೆಯೆಂದು ಅಮೆರಿಕಾದ ಯೂನಿಯನ್ ಆಫ್ ಕನ್ಸರ್ನ್ಡ್ ಸೈಂಟಿಸ್ಟ್ಸ್ ಹೇಳಿದೆ. ನಮ್ಮ ದೇಶದ ಮಣ್ಣಿನಲ್ಲಿ ಮಣ್ಣು ಮತ್ತು ಫಸಲಿನ ನಡುವೆ ಸಾಂಗತ್ಯ ಸಂಬಂಧಿಯಾಗಿದ್ದ ಮೈಸೀರಿಯಂ ಶ್ವೇತ ವೃಕ್ಷ ಒಣಗಿಹೋಗುತ್ತಿದೆ; ಅಂದರೆ ತಾರ್ಕಿಕವಾಗಿ ಅಮೆರಿಕ ಅಭಿವೃದ್ಧಿಶೀಲ ದೇಶಗಳ ಮೇಲೆ ಒಂದು ಜೈವಿಕ ಯುದ್ಧದಲ್ಲಿ

ನಿರತವಾಗಿದೆ; ಸ್ನೇಹದ ಕೈಕೊಟ್ಟು ಕೈ ನುಲುಚುತ್ತಿದೆ.

ಫಸಲುಗಳಿಗೆ ಮುತ್ತುವ ಕೀಟಗಳು, ಆ ಕೀಟಗಳನ್ನ ಭಕ್ಷಿಸಲು ಬರುವ ನೈಸರ್ಗಿಕ ಶತ್ರು ಕೀಟಗಳು ಮತ್ತು ಪಶುಪಕ್ಷಿಗಳ ನಡುವಿನ ಆಹಾರ ಸರಪಳಿ ಮತ್ತು ಸಮತೋಲನದ ಕತೆ ಅಮೋಘವಾಗಿದೆ. ಡಾ॥ ರ‍್ಯಾಫೆಲ್ ಕಾರ್ಲ್‌ಸನ್ ಎಂಬ ಮಹಿಳಾ ವಿಜ್ಞಾನಿ 'ಸೈಲೆಂಟ್ ಸ್ಪ್ರಿಂಗ್' ಎಂಬ ಪುಸ್ತಕ ಬರೆದು ಜಗತ್ತಿನ ಕಣ್ಣು ತೆರೆಸುವ ತನಕ ವಿಶ್ವ ಆರೋಗ್ಯ ಸಂಸ್ಥೆ ಡಿ.ಡಿ.ಟಿ. ಎಂಬ ಹೈಡ್ರೊ ಕಾರ್ಬನ್ ಆಧಾರಿತ ಕೀಟನಾಶಕವನ್ನ ನಿಷೇಧಿಸಿರಲಿಲ್ಲ; ಆದರೆ ಇದು ಭಾರತದಲ್ಲಿ ಈಗಲೂ ಹೇರಳವಾಗಿ ಸಿಗುತ್ತಿದೆ. ಇದು ಸತ್ಯ. ಅಮೆರಿಕದ ಶೇಕಡ ೯೦ರಷ್ಟು ತಾಯಂದಿರ ಎದೆಹಾಲಿನಲ್ಲಿ ಡಿ.ಡಿ.ಟಿ. ಪತ್ತೆಯಾಗಿದೆ ಎಂದು "ಸೀಕ್ರೆಟ್ ಆಫ್ ದ ಸಾಯಿಲ್"ನಲ್ಲಿ ಪೀಟರ್ ಥಾಂಪ್‌ಕಿನ್ಸ್ ಮತ್ತು ಕ್ರಿಸ್ಟಾಫರ್ ಬರ್ಡ್ ದಾಖಲಿಸಿದ್ದಾರೆ.

* * *

ಸಸ್ಯಗಳಿಗೆ ತಾಕುವ ಅನೇಕ ರೋಗಗಳ ಪೈಕಿ ಬಹಳಷ್ಟು ಅಜೈವಿಕ ರೋಗಗಳು. ಅಂದರೆ ಈ ರೋಗಗಳು ಮಣ್ಣಿನಲ್ಲಿನ ಪೋಷಕಾಂಶಗಳಲ್ಲಿ ಧಾತುಗಳ ಕೊರತೆ ಅಥವಾ ಕಿರು ಪೋಷಕಾಂಶಗಳ ನಡುವಿನ ವಿರೋಧಿ ಸ್ವಭಾವದಿಂದ ಉಂಟಾಗುವ ಮಣ್ಣುಜನಕ ರೋಗಗಳು. ಸಸ್ಯಗಳಿಗೆ ರೋಗ ಎಲ್ಲಿಂದಲೋ ಬಂತೆಂದು ತಪ್ಪು ತಿಳಿದ ರೈತರು ಒಂದೋ ದೇವರಿಗೆ ಮನಿ ಆರ್ಡರ್ ಕಳಿಸುತ್ತಾರೆ ಇಲ್ಲವೇ ರೋಗನಾಶಕ ರಾಸಾಯನಿಕಗಳ ಅಂಗಡಿಗಳಿಗೆ ಹೋಗುತ್ತಾರೆ. ಯಾವ ಪೆಸ್ಟಿಸೈಡ್ ಮಿಕ್ಕುಹೋಗಿರುತ್ತದೋ ಅದನ್ನು ಸಾಗುಹಾಕಿ ವ್ಯಾಪಾರಿ ಲಾಭ ಮಾಡಿಕೊಳ್ಳುತ್ತಾನೆ. ಹೀಗಿರುವಾಗ "ಕ್ರಿಮಿನಾಶಕ ಸಿಂಪಡಿಸುವಾಗ ಸುರಕ್ಷತಾ ಕ್ರಮಗಳನ್ನ ಕೈಗೊಳ್ಳಬೇಕು" ಎಂದರೆ ಪರಿಹಾರ ದೊರಕೀತೆ?

* * *

ಪ್ರತಿವಾದಿ ಲೇಖಕರು ಲೀಬಿಗ್‌ನ ಸಂಶೋಧನೆ ಆರಂಭಿಕವಾಗಿ ಮಹತ್ವದ್ದು ಎನ್ನುತ್ತಾರೆ. ಆದರೆ ಮಣ್ಣು, ಫಲವಂತಿಕೆ ವಿಜ್ಞಾನ ತನ್ನ ಚರಿತ್ರೆಯ ವಿವಿಧ ಹಂತಗಳಲ್ಲಿ ಏಕದೃಷ್ಟಿಯ ತನಿಖೆಯಾಗಿತ್ತು; ಲೀಬಿಗ್ ರಾಸಾಯನಿಕ ದೃಷ್ಟಿಗೆ ಸೀಮಿತಗೊಂಡ, ಉಕ್ರೇನಿನ ಫಲವತ್ತಾದ ಕಪ್ಪುಮಣ್ಣಿನ ಬಗ್ಗೆ ಸೋಜಿಗಪಟ್ಟಿದ್ದ. ರಷ್ಯನ್ನರು ಅಂತಹ ಮಣ್ಣಿನ ವಿಕಾಸಕ್ಕೆ ಕಾರಣವಾದ ಪೋಷಕ ಪದಾರ್ಥಗಳು, ಅಂದರೆ ಮಣ್ಣಿನಡಿಯ ಶಿಲಾಪದರಗಳ ಮೇಲೆ ಮಾತ್ರ ಸಂಶೋಧನೆ ನಡೆಸುತ್ತಿದ್ದರು. ಈ ಎಲ್ಲವೂ ಮಹತ್ವದವೇ; ಆದರೆ ಮಣ್ಣು ವಿಜ್ಞಾನ ಪೂರ್ಣವಾಗಿ ಅನಾವರಣಗೊಳ್ಳಲು ಅದು ಆಲ್‌ಬ್ರೆಕ್ಟ್ ಮತ್ತು ಆಲ್ಬರ್ಟ್ ಹೊವಾರ್ಡ್‌ರ ತನಕ ಕಾಯಬೇಕಾಯಿತು. ೧೯೩೦–೪೦ರ ವೇಳೆಗಾಗಲೇ ಆಲ್ಬರ್ಟ್ ಹೊವಾರ್ಡ್ ತಮ್ಮ ಸಂಶೋಧನಾ ಫಲಿತಾಂಶಗಳನ್ನ ಪ್ರಚುರಪಡಿಸಿದ್ದ. ೧೯೬೦ರಲ್ಲಿ ಭಾರತದಲ್ಲಿ ಹಸಿರುಕ್ರಾಂತಿಯ ಆರಂಭದ ವೇಳೆಗೆ ಆತನ ಮತ್ತು ಆಲ್‌ಬ್ರೆಕ್ಟ್‌ರ ಮಣ್ಣಿನ ಬಹುವಿಧ ಜೀವಸಂಕುಲ–ಆಹಾರ ಸರಪಳಿ ಸಿದ್ಧಾಂತ ಪರಿಪೂರ್ಣ ಜೀವದ ತೇರಾಗಿ ಕಂಗೊಳಿಸುತ್ತಿದ್ದರೂ ಭಾರತೀಯ ಕೃಷಿ ವಿಜ್ಞಾನಿಗಳು ಲೀಬಿಗ್‌ನ ಅಪರಿಪೂರ್ಣ ರಥ ಹತ್ತಿದ್ದು ಯಾಕೆ ಎಂಬುದು ನನ್ನ ಪ್ರಮುಖ ಪ್ರಶ್ನೆ ಮತ್ತು ಸಂದೇಹ.

ಮುಖ್ಯವಾಗಿ ಗಮನಿಸಬೇಕಾದ ಒಂದು ಅಂಶವಿದೆ: ನೈಸರ್ಗಿಕವಾಗಿ ಸಂಭವಿಸುವ ಈ ವಿದ್ಯುದ್ವಾಹಿ ಅಯಾನು ಬಿಡುಗಡೆ ಸರಪಳಿ ಕ್ರಿಯೆ ಸೌಮ್ಯಾತಿಸೌಮ್ಯ ಸ್ವರೂಪದ್ದು, ಆದರೆ ರಾಸಾಯನಿಕ ಒಳ ಸುರಿಗಳು ಈ ಸೌಮ್ಯಸ್ವರೂಪಿ ಅಯಾನು ಬಿಡುಗಡೆ ಸರಪಳಿ ಕ್ರಿಯೆಯನ್ನು ರೌದ್ರ ಸ್ವರೂಪಿಯಾಗಿಸುತ್ತದೆ. ಈ ರೌದ್ರ ಸ್ವರೂಪಿಯಾದ ಅಯಾನಿಕ್ ವಿನಿಮಯ ಸರಪಳಿ ವಿದ್ಯುದ್ವಾಹಿ ಕ್ರಿಯೆ, ಸಸ್ಯಗಳಿಗೆ ಅವಶ್ಯಕವಾದ ಲಘು ಪೋಷಕಾಂಶಗಳು ಮತ್ತು ಧಾತುಗಳನ್ನ ದಮನಿಸುವುದರ ಜೊತೆಗೆ ಮೇಲ್ಮಣ್ಣಿನಲ್ಲಿರುವ ಕಿರುರಂಧ್ರಗಳು ಮತ್ತು ಹಿರಿರಂಧ್ರಗಳನ್ನ ಸ್ಫೋಟಿಸಿ ಧ್ವಂಸ ಮಾಡುತ್ತದೆ. ಮಣ್ಣಿನಲ್ಲಿ ರಾಸಾಯನಿಕಗಳು ಉಂಟುಮಾಡುವ ಈ ಸ್ಫೋಟಕ ಸರಪಳಿ ಕ್ರಿಯೆಯನ್ನು ಕೆಲವು ಮಣ್ಣು ವಿಜ್ಞಾನಿಗಳು ಮೈಕ್ರೊಸ್ಕೋಪಿಕ್ ಎಕ್ಸ್‌ಪ್ಲೋಷನ್ಸ್ ಎಂಬುದಾಗಿ ವಿವರಿಸುತ್ತಾರೆ.

ಹಿಂದೊಮ್ಮೆ ಹಸಿರುಕ್ರಾಂತಿ ಕಾಲದ ಹಳೆಯ ಪಂಪ್‌ಹೌಸಿನ ಒಳಗೆ ತುಂಬಿದ್ದ ಪೆಸ್ಟಿಸೈಡ್‌ನ ಖಾಲಿ ಬಾಟಲುಗಳ ನಡುವೆ ತೆಕ್ಕೆ ಹೊಯ್ದುಕೊಂಡು ಮಲಗಿದ್ದ ಘಟ ಸರ್ಪವೊಂದನ್ನು ಹೊರಗೆ ಓಡಿಸಿ, ಪೆಸ್ಟಿಸೈಡ್ ಟಿನ್ನುಗಳನ್ನ ಮೂಟೆ ತುಂಬಿಟ್ಟು, ದುರಸ್ತಿ ಮಾಡಿಕೊಂಡ ನಮ್ಮ ಕಚೇರಿಯ ಮುಂದೆ ಬೆಂಕಿ ಉರಿಸುತ್ತಾ ಕುಳಿತಿದ್ದೆವು. ಆಗ ಅನೇಕ ಕೃತಕ ದೇಹದ ಸಂಗತಿಗಳು ನಮ್ಮ ಗಮನಕ್ಕೆ ಬಂದಿದ್ದವು. ಸತತವಾಗಿ ರಾಸಾಯನಿಕ ಗೊಬ್ಬರಗಳನ್ನು ಮಾತ್ರ ಬಳಸಲಾಗಿರುವ ಫಸಲು ತಾಕುಗಳು ಹೆಚ್ಚು ನೀರಾವರಿ ಆವರ್ತನೆಗಳನ್ನು ಬಯಸುತ್ತವೆ. ರಾಸಾಯನಿಕಗಳ ಜೊತೆಗೆ ಮೂರನೆ ದರ್ಜೆಯ ಕೊಟ್ಟಿಗೆ ಗೊಬ್ಬರ ಬಳಸಿದ ತಾಕುಗಳಲ್ಲಿ ಐದು ದಿನಗಳಿಗೊಮ್ಮೆ ನೀರಾವರಿ ಬೇಕಾಗುತ್ತದೆ. ಇಂಗಾಲ–ಸಾರಜನಕ ಅನುಪಾತದ ಅಂದರೆ ಸಗಣಿ ಜೊತೆಗೆ, ಹಸಿರೆಲೆ ಮತ್ತು ತರಗು ಮಿಶ್ರಣ ಮಾಡಿ ತಯಾರಿಸಿದ್ದ ಉತ್ತಮ ದರ್ಜೆಯ ಕಾಂಪೋಸ್ಟ್ ಬಳಸಿದ್ದ ಫಸಲು ತಾಕುಗಳು ಮಳೆ ಬಾರದಿದ್ದರೂ, ನೀರುಣಿಸದಿದ್ದರೂ ೧೨ ದಿನಗಳ ಕಾಲ ತಾಳಿಕೆ ತೋರಿವೆ ಮತ್ತು ಫಸಲು ಬಾಡುವುದಿಲ್ಲ. ಸಂಪೂರ್ಣ ಇಂಗಾಲ ಸಾರಜನಕ ಗೊಬ್ಬರ, ಎರೆಗೊಬ್ಬರ ಮತ್ತು ಹಿಂಡಿಗಳನ್ನು ಬಳಸಿದ ತಾಕುಗಳೂ ೧೫ ದಿನಗಳ ದೀರ್ಘಕಾಲದ ತನಕ ತಾಳಿಕೆ ತೋರಿವೆ. ಇಂಗಾಲ ಸಾರಜನಕ ಅನುಪಾತದ ಗೊಬ್ಬರ ಮಣ್ಣಿನಲ್ಲಿ ವಿವಿಧ ಅಳತೆ–ಆಕಾರದ ಕಿರುರಂಧ್ರಗಳನ್ನು ಸೃಷ್ಟಿಸಿ ಮಣ್ಣನ್ನು ದೀರ್ಘಕಾಲ ತಂಪಾಗಿಟ್ಟಿರುತ್ತದೆ; ಇದರಲ್ಲಿ ಮಣ್ಣಿನ ತೇವ ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯ ಹೆಚ್ಚು. ರಾಸಾಯನಿಕ ಗೊಬ್ಬರಗಳನ್ನು ಬಳಸಿದ ಮಣ್ಣಿನಲ್ಲಿ ರೌದ್ರ ಸ್ವರೂಪಿಯಾದ ಸರಪಳಿ ಸ್ಫೋಟಕ ಕ್ರಿಯೆಗಳು ಮತ್ತು ಈ ಮೂಲಕ ಸಂಭವಿಸುವ ಎರ‍್ರಾಬಿರ‍್ರಿ ಅಯಾನಿಕ್ ಸರಪಳಿ ಕ್ರಿಯೆ ಮಣ್ಣಿನ ರಂಧ್ರಗಳನ್ನು ಮುಚ್ಚಿಹಾಕಿರುತ್ತದೆ ಮತ್ತು ಇಂತಹ ಮಣ್ಣಿನಲ್ಲಿ ತೇವ ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯ ತುಂಬ ಕುಗ್ಗಿರುತ್ತದೆ.

ಮೊದಲಿಗೆ ಭಾರತದಲ್ಲಿ ಯೂರಿಯಾ (ಅಮೋನಿಯಂ ಸಲ್ಫೇಟ್) ಕೃಷಿ ತಾಕುಗಳಲ್ಲಿ ವ್ಯಾಪಕವಾಗಿ ಬಳಕೆಗೆ ಬಂದದ್ದು ೧೯೭೭ರ ಆಜುಬಾಜಿನಲ್ಲಿ. ರಾಜಸ್ಥಾನದ ಪರಮಾಣು ಸ್ಥಾವರಕ್ಕೆ ಶಾಖ ನಿರೋಧಕವಾಗಿ ಭಾರ ಜಲ ತಯಾರಿಸಲು ಗುಜರಾತಿನಲ್ಲಿ ಸ್ಥಾಪಿಸಲಾಗಿದ್ದ ಘಟಕಗಳಿಂದ ಭಾರೀ ಪ್ರಮಾಣದ ಅಮೋನಿಯಂ ಸಲ್ಫೇಟ್ ರಾಶಿ ಬೀಳತೊಡಗಿ, ಇದು ಸರ್ಕಾರಕ್ಕೆ ತಲೆನೋವಾಗಿ ಪರಿಣಮಿಸಿತ್ತು. ಈ ಅಮೋನಿಯಂ ಸಲ್ಫೇಟನ್ನ ಮರುಸಂಸ್ಕರಣೆಗೆ ಒಳಪಡಿಸಿ ಹರಳುಗಟ್ಟಿಸಿ ಕೃಷಿ ಭೂಮಿಗಳತ್ತ ಟ್ರಕ್ಕುಗಳನ್ನು ಓಡಿಸಲಾರಂಭಿಸಿ ಬಿಟ್ಟಿತು! ಭಾರತದ ಭೂಮಿಯಲ್ಲಿ ಇತ್ತೀಚೆಗೆ ಸಂಭವಿಸಿದ ಭಯೋತ್ಪಾದಕ ಸ್ಫೋಟಕ ದುರ್ಘಟನೆಗಳಲ್ಲಿ ಯೂರಿಯಾ ಬಳಕೆಯಾಗಿರುವುದು ಪೊಲೀಸರ ದಾಖಲೆಗಳಲ್ಲಿದೆ. ಅಮೆರಿಕದಲ್ಲೂ ಇಂತಹದೊಂದು ಯೂರಿಯಾ ಭಯೋತ್ಪಾದಕ ಸ್ಫೋಟಕ ದುರ್ಘಟನೆ ಕೆಲವು ವರ್ಷಗಳ ಹಿಂದೆ ವರದಿಯಾಗಿತ್ತು.

ಬಿಕನೇರ್‌ನ ರೀಜನಲ್ ಕ್ಯಾನ್ಸರ್ ಸೆಂಟರ್ ಪಂಜಾಬಿನ ಹಸಿರುಕ್ರಾಂತಿ ವಲಯಗಳಲ್ಲಿ ತಲೆದೋರಿರುವ ಕ್ಯಾನ್ಸರ್ ರೋಗಗಳ ಬಗ್ಗೆ ವಿಶೇಷ ಅಧ್ಯಯನ ಕೈಗೊಂಡಿದೆ. ಈ ಕ್ಯಾನ್ಸರ್ ಬಗೆಗಿನ ಈ ವಿಶೇಷ ಅಧ್ಯಯನ ಉಪದ್ರವ ವಿಶಿಷ್ಟ ಶಾಸ್ತ್ರದ (ಎಪಿಡಮಾಲಜಿ) ಅನ್ವಯವಾಗೇ ನಡೆಯಬೇಕು. ಈ ಅಧ್ಯಯನ ಅಲ್ಲಿನ ನೀರಿನಲ್ಲಿ ಇರಬಹುದಾದ ಯುರೇನಿಯಂ, ಮಣ್ಣಿನಲ್ಲಿ ಬಳಕೆಯಾಗಿರುವ ರಾಸಾಯನಿಕಗಳು, ರೇಡಿಯೊ ಮೈಮೆಟಿಕ್ ಸ್ವಭಾವದ ಪೆಸ್ಟಿಸೈಡ್ ಬಳಕೆ ಪ್ರಮಾಣ, ತಂಬಾಕು ಬಳಕೆ, ರೋಗಿಗಳ ಆಹಾರ ಸಂಸ್ಕೃತಿ ಈ ಎಲ್ಲವನ್ನೂ ಕಂಟ್ರೋಲ್ ವಿಧಾನದಲ್ಲಿ ಪರಿಶೀಲಿಸುತ್ತದೆ. ಮಂಡ್ಯ, ಗಂಗಾವತಿ, ದಾವಣಗೆರೆ, ತಮಿಳುನಾಡಿನ ತಂಜಾವೂರು ಮುಂತಾದ ನದಿ ಅಚ್ಚುಕಟ್ಟು ಪ್ರದೇಶಗಳಲ್ಲಿ ಕ್ಯಾಡ್ಮಿಯಂ ಮತ್ತು ಲೆಡ್ ಭಾರಲೋಹಗಳೂ ಪತ್ತೆಯಾಗಿವೆ. ಕರ್ನಾಟಕದ ೩೬,೬೭೭ ಕೆರೆಗಳ ಪೈಕಿ ಶೇಕಡ ೭೫ರಷ್ಟು ಕೆರೆಗಳು ಪೋಷಕಾಂಶ ಸಾಂದ್ರತೆಗೆ ಒಳಗಾಗಿವೆ. ಪಶ್ಚಿಮ ಬಂಗಾಳ ಮತ್ತು ಬಾಂಗ್ಲಾದೇಶಗಳ ಕೆಸರು ಗದ್ದೆಗಳಲ್ಲಿ ಅರ್ಸೆನಿಕ್ ಪತ್ತೆಯಾಗಿರುವುದು ಒಂದು ಕಹಿ ಸತ್ಯ. ವೈಜ್ಞಾನಿಕ ಕಹಿ ಸತ್ಯಗಳನ್ನು ತಿರುಚುವ ಯಾವುದೇ ತುರ್ತು ನನಗಿಲ್ಲ; ಹಿಡನ್ ಅಜೆಂಡಾ ಇಟ್ಟುಕೊಂಡಿರುವ ಸಾರ್ಥದ ಭೈರಪ್ಪ ಮತ್ತು ಸಂಘಪರಿವಾರದ ಸ್ವಾರ್ಥಿ ಮಹಿಷಾಸುರರು ಹಾಗೆ ಮಾಡುತ್ತಿರಬಹುದು.

ಎಲ್. ಸಿ. ನಾಗರಾಜ್
'ಕಾಡುಮನೆ', ಮಂಟನ ಕುರ್ಚಿ, ಸೊಂಡೇಕೊಪ್ಪ ಅಂಚೆ
ನೆಲಮಂಗಲ ತಾಲೂಕು, ಬೆಂಗಳೂರು ಗ್ರಾಮೀಣ – ೫೬೨ ೧೨೩

# ಕತೆಗಳಲ್ಲೊಂದು ತಾತ್ವಿಕತೆ







ಕೃತಿ : **ಹಕ್ಕಿ ಚೆಲ್ಲಿದ ಬೀಜ**
ಲೇಖಕರು : **ಸಿ. ಎನ್. ರಾಮಚಂದ್ರ**
ಬೆಲೆ : ರೂ. 70

ಪ್ರಕಾಶನ : **ಸುಮುಖ ಪ್ರಕಾಶನ**
ನಂ. 174 ಇ/28, 1ನೇ ಮಹಡಿ, ವಿದ್ಯಾರಣ್ಯ ನಗರ
ಬೆಂಗಳೂರು – 560 023

**ಭಾರತೀ ಕಾಸರಗೋಡು**

**ಹ**ಕ್ಕಿ ಚೆಲ್ಲಿದ ಬೀಜ ಒಂದು ಕವನದ ಸಾಲಿನಂತಿರುವ ಶೀರ್ಷಿಕೆಯನ್ನು ಹೊಂದಿರುವ ಈ ಕಥಾಸಂಗ್ರಹ, ಅರ್ಥಗರ್ಭಿತ ಆಶಯಗಳನ್ನು ಒಳಗೊಂಡಿದ್ದು ಕಥಾವಸ್ತುವಿನ ಆಯ್ಕೆಗಳು ಕೂಡ ವಿಭಿನ್ನವಾಗಿವೆ. ನಿರೂಪಣಾ ಧಾಟಿಯೂ ಅಪರೂಪದ್ದೇ ಆಗಿದೆ. ಶ್ರೀ ಸಿ. ಎನ್. ರಾಮಚಂದ್ರ ಬರೆದಿರುವ ಈ ಪುಸ್ತಕದಲ್ಲಿ ಒಟ್ಟು ಒಂಬತ್ತು ಕತೆಗಳಿವೆ. ಇಲ್ಲಿನ ಕತೆಗಳಲ್ಲಿ ಮೂಲೆ ಗುಂಪಾಗುತ್ತಿರುವ ಮಾನವೀಯ ಮೌಲ್ಯಗಳ ಬಗ್ಗೆ, ಹಾಗೆಯೇ ಭೂತಾಕಾರವಾಗಿ ರಾರಾಜಿಸುತ್ತಿರುವ ಅಪಮೌಲ್ಯಗಳ ಬಗ್ಗೆ ತೀವ್ರ ತುಡಿತಗಳಿವೆ. ಇವೆಲ್ಲವನ್ನು ಕತೆಗಾರರು ದೂರದಿಂದ ನಿರ್ಲಿಪ್ತವಾಗಿ ಗಮನಿಸುತ್ತಾ, ಅಷ್ಟೇ ನಿರ್ಭಾವುಕನಾಗಿ ಹೆಣೆಯುತ್ತಾ ಹೋದರೂ, ಸಂಸ್ಕೃತಿ–ಸಂಸ್ಕಾರಗಳು ವಿರೂಪಗೊಳ್ಳುತ್ತಿರುವುದರ ಬಗ್ಗೆ, ಕೆಲವೊಮ್ಮೆಯಂತೂ ಹೇಳಹೆಸರಿಲ್ಲದಂತೆಯೇ ನಿರ್ನಾಮವಾಗಿ ಬಿಡುತ್ತಿರುವುದರ ಬಗ್ಗೆ, ಕತೆಗಾರರಿಗೆ ನಿರಾಶೆಯಿದೆ. "ಮಾಡೋದೇನು ? ನಿರೀಕ್ಷಿತ–ಅನಿರೀಕ್ಷಿತ, ಹಾಗೆಯೇ, ಸಹನೀಯ – ಅಸಹನೀಯ ಸಂಭಾವ್ಯಗಳೆಲ್ಲವನ್ನೂ ಇಷ್ಟವಿರಲಿ ಬಿಡಲಿ ಒಪ್ಪಿಕೊಳ್ಳುತ್ತಲೇ ಬದುಕು ಸಾಗಬೇಕಲ್ಲ ?" ಅನ್ನುವಂಥ ಒಂದು ಹತಾಶಧ್ವನಿ ಅಪ್ರಕಟಿತವಾಗಿ ಅಲ್ಲಲ್ಲೇ ಭಾಸವಾದರೂ, "ಇಲ್ಲ ಇಲ್ಲ ! ಹೀಗಾಗಬಾರದಿತ್ತು. ಮಾನವೀಯತೆಗೆ ಸ್ವಲ್ಪವಾದರೂ ತಾಣವಿರಬೇಕಿತ್ತು" ಅನ್ನುವುದು ಇಲ್ಲಿನ ನಿಜವಾದ ಅಂತಃಕರಣ. ಈ ಇಂಥ ಅಂತಃಕರಣ ಕೂಡ ಮುಸುಕಿನೊಳಗಿಂದಲೇ ಮಾತಾಡುತ್ತದೆ ! ವಾಸ್ತವವಾಗಿ ಕತೆಗಾರರ ಇಂಥ ವಿಶಿಷ್ಟ ಅಂತಃಕರಣವೇ ಇಲ್ಲಿನ ಕತೆಗಳನ್ನು ನಮಗೆ ಹೇಳುವುದು !

ನನಗೆ ತುಂಬ ಇಷ್ಟವಾದ ಕತೆ 'ಹುತ್ತಗಟ್ಟಿತು ಚಿತ್ತ' ನಾಗವೇಣಿ ಇಲ್ಲಿನ ಕಥಾನಾಯಕಿ. ಎಂಥ ಪಾಪದ ಹುಡುಗಿ ಇವಳು ! ಒಂದು ರೀತಿಯಲ್ಲಿ ಈಕೆ ಇಂದಿನ ನಮ್ಮ ಅನೇಕ ಶೋಷಿತ ಮಹಿಳೆಯರ ಧ್ವನಿಯೇ ಆಗಿದ್ದಾಳೆ. ಆಕೆಯ ಶೋಷಣೆಯ ಬಗೆಯಾದರೂ ಎಂಥದ್ದು ! ಗಂಡನೇನೂ ಅವಳನ್ನು ಹೊಡೆಯುವುದಿಲ್ಲ. ಆದರೆ... ಅವಳ ಭಾವನೆಗಳನ್ನೇ ಸಾರಾಸಗಟಾಗಿ ನಿರಾಕರಿಸಿಬಿಡುತ್ತಾನೆ ! ದಾಂಪತ್ಯ ಸಂಬಂಧಗಳ ವಿಷಯವಾಗಿ ಅವನಿಗೆ ಕಲ್ಪನೆಯೇ ಇಲ್ಲ; ಕರ್ತವ್ಯಗಳೂ ಇಲ್ಲ. "ಗಂಡು–ಹೆಣ್ಣು ಮದುವೆಯಾದ ಮೇಲೆ ಒಬ್ಬರನ್ನೊಬ್ಬರು ಪ್ರೀತಿಸುತ್ತಾರಂತೆ ! ನಾನು–ನೀನು ಒಂದೇ ಅನ್ನುವಂಥ ಅನ್ಯೋನ್ಯ ಭಾವನೆಯೇ ಬೆಳೆದುಬಿಡುತ್ತದಂತೆ !" ಎಂದೆಲ್ಲ ಈ ಹುಡುಗಿ ಕೇಳಿ ತಿಳಿದಿದ್ದಳು. ಆದರೆ ಸ್ವತಃ ಅವಳ ಬದುಕಿನಲ್ಲಿ ಇಂಥದೊಂದು ಸಂಭವಿಸಲೇ ಇಲ್ಲ ! ಅವಳ ಹೆಣ್ತನದ ಮಾಧುರ್ಯ, ಸಾಂಗತ್ಯಕ್ಕಾಗಿ ಹಂಬಲಿಸಿ ಹಂಬಲಿಸಿ ಒಸರಿದ ಜೀವರಸಗಳು, ನಿಷ್ಕಾರುಣವಾಗಿ ಒಣಗಿಹೋಗುತ್ತವೆ. ಜೀವನದುದ್ದಕ್ಕೂ ನಿರಾಶೆ, ಭೀತಿ, ಅವಮಾನ, ಆಕ್ರೋಶಗಳೇ ತುಂಬಿ ನಲುಗಿಸಿಬಿಡುತ್ತವೆ. ಆದರೂ ಸೋಲೊಪ್ಪಿಕೊಳ್ಳುವವಳಲ್ಲ ಈ ಹೆಣ್ಣು. ಅವ ಹ್ಯಾಗೋ ಹುಟ್ಟಿಸಿಟ್ಟ ಎರಡು ಮಕ್ಕಳಿಗೇ ಗಟ್ಟಿಯಾಗಿ ಆತುಕೊಳ್ಳುತ್ತಾಳೆ. "ತನ್ನ ಬದುಕೇನಿದ್ದರೂ ತನ್ನ ಮಕ್ಕಳು... ಅವನಂತೆ ಇವರಾಗಬಾರದು" ಎಂದು ಹಟ ತೊಡುತ್ತಾಳೆ. ಕೆಲಸಕ್ಕೆ ಸೇರುತ್ತಾಳೆ. ಗಾಡಿ ಓಡಿಸುತ್ತಾಳೆ. ಹಟಕ್ಕೆ ಬಿದ್ದಂತೆ ಎಲ್ಲ ಕರ್ತವ್ಯಗಳನ್ನು ಕುಂದಿಲ್ಲದಂತೆ ನೆರವೇರಿಸುತ್ತಾ ಹೋದರೂ... ಮಕ್ಕಳು ಬೆಳೆ ಬೆಳೆದಂತೆ... ಅಧೀರಳಾಗುತ್ತಾಳೆ. "ಅಯ್ಯೋ, ಇನ್ನೇನು ನಾನು ಯೌವನದ ಮೆಟ್ಟಿಲನ್ನು ದಾಟಿಯೇ ಬಿಡುತ್ತೇನಲ್ಲ ! ನಾನಿಡುವ ಹೆಜ್ಜೆಯೊಟ್ಟಿಗೆ ಇನ್ನೊಂದು ಹೆಜ್ಜೆ ಬೇಕೆಂಬ ಆಸೆ ತೀರಲೇ ಇಲ್ಲವಲ್ಲ ! ಪ್ರೀತಿ ಪೂರೈಕೆಯಾಗಲೇ ಇಲ್ಲವಲ್ಲ" ಎಂಬೆಲ್ಲ ಕಳವಳ–

**ಈ ಪುಟ್ಟ ಕತೆಗಳಲ್ಲಿ ಒಂದು ಒಟ್ಟಂದ ಇದೆ; ಜೀವನ ದರ್ಶನವೂ ಇದೆ. "ಸಂಬಂಧಗಳು ಮುರಿದು ಬಿದ್ದಾಗ ಸದ್ದಾಗುವುದೇ ಇಲ್ಲ. ಅವು ಸದ್ದಿಲ್ಲದೆ ಸಂಭವಿಸಿಬಿಡುತ್ತವೆ. ಪ್ರೀತಿಯಲ್ಲಿ ಬದುಕಿನ ದಾರಿ ಕಾಣುತ್ತೇನೆ ಎಂದಾಗ ಅದು ಮರೀಚಿಕೆಯಾಗಿಬಿಡುತ್ತದೆ. ಸಂಬಂಧಗಳ ಮೂಲಕ ಬದುಕಿನ ದಾರಿ ಸವೆಸುತ್ತೇನೆ ಎಂದಾಗ ಅದು ಮುಚ್ಚಿಬಿಡುತ್ತದೆ... ನಿಂತಲ್ಲೇ ನಿಂತ ಬದುಕು !" ಎಂಬಂಥ ಸೊಗಸಾದ ತಾತ್ವಿಕ ಚಿಂತನೆಗಳನ್ನು ಕಟ್ಟಿಕೊಡಬಲ್ಲರು ಈ ಕತೆಗಾರರು.**

ಕಾತುರ ಆಕೆಯನ್ನು ಮುತ್ತಿ ಮುತ್ತಿ ಬಾಧಿಸುತ್ತವೆ.

ಕತೆ ಅತ್ಯಂತ ಹೃದಯಸ್ಪರ್ಶಿಯಾಗಿ ಕಾಡುವುದು ಅದರ ಕಡೆಯ ಭಾಗದಲ್ಲಿ. ಗಂಡ ಎಂದಿನಂತೆ ನಿರ್ಭಾವುಕನಾಗಿ ಪೇಪರೋದುತ್ತಾ ಕೂತಿದ್ದಾನೆ. ನಾಗವೇಣಿಯ ಕಾಮನೆ ಮತ್ತು ಅದು ಇಷ್ಟು ದಿನ ಸಿಗದಿದ್ದುದರ ಆಕ್ರೋಶ, ದಾಂಪತ್ಯಸುಖವನ್ನು ದಕ್ಕಿಸಿಕೊಳ್ಳಲೇಬೇಕೆಂಬ ಹಠ... ಇವೆಲ್ಲ ಇದ್ದಕ್ಕಿದ್ದಂತೆ ಭುಗಿಲೆದ್ದಿವೆ. "ನನ್ನ ಬದುಕೇನಿದ್ದರೂ ಈ ನಾಲ್ಕು ಗೋಡೆಗಳ ನಡುವೆ ಅರಳಬೇಕು. ಮಿತಿಯ ಒಳಗೇ ಸುಖದ ನೆರಳು ಆವರಿಸಬೇಕು" ಎಂದು ಹಲ್ಲು ಕಚ್ಚಿ ನಿರ್ಧರಿಸಿ ಅವನನ್ನು ಸೆಳೆದು ಅಪ್ಪುತ್ತಾಳೆ. ಇಲ್ಲಿಯವರೆಗೂ ಬಂಡೆಗಲ್ಲಿನಂತೆ ವರ್ತಿಸಿದ, ನಾತ ಬೀರುವ, ಆ ವ್ಯಸನಿ ಅಂದು ಅವಳಿಗೆ ಅವಳು ಬಯಸಿದಂಥ ಒಲವಧಾರೆಯನ್ನು ಹರಿಸಿದನೋ ?

ಆದರೆ "ಮಿತಿಯ ಒಳಗೇ ಸುಖದ ನೆರಳು ಆವರಿಸಬೇಕು" ಅನ್ನುವ ನಾಗವೇಣಿಯ ನೈತಿಕತೆ ಎತ್ತರದಲ್ಲಿ ನಿಲ್ಲುತ್ತದೆ. ತಾನು ಒಪ್ಪಿಕೊಂಡಂಥ ಕುಟುಂಬ ವ್ಯವಸ್ಥೆಯನ್ನು ಆಕೆ ಗೌರವಿಸುವ ರೀತಿ, ಇದಕ್ಕಾಗಿ ಮಾಡಿಕೊಂಡು ಬಂದ ಸ್ವಾರ್ಥ, ತ್ಯಾಗ, ಇವುಗಳಿಂದ ಸ್ವತಃ ಆಕೆ ನಮ್ಮ ಗೌರವಕ್ಕೆ ಪಾತ್ರಳಾಗುತ್ತಾಳೆ.

ಅನಿರೀಕ್ಷಿತ ತಿರುವುಗಳಿಂದ ಮನಸ್ಸನ್ನು ಕಾಡುವ ಕತೆ... "ಧಿಯೋ ಯೋನಃ" ಬಹುಕಾಲದ ಮೇಲೆ ಬಾಲ್ಯಕಾಲದ ಗೆಳತಿಯೊಬ್ಬಳು ಕಥಾನಾಯಕನನ್ನು ಭೇಟಿಯಾಗುತ್ತಾಳೆ. ಅವ ಒಂಟಿ. ಇವಳು ಕೆಲ ದಿನ ಅವನೊಟ್ಟಿಗೆ ಅವನ ಮನೆಯಲ್ಲೇ ಇರುತ್ತಾಳೆ. ತೀರಾ ಸಲಿಗೆಯಿಂದ ವರ್ತಿಸಿದರೂ "ಅವಳಲ್ಲಿ ಅಳುಕಿರಲಿಲ್ಲ... ಕೃತಕತೆಯಿರಲಿಲ್ಲ." ಇನ್ನು ಅವರಿಬ್ಬರಲ್ಲಿ ಸಂಭವಿಸಬಹುದಾಗಿದ್ದ (?) ಸಮಾಗಮದ ಪ್ರಶ್ನೆಯೇ ಇಲ್ಲಿಲ್ಲ. ಹೆಣ್ಣು–ಗಂಡುಗಳ ಪರಸ್ಪರ ಬಯಕೆ... ಅದನ್ನು ಪ್ರಚೋದಿಸುವ ಹಾರ್ಮೋನುಗಳು... ಯಥೇಚ್ಛ ಏಕಾಂತ... ಇಂಥೆಲ್ಲ ನೆಪವೊಡ್ಡಿ ಅವರಿಬ್ಬರ ಮಿಲನವನ್ನು ಚಿತ್ರಿಸುವುದು ಸಾಧ್ಯವಿತ್ತು. ಇಲ್ಲಿ ಹಾಗಾಗಿಲ್ಲ. ಸ್ನೇಹಿತನ ನೆರವನ್ನಷ್ಟೇ ಆ ಹುಡುಗಿ ಕೋರುತ್ತಾಳೆ. ಇನ್ನು ಅವನಲ್ಲಿ ಅವಳ ಬಗ್ಗೆ ಸಹಾನುಭೂತಿ ಮಾತ್ರ ಇದೆ. ಹೊರತಾಗಿ ಇಬ್ಬರಲ್ಲೂ ಇನ್ನಾವ ಅನ್ಯಭಾವನೆಯೂ ಇಲ್ಲ. ಎರಡು ಆರೋಗ್ಯಕರ ಮನಸ್ಸುಗಳನ್ನು ಓದಿದ ಸಂತೋಷ ಓದುಗರದಾಗುತ್ತದೆ.

## ಕಣ್ಣು

ಹರಳುಗಟ್ಟಿದ ಹಾಗೆ, ಘನವಾದ ಹಾಗೆ ಜಲ.
ಲೋಕಭಾಷೆಯ ಪರಿಣಮನ ಕವಿತೆಯಲಿ ! ಕಡಲ
ಮೇಲೆ ತೇಲುವ ಮಂಜುಗಡ್ಡೆ ಗೋಚರಿಸುವುದೆ
ಸಂಪೂರ್ಣ; ಹೊರಗೆ ಕಾಣುವ ಭಾಗ ಅಲ್ಪವೇ;
ಒಳಗಿರುವ ಬಹುಭಾಗವನು ತಿಳಿವುದೊಳಗಣ್ಣು ;
ತಿಳಿವಲ್ಲ, ಹೊಳಹು ! ಕವಿ ಮುಕ್ಕಣ್ಣ ; ಅಂತೆಯೇ
ಸಹೃದಯ. ಹೃದಯವಿಲ್ಲದ ವ್ಯಕ್ತಿ ಒಕ್ಕಣ್ಣ.
ಕಡೇಪಕ್ಷ ಎರಡಾದರೂ ಬೇಕು ಪೊರೆಯಿರದ
ಪಟುವಾದ ಕಣ್ಣು, ಅಮೃತದ ಹಣ್ಣುಗಳ ದರ್ಶ
ನಕ್ಕೆ ! ಈಗ ಸರ್ವತ್ರ ಕುರುಡ ಕುರುಡನಗು ಮು
ನ್ನಡೆಸುವ ವಿಚಿತ್ರ ; ವಿಚ್ಛಿನ್ನ ಕವಿತೆಯ ಸೂತ್ರ ;
ಅಂತೆ ಎಲ್ಲೆಲ್ಲಿಯೂ ಜನರ ಬದುಕು ವಿಚಿತ್ರ !

ಸಿ.ಪಿ.ಕೆ.
ಮೈಸೂರು

'ಆತನನ್ನು ಕೊಂಡಾಡಿರಿ' ಅನ್ನುವ ಕತೆ ತನ್ನ ಭಾಷೆಯಿಂದ ಮತ್ತು ವಸ್ತುನಿಷ್ಠ ಆಶಯಗಳಿಂದ ಅದೆಷ್ಟು ಮನಸ್ಸಿಗೆ ಹತ್ತಿರವಾಗುತ್ತದೆಂದರೆ ಪ್ರತಿನಿತ್ಯ ನಾವು ರಸ್ತೆಬದಿ ಕಾಣುವ ದೃಶ್ಯವೊಂದು ಹಠಾತ್ತಾಗಿ ಕತೆಯಾಗಿ ಅರಳಿ ನಮ್ಮ ಮುಂದೆ ನಿಂತಂತಾಗುತ್ತದೆ. "ದುಡಿಯದೆಯೇ ದುಡ್ಡು ಕೊಡುವ ದೇವರಿದ್ರೆ ಇವನು ಮಾತ್ರ" ಎಂಬ ತನ್ನ ಅಂಗವಿಕಲ ಮೊಮ್ಮಗನ ಬಗ್ಗೆ ಮೇರಿ ಚಿನ್ನಮ್ಮ ಸಿಸ್ಟರ್ ಮರಿಯಾಗೆ ಹೇಳುವ ಮಾತುಗಳು ಮಾರ್ಮಿಕವಾಗಿವೆ. 'ಏನಿದೇನಿದು ಪ್ರಭುವೇ...', ಈ 'ಸುಳ್ಳು–ಸತ್ಯಗಳ ಪ್ರಪಂಚದಲ್ಲಿ, ಕತ್ತಲು ಬೆಳಕಿನಲ್ಲಿ' ನಡೆದು ಹೋಗುವ ಎಷ್ಟೋ ದಾರುಣ ಪ್ರಸಂಗಗಳಲ್ಲಿ ಒಂದು. ತನ್ನ ಯಜಮಾನಿಯನ್ನು ಡ್ರೈವರನ ಬಲಾತ್ಕಾರದಿಂದ ತಪ್ಪಿಸಿದೆ ಎಂಬ ದಿವ್ಯಸಾರ್ಥಕತೆಯಲ್ಲಿ – ಆ ಡ್ರೈವರನನ್ನು ಕೊಂದದ್ದಕ್ಕಾಗಿ ಜೈಲು ಸೇರಿದರೂ – ಎಷ್ಟೂ ಉದ್ವಿಗ್ನನಾಗದ ಮಲ್ಲಪ್ಪನಿಗೆ ತಾನು ಬಿಡುಗಡೆಯಾದ ಮೇಲೆ ಯಜಮಾನಿಗೇ ಡ್ರೈವರನೊಂದಿಗೆ ಬಹುದಿನಗಳ ಅನೈತಿಕ ಸಂಬಂಧವಿತ್ತು ಎಂಬ ಸತ್ಯ ಗೊತ್ತಾಗುತ್ತದೆ. ಇದೀಗ ಬೆಚ್ಚಿಬೀಳುತ್ತಾನೆ ಮಲ್ಲಪ್ಪ. "ಸಂಭೋಗಕ್ಕೂ ಬಲಾತ್ಕಾರಕ್ಕೂ ನಡುವೆ ಎಷ್ಟು ಸಣ್ಣ ಅಂತರ !" ಅಂತ... ಅದೇಕೋ... ಅವನಿಗನ್ನಿಸಿ ವಿವಶನಾಗಿಬಿಡುತ್ತಾನೆ. ಅದು ಅವನ ಮಟ್ಟಿಗಿನ ಸತ್ಯದರ್ಶನ !

ಇನ್ನು 'ಮೊತ್ತ' ತುಂಬ ಅರ್ಥಗರ್ಭಿತವಾದ ಕತೆ. ಶೀರ್ಷಿಕೆ ಕೂಡ ತುಂಬ ಮಾರ್ಮಿಕವಾಗಿಯೇ ಇದೆ. ಆದರೆ ಕತೆಯ ಅಂತರಾರ್ಥವನ್ನು ಓದುಗರ ಪಾಲಿಗೇ ಬಿಡುತ್ತಾರೆ ಕತೆಗಾರರು. ಇಲ್ಲಿನ ಕಥಾನಾಯಕ 'ರಾಯರು'... "ಕಾಲದ ಯೌವನದ ಸುಖದ ಪ್ರತೀಕಗಳ ಹೊಳೆಯಲ್ಲಿ ಸದಾ ಕೊಚ್ಚಿಕೊಂಡು ಹೋಗಿಬಿಡಬೇಕೆಂದು" ಬಯಸುವ ವ್ಯಕ್ತಿ. ಕುಡಿತ, ಧೂಮಪಾನ, ವಿವಾಹೇತರ ಸಂಬಂಧ ಎಲ್ಲ ಉಂಟು. "ನೀವು ಗಂಡಸರು ಕೆಸರಿದ್ದಲ್ಲಿ ಕಾಲು ಹಾಕಿ ನೀರಿದ್ದಲ್ಲಿ ತೊಳೆದುಕೊಳ್ಳುವ ಜಾತಿ" ಎಂದು ಅವನ ಹೆಂಡತಿ ಛೀಗುಟ್ಟಿದರೂ, ಪೌರುಷ ಬಲದಿಂದ ಅವಳ ಬಾಯನ್ನೇ ಮುಚ್ಚಿಸಿಬಿಡುತ್ತಾನೆ. ಕಡೆಗೆ ರಿಟೈರ್ ಆದಮೇಲೆ ಪಿಂಚಣಿಯ ಮೊತ್ತ ಎಷ್ಟು ಬರಬಹುದೆಂದು ಕಾತುರದಿಂದ ಲೆಕ್ಕ ಹಾಕುತ್ತಿರುವಾಗಲೇ... ಒಮ್ಮಿಂದೊಮ್ಮೆ ಸ್ಟ್ರೋಕ್ ಆಗಿ ನೆಲ ಕಚ್ಚುತ್ತಾನೆ ! "ತನ್ನ ಪಾಪಗಳ ಮೊತ್ತವೇ ಇದಾಗಿರಬಹುದೋ ?" ಎಂದು ಸ್ವತಃ ಅವನಿಗೇ ಅನ್ನಿಸಿಬಿಡುತ್ತದೆ. ಮಡದಿ ಮಾತ್ರ ಅವನ ಪಕ್ಕವೇ ಇದ್ದು ಸೇವೆ ಮಾಡುತ್ತಲೇ ಇರುತ್ತಾಳೆ. ಒಂದು ವೇಳೆ ಈತ ಮೆರೆದಂಥ ಸರ್ವಲೀಲೆಗಳನ್ನು ಆಕೆ ಮೆರೆದು, ಕಡೆಯಲ್ಲಿ ಹೀಗೇ ಹಾಸಿಗೆ ಸೇರಿದ್ದರೆ, ಇದೀಗ ಅವಳು ಅವನಿಗೆ ಮಾಡುತ್ತಿರುವಂಥ ಅಕಳಂಕ ಶುಶ್ರೂಷೆಯನ್ನು ಅವನು ಅವಳಿಗೆ ಮಾಡುತ್ತಿದ್ದನೇ ?

ಒಟ್ಟಾರೆ ಹೇಳಬೇಕೆಂದರೆ, ಈ ಪುಟ್ಟ ಕತೆಗಳಲ್ಲಿ ಒಂದು ಒಟ್ಟಂದ ಇದೆ; ಜೀವನ ದರ್ಶನವೂ ಇದೆ. "ಸಂಬಂಧಗಳು ಮುರಿದು ಬಿದ್ದಾಗ ಸದ್ದಾಗುವುದೇ ಇಲ್ಲ. ಅವು ಸದ್ದಿಲ್ಲದೆ ಸಂಭವಿಸಿಬಿಡುತ್ತವೆ. ಪ್ರೀತಿಯಲ್ಲಿ ಬದುಕಿನ ದಾರಿ ಕಾಣುತ್ತೇನೆ ಎಂದಾಗ ಅದು ಮರೀಚಿಕೆಯಾಗಿ ಬಿಡುತ್ತದೆ. ಸಂಬಂಧಗಳ ಮೂಲಕ ಬದುಕಿನ ದಾರಿ ಸವೆಸುತ್ತೇನೆ ಎಂದಾಗ ಅದು ಮುಚ್ಚಿಬಿಡುತ್ತದೆ... ನಿಂತಲ್ಲೇ ನಿಂತ ಬದುಕು !" ಎಂಬಂಥ ಸೊಗಸಾದ ತಾತ್ವಿಕ ಚಿಂತನೆಗಳನ್ನು ಕಟ್ಟಿಕೊಡಬಲ್ಲರು ಈ ಕತೆಗಾರರು.

ಇಷ್ಟೆಲ್ಲ ಇದ್ದರೂ ಇಲ್ಲಿನ ಭಾಷೆ ಮಾತ್ರ ಉದ್ದಕ್ಕೂ ಹುಬ್ಬುಗಂಟಿಕ್ಕಿಕೊಂಡೇ ಮಾತಾಡುತ್ತದೆ. ಈ ಹುಬ್ಬುಗಂಟು ಸಡಿಲಾಗಬೇಕು. ಜೀವನೇವರಿಸುವ ಮಾಧುರ್ಯ, ಹೃದಯಕ್ಕೆ ಮೆಲ್ಲಮೆಲ್ಲಗೆ ಕಚಗುಳಿಯಿಡುವ ಒಂದಿಷ್ಟು ಪುಳಕಗಳೂ – ಅಲ್ಲಲ್ಲಿ ಮಿಂಚಿದರೆ ಕತೆಗಳು ಮತ್ತಷ್ಟು ಆಪ್ಯಾಯಮಾನವಾಗುತ್ತವೆ. ಭಾಷೆಯಲ್ಲಿ ಸತ್ವವನ್ನೂ, ಶ್ರೀಮಂತಿಕೆಯನ್ನೂ ಸಾಧಿಸಿಕೊಂಡಿರುವ ಲೇಖಕರಿಗೆ ಇದು ಅಸಾಧ್ಯದ ಮಾತೇನಲ್ಲ.

**ಭಾರತೀ ಕಾಸರಗೋಡು**
'ರಂಗ ಭಾರತೀ', ಜಿ–೫, ಶ್ರೀ ನಿಧಿ ಶೆಲ್ಟರ್ಸ್
ಸೈಟ್ ನಂ. ೧, ರೇವಿ ಹಿಲ್ ವ್ಯೂ ಬಡಾವಣೆ, ಇಟ್ಟಮಡು
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

ವಿಜ್ಞಾನಿಗಳ ಪ್ರಯೋಗಶಾಲೆಗಳಿಗೆ... ಇಲಿಗಳು, ಮೊಲಗಳು, ಕಪ್ಪೆಗಳು, ಕೋತಿಗಳು ಮುಂತಾದ ಪ್ರಾಣಿಗಳೇ ಬೇಕು. ಮನುಷ್ಯನ ರೋಗಗಳಿಗೆ ಔಷಧ ಬೇಕಾದರೆ ಮೊದಲ ಪ್ರಯೋಗ ನಮ್ಮ ಮೇಲೆ... ಯಶಸ್ವಿಯಾದರೆ... ಅವರಿಗೆ ಅನುಕೂಲ.

ಮಾನವರೇ, ನಿಮಗೇನೂ ಅನ್ನಿಸುವುದಿಲ್ಲವೇ ? ನಿಮಗೆ ಕುಳಿತುಕೊಳ್ಳಲು ಜಿಂಕೆ ಚರ್ಮಬೇಕು, ಹುಲಿ ಚರ್ಮಬೇಕು, ನಿಮ್ಮ ತಮಟೆಗಳಿಗೆ ಮೇಕೆ ಚರ್ಮ, ನಿಮ್ಮ ಪಾದರಕ್ಷೆಗೆ ದನಗಳ ಚರ್ಮ, ಸೊಂಟದ ಬೆಲ್ಟ್ ಅಲಂಕರಿಸಲು, ಮಹಿಳೆಯರ ವ್ಯಾನಿಟಿ ಬ್ಯಾಗಿಗೆ ಹಾವಿನ ಚರ್ಮಬೇಕು. ನಮ್ಮ ಚರ್ಮವನ್ನು ಸುಲಿದಂತೆ... ನಾವು ನಿಮ್ಮ ಚರ್ಮವನ್ನು ಸುಲಿದರೆ... ನಿಮ್ಮ ಗತಿಯೇನಾಗುತ್ತದೆ ? ಯೋಚಿಸಿ ಹೇಳಿ.

**ಎಸ್. ಸಿ. ರಂಗನಾಥ್**

ನಾನು ಸಿಂಹ, ಕಾಡಿನ ರಾಜ. ನನ್ನ ಶಕ್ತಿ, ಯುಕ್ತಿ, ಚಮತ್ಕಾರಗಳನ್ನು ನೋಡಿಯೇ ನನ್ನನ್ನು 'ಕಾಡಿನ ರಾಜ' ಎಂಬುದಾಗಿ ಘೋಷಿಸಿದ್ದಾರೆ. ರಾಜನನ್ನು ಮಾಡಬೇಕಾದರೆ, ಹಲವಾರು ರಾಜಲಕ್ಷಣಗಳು ಇರಬೇಕು. ಆಡಳಿತ ನಡೆಸುವ ಯೋಗ್ಯತೆ, ಹಲವಾರು ವಿಷಯಗಳಲ್ಲಿ ಪ್ರಜ್ಞೆ, ಸಮನ್ವಯತತ್ವ ಹಾಗೂ ಕಾನೂನು ಪಾಲನೆ ಮುಂತಾದುವುಗಳು ಅಗತ್ಯವಾಗಿ ಇರಬೇಕು. ನಾನು ರಾಜನಾದರೂ ಸಮಾನತೆಯ ತತ್ವವನ್ನು ಅನುಸರಿಸುತ್ತೇನೆ. ಸೋದರ ಭಾವನೆ ಹಾಗೂ ಸಹಬಾಳ್ವೆಗೆ ಬದ್ಧನಾಗಿದ್ದೇನೆ. ಸಮಾಜವಾದಿ ಮತ್ತು ಸಮತಾವಾದ ಸಿದ್ಧಾಂತವನ್ನು ನಾನು ಮತ್ತು ನನ್ನ ಪ್ರಜೆಗಳು ಅನುಸರಿಸುತ್ತಾ ಬಂದಿದ್ದೇವೆ. ನಮ್ಮಲ್ಲಿ ಜಾತಿ ಭಾವನೆಗಳಿಲ್ಲ; ಕ್ಷುಲ್ಲಕ ಧರ್ಮಕ್ಕೆ ಇಂಬುಕೊಟ್ಟಿಲ್ಲ. ಪ್ರಕೃತಿ ಧರ್ಮವೇ ನಮ್ಮ ಧರ್ಮ. ಪ್ರಕೃತಿ ನಿಯಮವೇ ನಮ್ಮ ನಿಯಮ. ನನ್ನ ನಾಡಲ್ಲಿ ಎಲ್ಲರೂ ಸರಿಸಮಾನರಾಗಿ ಓಡಾಡಬಹುದು. ಎಲ್ಲಿಗೆ ಬೇಕಾದರೂ ಅವರವರ ಅವಶ್ಯಕತೆಗಳಿಗೆ ತಕ್ಕಂತೆ ಹೋಗಿಬರಬಹುದು. ಅವರ ಅವಶ್ಯಕತೆಗಳನ್ನು ಪೂರೈಸಿಕೊಳ್ಳಬಹುದು. ಅಂದರೆ ಗಾಳಿ–ಬೆಳಕು–ನೀರು–ಆಹಾರ–ವಸತಿಗೆ ನಿಯಂತ್ರಣ ಮಾಡುವುದಿಲ್ಲ. ಎಲ್ಲಿ ಬೇಕಾದರೂ ತಿಂದು–ಉಂಡು–ಮಲಗಿ ಸಂತೋಷವಾಗಿರಬಹುದು. ನನಗೆ ಮನುಷ್ಯರ ನಡವಳಿಕೆ ಇಷ್ಟವಾಗುವುದಿಲ್ಲ. ನೀರನ್ನು ಅಳತೆ ಮಾಡಿ ಮಾರುತ್ತಾರೆ! ಅನ್ನವನ್ನು ತೂಕಮಾಡಿ ಮಾರುತ್ತಾರೆ! ಸೂರ್ಯನ ಬಿಸಿಲು, ಬೆಳಕು ಇವರ ಕೈಗೆ ಸಿಕ್ಕಿಲ್ಲ; ಸಿಕ್ಕಿದ್ದರೆ, ಇವನ್ನೂ ಮಾರುತ್ತಿದ್ದರು. ಗಾಳಿಯೇನಾದರೂ ಈ ಮಾನವನ ಕೈಗೆ ಸಿಕ್ಕಿದರೆ ಘನ ಸೆಂಟಿಮೀಟರ್‌ಗಳಲ್ಲಿ ಲೆಕ್ಕಹಾಕಿ ಮಾರಿಬಿಡುತ್ತಿದ್ದರೇನೋ! ಆದರೆ ಅದು, ಇವರ ನಿಯಂತ್ರಣದಲ್ಲಿ ಇಲ್ಲ.

ಕೆಡುಕು ಮಾಡುವುದರಲ್ಲಿ ಮಾನವರು ನಿಸ್ಸೀಮರು. ಭೂಮಿಯನ್ನು

# ಸಿಂಹದ ಗರ್ಜನೆ



ತಮಗೆ ಮಾತ್ರ ಸೇರಿದ ಸೊತ್ತೆಂದು ಭಾವಿಸಿದಂತಿದೆ. ಕಾಡಿನ ರಾಜ್ಯದವರಾದ ನಮ್ಮನ್ನು, ಅಂದರೆ ಪ್ರಾಣಿವರ್ಗದವರನ್ನು ಕಡೆಗಣಿಸಿದ್ದಾರೆ. ಆದರೆ ನಾವು, ನಮ್ಮ ತಾಯಿಭೂಮಿಗಾಗಲೀ, ಪ್ರಕೃತಿ ನಿರ್ಮಿಸಿದ ಯಾವುದನ್ನೇ ಆಗಲಿ ಹಾಳುಮಾಡುವುದಿಲ್ಲ. ನಿಸರ್ಗ ನಿಯಮಕ್ಕೆ ಹೊಂದಿಕೊಂಡು ಬಾಳುತ್ತೇವೆ, ಬದುಕುತ್ತೇವೆ. ನಮ್ಮಿಂದ ಯಾವ ಹಾನಿಯೂ ಆಗಿಲ್ಲ, ಆಗುವುದೂ ಇಲ್ಲ. ಏನು ಮನುಷ್ಯರೋ ಇವರು... ಭೂಮಿಯನ್ನು ಅಗೆದು, ಭೂಮಿಯ ಅಂದ – ಚಂದವನ್ನು ಕೆಡಿಸುತ್ತಾರೆ.

ನಮ್ಮ ಕಾಡಿನ ರಾಜ್ಯಕ್ಕೂ ಬಂದು ವೃಕ್ಷ ಸಂಪತ್ತನ್ನು ನಾಶಮಾಡುತ್ತಿದ್ದಾರೆ. 'ಕಾಡಿನಿಂದ ನಾಡು' ಎಂಬುದನ್ನೇ ಕಡೆಗಣಿಸಿದ್ದಾರೆ. ವೃಕ್ಷಗಳು ಭೂಮಿಯ ಮೇಲಿನ ಎಲ್ಲರಿಗೂ ಜೀವನಾಡಿ, ಜೀವರಕ್ಷಕ ಎಂಬುದನ್ನು ಮರೆತೇ ಬಿಟ್ಟಿದ್ದಾರೆ. ಇವು ರಸವತ್ತಾದ ಹಣ್ಣುಗಳು, ಗೆಡ್ಡೆ, ಗೆಣಸು ಮುಂತಾದ ಆಹಾರ ಪದಾರ್ಥಗಳನ್ನು ಕೊಟ್ಟು ಕಾಪಾಡುತ್ತಿಲ್ಲವೆ! ಇವು ಭೂಮಿಯ ಮೇಲಿನ ಸರ್ವಜೀವಿಗಳಿಗೂ ಸೇರಿದವು ಎಂಬುದನ್ನು ಮಾನವ ತಿಳಿಯಬೇಕು. ನಾನೇ ಸಾರ್ವಭೌಮ ಎಂಬಂತೆ ಮಾನವ ವರ್ತಿಸಿ, ನಮಗೆ ಸೇರಬೇಕಾದ್ದನ್ನು ಅಪಹರಿಸಿ ಕಾಡಿನ ಪ್ರಜೆಗಳಾದ ನಮಗೆ ಅನ್ಯಾಯ ಮಾಡುತ್ತಿದ್ದಾನೆ, ಈ ರಾಕ್ಷಸ ಪ್ರವೃತ್ತಿಯ ಮಾನವ!! ನಾನು ಮತ್ತು ನನ್ನ ಪ್ರಜೆಗಳಾರೂ ಕೂಡಿಡುವುದಿಲ್ಲ. ಅಂದಿಗಂದಿಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ತಿಂದು–ಉಂಡು ಸುಖವಾಗಿರುತ್ತೇವೆ. ನಮಗೆ ಕಂಟಕರೆಂದರೆ ಮನುಷ್ಯರೇ!

ಈಗ ಕಾಡಿನಲ್ಲಿ ಆಹಾರ ಸಿಕ್ಕುತ್ತಿಲ್ಲ... ಈ ಮಾನವರ ಉಪಟಳವೇ ಇದಕ್ಕೆ ಕಾರಣ... ನಮಗೂ ಹೊಟ್ಟೆ ಇದೆ... ಹಸಿವಿದೆ... ಆಹಾರಕ್ಕಾಗಿ ಹುಡುಕಿಕೊಂಡು ನಮ್ಮವರು ನಾಡಿನ ಕಡೆಗೆ ಬರುತ್ತಿದ್ದಾರೆ... ಆನೆಗಳಿರಬಹುದು. ಹುಲಿಗಳಿರಬಹುದು, ನರಿಗಳಿರಬಹುದು, ಕೋತಿಗಳಿರಬಹುದು... ದಾರಿಯುದ್ದಕ್ಕೂ ತಮಗೆ ಸಿಕ್ಕಿದ್ದನ್ನು ತಿಂದು ಹೊಟ್ಟೆ ತುಂಬಿಸಿಕೊಳ್ಳುತ್ತವೆ. ಇವರು ಯಾರಿಗೂ ತೊಂದರೆ ಕೊಡಲು ಬರುತ್ತಿಲ್ಲ... ಮಾನವರು ನಮ್ಮವರನ್ನು ನೋಡಿ ಕೀಟಲೆ ಮಾಡಿದರೆ ನಮ್ಮವರು ಸುಮ್ಮನಿರಬೇಕೇ...? ಅವರ ಆತ್ಮರಕ್ಷಣೆಗಾಗಿ ಹೋರಾಟಕ್ಕಿಳಿಯುತ್ತಾರೆ. ಹೋರಾಟವೂ ಪ್ರಕೃತಿಯ ನಿಯಮವೇ!! ಈ ಹೋರಾಟದಲ್ಲಿ ಕೆಲವು ಸಾರಿ ನಮ್ಮವರು ಸಾಯುತ್ತಾರೆ ಅಥವಾ ಮಾನವರು ಸಾಯುತ್ತಾರೆ. ಮಾನವರು ಸತ್ತರೆ... ನಮ್ಮವರಿಗೆ ಶಾಪ ಹಾಕುತ್ತಾರೆ. ನಮ್ಮವರು ಸತ್ತರೆ, ಈ ನಿಷ್ಕರುಣಿ ಮಾನವರು ಕಣ್ಣೀರು ಹಾಕುವುದಿರಲಿ, ನಮ್ಮ ಕಷ್ಟ–ಸುಖಗಳ ಬಗ್ಗೆ, ದುಃಖ–ದುಮ್ಮಾನಗಳ ಬಗ್ಗೆ ಯೋಚಿಸುವುದೇ ಇಲ್ಲ. ಮನುಷ್ಯ ಜನ್ಮ ದೊಡ್ಡದು ಎನ್ನುತ್ತಾರೆ... ಈ ರೀತಿ ನಡೆಯುವುದು ದೊಡ್ಡದಾ...?

ನಮ್ಮವರು (ಪ್ರಾಣಿಗಳು) ಮಾನವರ ಕೆಲಸ ಕಾರ್ಯಗಳಿಗೆ ಸಹಕರಿಸುತ್ತಾರೆ. ಎತ್ತುಗಳು ಹೊಲ ಉಳುತ್ತವೆ. ಗಾಡಿ ಎಳೆಯುತ್ತವೆ, ಹಸುಗಳು ಹಾಲು ಕೊಡುತ್ತವೆ, ಕುದುರೆಗಳು ಜಟಕಾ ಬಂಡಿ ಎಳೆಯುತ್ತವೆ, ನಾಯಿಗಳು ನಿಯತ್ತಿನಿಂದ ಮನೆಗಳನ್ನು ಕಾಯುತ್ತವೆ. ಒಂಟೆಗಳು ಮರಳುಗಾಡಿನ ಹಡಗಿನಂತೆ ಕೆಲಸ ಮಾಡುತ್ತವೆ. ಕತ್ತೆಗಳು ಹೇರನ್ನು ಹೊರುತ್ತವೆ; ಕೋತಿಗಳು ತೆಂಗಿನಕಾಯಿ ಕೀಳಲು ಸಹಕಾರ ಕೊಡುತ್ತವೆ.

## ಆಧುನಿಕ ವಚನಗಳು

ರಾಜ್ಯಕೋಶ ಕೊಳ್ಳೆ ಹೊಡೆದಿಯಾ
ಎಂದು ಮೂದಲಿಸಿದರೆ
ನಾನು ತಿಂದರೆ ಮಾತ್ರ ಅಪರಾಧವೇನಯ್ಯಾ
ನೀನು ತಿಂದರೆ ಮಾತ್ರ
ಅಪರಾಧವಲ್ಲವೇನಯ್ಯಾ
ಹಗ್ಗ–ಜಗ್ಗಾಟದಲಿ
ಎಲುಬಿಲ್ಲದ ನಾಲಗೆಯೆನುತ ಕೂಗಾಡಿದರೆ
ಲೂಟಿ ಮಾಡಿದ ಸಂಪತ್ತು
ತಿಂದುಂಡ ಅನ್ನ
ಜನರ ಅಪಹಾಸ್ಯಕೆ ಗುರಿಯಾಗುವರಯ್ಯಾ
ಜನವೇ ಜನಾರ್ಧನನೆಂದ ನಮ್ಮ ಬೀರೇಶ್ವರ

**ದ್ವಾರನ ಕುಂಟೆ ಪಾತಣ್ಣ**
ನಂ. ೧೧೮, 'ಹೊಂಬೆಳಕು'
ಎಚ್. ಎಂ. ಟಿ. ಲೇಔಟ್, ನಾಗಸಂದ್ರ ಅಂಚೆ
ಬೆಂಗಳೂರು – ೭೩

ವಿಜ್ಞಾನಿಗಳ ಪ್ರಯೋಗಶಾಲೆಗಳಿಗೆ... ಇಲಿಗಳು, ಮೊಲಗಳು, ಕಪ್ಪೆಗಳು, ಕೋತಿಗಳು ಮುಂತಾದ ಪ್ರಾಣಿಗಳೇ ಬೇಕು. ಮನುಷ್ಯನ ರೋಗಗಳಿಗೆ ಔಷಧ ಬೇಕಾದರೆ ಮೊದಲ ಪ್ರಯೋಗ ನಮ್ಮ ಮೇಲೆ... ಯಶಸ್ವಿಯಾದರೆ... ಅವರಿಗೆ ಅನುಕೂಲ.

ಮಾನವರೇ, ನಿಮಗೇನೂ ಅನ್ನಿಸುವುದು ಇಲ್ಲವೇ? ನಿಮಗೆ ಕುಳಿತುಕೊಳ್ಳಲು ಜಿಂಕೆ ಚರ್ಮಬೇಕು, ಹುಲಿ ಚರ್ಮಬೇಕು, ನಿಮ್ಮ ತಮಟೆಗಳಿಗೆ ಮೇಕೆಚರ್ಮ, ನಿಮ್ಮ ಪಾದರಕ್ಷೆಗೆ ದನಗಳ ಚರ್ಮ, ಸೊಂಟದ ಬೆಲ್ಟ್ ಅಲಂಕರಿಸಲು, ಮಹಿಳೆಯರ ವ್ಯಾನಿಟಿ ಬ್ಯಾಗಿಗೆ ಹಾವಿನ ಚರ್ಮಬೇಕು. ನಮ್ಮ ಚರ್ಮವನ್ನು ಸುಲಿದಂತೆ... ನಾವು ನಿಮ್ಮ ಚರ್ಮವನ್ನು ಸುಲಿದರೆ... ನಿಮ್ಮ ಗತಿಯೇನಾಗುತ್ತದೆ? ಯೋಚಿಸಿ ಹೇಳಿ.

ನಮ್ಮಲ್ಲಿ ಸುಮಧುರವಾಗಿ ಹಾಡುವ ಕೋಗಿಲೆಗಳಿವೆ. ನರ್ತಿಸುವ ನವಿಲುಗಳಿವೆ, ಮುದಗೊಳಿಸುವ ಜಿಂಕೆಗಳಿವೆ, ಗಿಳಿ, ಪಾರಿವಾಳ ಮುಂತಾದ ವೈವಿಧ್ಯಮಯ ಪಕ್ಷಿಗಳಿವೆ, ಇವು ಯಾವುವೂ ಹಣಕ್ಕಾಗಿ ಕೆಲಸ ಮಾಡುವುದಿಲ್ಲ... ನಿಮ್ಮಲ್ಲಿ ಹಣವಿಲ್ಲದೆ ಹಾಡುವಂತೆಯೂ ಇಲ್ಲ... ನರ್ತಿಸುವಂತೆಯೂ ಇಲ್ಲ. ನಿಮ್ಮ ಮನೋರಂಜನೆಗಾಗಿ ನಡೆಸುವ ಸರ್ಕಸ್‌ಗಳಿಗೆ ನಮ್ಮ ಪ್ರಾಣಿ–ಪಕ್ಷಿಗಳೇ ಬೇಕು. ಆ ಸರ್ಕಸ್‌ಗಳಲ್ಲಿ ನಮಗೆ ಎಷ್ಟು ಹಿಂಸೆಯಾಗುತ್ತದೆ ಗೊತ್ತಾ...?

ನಮಗೆ ಪ್ರಕೃತಿಯೇ ಗುರು. ಪ್ರಕೃತಿಯೇ ದೇವರು. ಈ ಗುರು ನಿರ್ದೇಶಿಸಿದಂತೆ ನಡೆಯುತ್ತೇವೆ. ನಮಗೆ ಪಾಪ–ಪುಣ್ಯಗಳ ಭೀತಿ ಇಲ್ಲ. ಸ್ವರ್ಗ–ನರಕಗಳ ಚಿಂತೆಯಿಲ್ಲ. ವೇದ–ಶಾಸ್ತ್ರ–ಪುರಾಣ–ಉಪನಿಷತ್ತು–ಮಂತ್ರಗಳು ಎಂಬ ಹಂಗಿಲ್ಲ. ಇವುಗಳ ಅವಶ್ಯಕತೆಯೂ ನಮಗಿಲ್ಲ. ನಮಗೆ ಪ್ರಕೃತಿಯೇ ಸರ್ವಸ್ವ. ನಾವು ಹುಟ್ಟಿನಿಂದ ಸಾಯುವವರೆಗೂ ಸಂತೋಷವಾಗಿಯೇ ಇದ್ದು ದೇಹ ಬಿಡುತ್ತೇವೆ. ಹೇ ಮಾನವರೇ... ನೀವಾದರೋ ನಿತ್ಯ ಭೋಗಿಗಳು... ನಿತ್ಯ ರೋಗಿಗಳು, ನಿತ್ಯ ನರಕಿಗಳು, ಪ್ರಕೃತಿ ಗುರುವಿನ ತತ್ವವೇ ಗೊತ್ತಿಲ್ಲದ ಮೂರ್ಖರು. ನಮ್ಮನ್ನು ನೋಡಿ..., ಕಲಿತು..., ಸುಖವಾಗಿ ಬಾಳಿರಿ. ನಮ್ಮ ತಂಟೆಗೆ ಬರಬೇಡಿ. ನಾವೇನು ನಿಮಗೆ ತೊಂದರೆ ಕೊಡುವವರಲ್ಲ. ಆದರೆ ಮಾನವರಾದ ನೀವು ನಮ್ಮ ತಂಟೆಗೆ ಬಂದರೆ... ನಾವು ಸುಮ್ಮನಿರಲು ಸಾಧ್ಯವಿಲ್ಲ...!! ಶಸ್ತ್ರಾಸ್ತ್ರಗಳಿವೆ ಎಂದು ಉಬ್ಬುಬ್ಬಿ, ನಮ್ಮನ್ನು ನಾಶಮಾಡಲು ಬಂದರೆ, ಅದರ ಜೊತೆಯಲ್ಲಿಯೇ ನಿಮ್ಮ ನಾಶವೂ ಖಂಡಿತ ಎಂಬುದನ್ನು ಮರೆಯಬೇಡಿ. ಎಲ್ಲಾ ಜೀವಿಗಳಿಗೂ ಗೌರವ ಕೊಡುವುದನ್ನು ಕಲಿತುಕೊಳ್ಳಿ, ಮಾನವರೇ... ನಿಮಗೆ ಇದೇ ನನ್ನ ಸಂದೇಶ.



**ಎಸ್. ಸಿ. ರಂಗನಾಥ್**
ನಿವೃತ್ತ ಉಪನ್ಯಾಸಕರು, 'ಮಾತೃಶ್ರೀ ನಿಲಯ'
ನಂ. ೯/೭, ೩ 'ಡಿ' ಮುಖ್ಯರಸ್ತೆ
೯ನೇ ಅಡ್ಡರಸ್ತೆ, ೮೦ ಅಡಿ ರಸ್ತೆ
ಸಾರಕ್ಕಿ ಜೆ. ಪಿ. ನಗರ ಒಂದನೇ ಹಂತ
ಬೆಂಗಳೂರು – ೫೬೦ ೦೭೮





# ಆತ್ಮಕತೆಯೊಂದರ ಕುರಿತು

ಆತ್ಮಕತೆಗಳು ವ್ಯಕ್ತಿಯ ಸ್ವಪ್ರತಿಷ್ಠೆಗನುಸಾರವಾದ ಮೌಲಿಕ ವಿಚಾರಧಾರೆಗಳ ಔದಾರ್ಯದ ದಾಖಲೆಯಾಗಿರುತ್ತವೆ. ಇಲ್ಲಿನ ಮೌಲ್ಯಕ್ಕನುಗುಣವಾಗಿ ಯಾವುದೇ ಚೌಕಟ್ಟಿನ ಹಿಡಿತವಿರುವುದಿಲ್ಲ ಮಾತ್ರವಲ್ಲ, ಇಲ್ಲಿನ ದಾಖಲೆಗಳು ವ್ಯಕ್ತಿ ಪ್ರಪಂಚವನ್ನು ಅಣಕಿಸುತ್ತ ವಿರೋಧಗಳ ಮಧ್ಯೆ ವ್ಯಕ್ತವಾಗುವ ಅಥವಾ ಆತ್ಮಾನಂದಕ್ಕಾಗಿ ದಾಖಲಾಗುವ ಭಾವನಾತ್ಮಕ ಪ್ರತಿಕ್ರಿಯೆಯಾಗಿರುತ್ತವೆ. ನೆನಪಿನ ಶಕ್ತಿ ಮತ್ತು ಆತ್ಮಸ್ಥೈರ್ಯಗಳ ನಡುವೆ ಆತ್ಮಶೋಧನೆಯು ಪ್ರಮುಖ ಅಸ್ತ್ರವಾಗುವ ಮೂಲಕ ತಮ್ಮ ಚಾರಿತ್ರಿಕ ಬೆಳವಣಿಗೆಯನ್ನು ಹಂತ ಹಂತವಾಗಿ ದಾಖಲಿಸುವ ಶಿಸ್ತುಬದ್ಧತೆ ಇಲ್ಲಿ ತುಂಬಿರುತ್ತದೆ. ಇವೇ ಆತ್ಮಕಥೆಯ ಒಡಲಾಳದ ಅನುಭವ ದಾಖಲೆಯಾಗಿರುವುದು ವಿಶೇಷ.

ಬೀಚಿಯವರು ದಾಖಲಿಸಿರುವಂತೆ "ಪ್ರತಿಯೊಬ್ಬರ ಜೀವನ ಕತೆಯೂ ಒಂದು ಅತ್ಯುತ್ತಮ ಜೀವನ ಕತೆಯಾಗುತ್ತದೆ. ಬರೆಯುವ ಹದವನ್ನು ಬಲ್ಲವನಿಗೆ ಬಾಳೇ ಒಂದು ಕಲೆ. ಅದನ್ನು ಮಸಿಯಲ್ಲಿ ಮೂಡಿಸುವುದು ಸೂಕ್ಷ್ಮ ಕಲೆ. ಕುಸುರಿಯ ಕೆಲಸ. ಒಬ್ಬ ಲಕ್ಷಾಧೀಶನ ಜೀವನ ಒಂದು ಕತೆಯಾಗಬೇಕಾದರೆ ಒಬ್ಬ ಭಿಕ್ಷುಕನ ಬಾಳು ಇನ್ನೂ ಹೆಚ್ಚು ಸ್ವಾರಸ್ಯವಾದ ಕತೆಯಾಗುವುದರಲ್ಲಿ ಸಂಶಯವಿಲ್ಲ" ಎನ್ನುವ ಅಂಶವಿಲ್ಲಿ ಬಹಳ ಮುಖ್ಯವೆನಿಸುತ್ತದೆ.

ಅನುಭವಗಳು ಗರ್ಭದಿಂದ ಹೊರಬಂದ ಶಿಶುವಿನ 'ಅಮ್ಮಾ' ಎನ್ನುವ ಅಕ್ಷರಗಳಲ್ಲೇ ಅಡಗಿರುತ್ತವೆ. ಇಲ್ಲಿನ ಪ್ರಬುದ್ಧ ಅನುಭವಗಳನ್ನು ದಾಖಲಾತ್ಮಕ ರೀತಿಯಲ್ಲಿ ಗ್ರಹಿಸಿ ಸೋಲು, ಗೆಲುವು, ಸಿಹಿ ಕಹಿಗಳನ್ನು ನೇರವಾಗಿ ಇಲ್ಲವೇ ಪ್ರತ್ಯಕ್ಷವಾಗಿ ಯಾವುದೇ ಮುಜುಗರವಿರದೆ ಪ್ರಸ್ತುತಪಡಿಸುವ ಶಕ್ತಿಯು ಅಡಗಿರುತ್ತದೆ. ಇವೇ ಸ್ವಅನುಭವದ ವೇದ್ಯ ದಾಖಲೆಗಳೆನ್ನಬಹುದು. ಮನದಾಳದಲ್ಲಿ ಅಚ್ಚೊತ್ತುವ ಅಕ್ಷರಗಳಿಂದಲೇ ಆರಂಭವಾಗಿ ಗಂಭೀರ, ಸರಳ ಅಂಶಗಳನ್ನೆಲ್ಲಾ ಸರಾಗವಾಗಿ ಹರಿಯಬಿಡುವ ಮಾಧ್ಯಮವಾಗಿ ದಾಖಲಾಗುವ ಆತ್ಮಕತೆ ಪ್ರಸ್ತುತ ಜಗತ್ತಿನಲ್ಲಿ ಫ್ಯಾಷನ್ ಆಗಿ ಬೆಳವಣಿಗೆ ಪಡೆದಿರುವುದು ಬೇಸರದ ಸಂಗತಿ. ನೆನಪಿನಂಗಳದಲ್ಲಿ ನೂರು ಚಿತ್ತಾರಗಳ ಅಚ್ಚೊತ್ತಿದ ಭಾವನಾತ್ಮಕ ಪ್ರತಿಕ್ರಿಯೆಗಳನ್ನು ನೋವು ನಲಿವುಗಳ ಹಂದರದಲ್ಲಿ ಸೇರಿಸಿ  ಒಂದು ಕ್ಷಣ ತಾನಾರು ? ತನ್ನ ಅಸ್ತಿತ್ವ ಯಾವುದೆನ್ನುವ ಅಂಶದ ಮುಂದೆ ಸಾಗಿ ನಿಲ್ಲುತ್ತದೆ. ಈ ಹಿನ್ನೆಲೆಗಳನ್ನಿಟ್ಟು ಹೇಳಹೊರಟಿರುವ ಆತ್ಮಕತೆ ದಿಟ್ಟ ಕವಯತ್ರಿ ಪ್ರತಿಭಾ ನಂದಕುಮಾರ್ ಕುರಿತಾಗಿ. ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವ ಭರದಲ್ಲಿ ಬಾಲಿಶ ಪ್ರಶ್ನೆಗಳ ಸರಮಾಲೆಯ ಮುಂದೆ ಕುಹಕ ನಗು, ವ್ಯಂಗ್ಯ, ವಿಷಾದತೆ, ಅಪ್ಪಟ ಸತ್ಯಗಳ ಕಹಿತನಗಳಿಗೆ ಸಲಾಮು ನೀಡಿ ನೋವಿಗದ್ದಿದ ಕುಂಚದಲ್ಲಿ ಹೊಸತನದತ್ತ ಬದುಕನ್ನು ತೆರೆದುಕೊಳ್ಳುವ ಈಕೆ ಗಟ್ಟಿಗಿತ್ತಿಯಾಗಿ ಕಾಣುತ್ತಾರೆ. ತಿಪ್ಪೆಯಾಗಿರುವ ಜೀವನಕ್ಕೆ ಸುವರ್ಣ ಸ್ಪರ್ಶ ಕೊಟ್ಟು ಬದುಕನ್ನೇ ಹಸನಾಗಿಸಿದ ಈಕೆ ಎಲ್ಲಾ ಆಯಾಮಗಳಿಂದಲೂ ಭಿನ್ನಳಾಗಿ ಗೋಚರಿಸುತ್ತಾಳೆ.

ಮಹಿಳಾ ಬರಹಗಾರ್ತಿ ಬಿ. ಎಂ. ರೋಹಿಣಿಯವರ ಪ್ರಕಾರ "ಅನುಭವಗಳನ್ನು ಸತ್ಯದ ಪ್ರತಿರೂಪವಾಗಿ, ಗಟ್ಟಿತನದಿಂದ ಬಹಳ ನಾಜೂಕಾಗಿ  ದಾಖಲೆ ಮಾಡಿರುವಂಥವರು ತುಂಬ ವಿರಳ. ರಚನಾತ್ಮಕ ಹಿಡಿತಗಳ ನಿವೇದನೆಯ ಮೂಲಕ ಪ್ರಚುರಗೊಂಡ ಉತ್ತಮ ಆತ್ಮಕತೆಯೆಂದರೆ ಪ್ರತಿಭಾರವರ 'ಅನುದಿನದ ಅಂತರಗಂಗೆ' ಮಾತ್ರ." ಈ ಮಾತುಗಳಲ್ಲೇ ಇಲ್ಲಿನ ಬರಹದ ಗಟ್ಟಿತನವನ್ನು ಸರಳವಾಗಿ ಅರಿಯಬಹುದು. ಓದುತ್ತಾ ಹೋದಂತೆಲ್ಲ ಇಲ್ಲಿನ ಭಾವಾಭಿವ್ಯಕ್ತಿಯ ನೋವು ನಲಿವುಗಳು ಕ್ಷಣ ಮಾತ್ರದಲ್ಲಿ ಮರೆಯಾಗಿ ಮತ್ತೆ ಹೊಸದರೆಡೆಗೆ ತೆರೆದುಕೊಳ್ಳುತ್ತವೆ. ಲವಲವಿಕೆಯನ್ನೇ ತನ್ನ ಉಸಿರಾಗಿಸಿಕೊಂಡು ಮುಕ್ತವಾಗಿ ಜೀವನ ನಡೆಸುವುದು ಸಮಾಜಕ್ಕೊಂದು ಸವಾಲಿನ ಹಾಗೆ ದಾಖಲಾಗುತ್ತದೆ.  ಇದನ್ನು ಪ್ರತಿಭಾರವರು ಒಂದು ಬಗೆಯ 'ಥ್ರಿಲ್' ಎನ್ನುತ್ತಾ ಸುಮ್ಮನಾಗುತ್ತಾರೆ. ಇದೇ ಅವರ ಸರಳ ಸೂಕ್ಷ್ಮತೆಯ ಅನಾವರಣಕ್ಕೊಂದು ಕನ್ನಡಿಯಾಗಿದೆ. ಕಾವ್ಯಧರ್ಮವನ್ನೇ ತಮ್ಮ ಶಿಷ್ಟ ಮನೋಧರ್ಮವಾಗಿಸಿದ ಇವರ ಬದುಕೇ ಒಂದು ಸವಾಲು. ಬದುಕೆನ್ನುವ ಬೆಂಕಿಯಲ್ಲಿ ಬೆಂದು ಹೋದರೂ ಮನಸ್ಸಿನ ಸೂಕ್ಷ್ಮ ಭಾವಗಳು ಕರಗುವುದೇ ಇಲ್ಲ. ವೈಯಕ್ತಿಕ ಹಾಗೂ ವೃತ್ತಿ ಬದುಕುಗಳೆರಡೂ ಅವಿರತ ಸಾಹಸ ಪ್ರಯೋಗ ಮತ್ತು ಪ್ರತ್ಯಕ್ಷ ಅನುಭವಗಳ ದಾಖಲೆಯಾಗಿತ್ತು. ೧೯೫೫ರಲ್ಲಿ ವಿ. ಎಸ್. ರಾಮಚಂದ್ರ ರಾವ್ ಮತ್ತು ಯಮುನಾಬಾಯಿ ದಂಪತಿಯ ಮಗಳಾಗಿ ಹುಟ್ಟಿ ಸಾಹಿತ್ಯವಲಯದಲ್ಲಿ ಗಟ್ಟಿತನವನ್ನು ಸಾಧಿಸಿದ ಇವರ ಯಶೋಗಾಥೆ ಮೆಚ್ಚುವಂತಹುದು. 'ನಾವು ಹುಡುಗಿಯರೇ ಹೀಗೆ', 'ರಸ್ತೆಯಂಚಿನ ಗಾಡಿ', 'ಕವಡೆಯಾಟ', 'ಕಾಫಿ ಹೌಸ್' ಮೊದಲಾದ ಒಂಬತ್ತು ಕವನ ಸಂಕಲನಗಳು ಪ್ರಕಟಗೊಂಡಿವೆ. 'ಯುಗ', 'ಆಕ್ರಮಣ', 'ಸೂರ್ಯಕಾಂತಿ' ಮೊದಲಾದ ಕಥಾಸಂಕಲನಗಳು, 'ಮಿರ್ಚಿ ಮಸಾಲ' ಲೇಖನ ಸಂಗ್ರಹ, 'ನಿಮ್ಮಿ ಕಾಲಂ' ಅಂಕಣ ಬರಹಗಳ ರೂವಾರಿ ಇವರೇ. ಎನ್.ಜಿ.ಓ.ನಲ್ಲಿ ಭಾಷಾಂತರಕಾರರಾಗಿ ನಂತರ ಇಂಡಿಯನ್ ಎಕ್ಸ್‌ಪ್ರೆಸ್, ಡೆಕ್ಕನ್ ಹೆರಾಲ್ಡ್ ಮತ್ತು ಅಗ್ನಿ ಪತ್ರಿಕೆಗಳಲ್ಲಿ ಪತ್ರಕರ್ತೆಯಾಗಿ ಕಾರ್ಯ ನಿರ್ವಹಿಸಿದ್ದು, ಪ್ರಸ್ತುತ ಸಿನಿಮಾ ರಂಗದಲ್ಲಿ ಸಹಾಯಕ ನಿರ್ದೇಶಕಿಯಾಗಿ

ಇಲ್ಲಿ ಎಲ್ಲವುಗಳ ದಾಖಲೆ ಇದ್ದರೂ ಇನ್ನೇನನ್ನೋ ಹೇಳ ಹೊರಟ ದಾರಿ ಇದೆಯಲ್ಲಾ ಅದೇ ನಿಜವಾದ ಜೀವನದ ಒಂದು ಹೊಸತನ. ಹೆಣ್ಣಾಗಿದ್ದುಕೊಂಡು ಅಸ್ತವ್ಯಸ್ತ ಸಮಾಜದಲ್ಲಿ ಎಲ್ಲವುಗಳ ದಾಖಲೆ ಮಾಡುವುದು ಸ್ವಲ್ಪ ಕಷ್ಟ ಸಾಧ್ಯ. ಆದರೂ ನನ್ನೊಳಗೊಬ್ಬನಿದ್ದಾನೆ, ಅವನನ್ನು ಲೇಖನಿಯಲ್ಲಿ ಹಿಡಿದಿಡಬೇಕೆನ್ನುವ ಹಠವೇ ಈ ಕೃತಿಯ ಶಕ್ತಿಯಾಗಿದೆ.

**ಪದ್ಮಾವತಿ ಎಸ್.**

ಕಾರ್ಯನಿರ್ವಹಿಸುತ್ತಿರುವ ಇವರು ತನ್ನ ಬದುಕಿನ ಉನ್ನತ ಸ್ಥಿತಿಗಳನ್ನು ಕಾವ್ಯಕುಸುಮಗಳ ಜೊತೆ ಅದ್ದಿ ತೆಗೆದಿರುವಂತಹದು ಇವರ ಪ್ರತಿಭೆಗೊಂದು ಕನ್ನಡಿಯಾಗಿದೆ.

'ತನ್ನ ಕವನಗಳೇ ಆತ್ಮಕತೆಯ ದಾಖಲೆಗಳು' ಎನ್ನುವ ಮಾತುಗಳಲ್ಲಿ ತಂದೆಯ ನಡತೆ, ತನ್ನ ತೊಳಲಾಟ, ಪತಿಯ ಪ್ರೇಮೋತ್ಕರ್ಷ, ಸಂಕಷ್ಟಗಳ ನಡುವೆ ಸಂಬಂಧಗಳನ್ನು ಉಳಿಸಿಕೊಂಡ ಬಗೆ ಇವೆಲ್ಲಾ ಸುಲಭವಾಗಿ ದಾಖಲಾಗಿದ್ದರೂ ಮೇಲ್ನೋಟದ ಓದಿಗೆ ಅರ್ಥವಾಗುವುದಿಲ್ಲ. ಈ ಪದಪುಂಜಗಳನ್ನು ಅರಗಿಸಿಕೊಳ್ಳಬೇಕಾದರೆ ನಾವೂ ಪ್ರತಿಭಾರಂತೆ ಅನುಭವದ ಕತೆಗಳಲ್ಲಿ ಮಿಂದೇಳ ಬೇಕಾಗುತ್ತದೆ. ಇಲ್ಲಿ ಎಲ್ಲವುಗಳ ದಾಖಲೆ ಇದ್ದರೂ ಇನ್ನೇನನ್ನೋ ಹೇಳ ಹೊರಟ ದಾರಿ ಇದೆಯಲ್ಲಾ ಅದೇ ನಿಜವಾದ ಜೀವನದ ಒಂದು ಹೊಸತನ. ಹೆಣ್ಣಾಗಿದ್ದುಕೊಂಡು ಅಸ್ತವ್ಯಸ್ತ ಸಮಾಜದಲ್ಲಿ ಎಲ್ಲವುಗಳ ದಾಖಲೆ ಮಾಡುವುದು ಸ್ವಲ್ಪ ಕಷ್ಟ ಸಾಧ್ಯ. ಆದರೂ ನನ್ನೊಳಗೊಬ್ಬನಿದ್ದಾನೆ, ಅವನನ್ನು ಲೇಖನಿಯಲ್ಲಿ ಹಿಡಿದಿಡಬೇಕೆನ್ನುವ ಹಠವೇ ಈ ಕೃತಿಯ ಶಕ್ತಿಯಾಗಿದೆ. ಅವರ ಮಾತುಗಳಲ್ಲೇ ನೋಡುವುದಾದರೆ ಜನರು ತಪ್ಪು ತಿಳಿಯುತ್ತಾರೆ ಎನ್ನುವ ಕಾರಣಕ್ಕೆ ಅವರಿಗೆ ಸರಿಯಾದುದನ್ನು ತಿಳಿಸುವುದಕ್ಕಾಗಿ ಯಾರಾದರೂ ಆತ್ಮಕತೆ ಬರೆಯುತ್ತಾರೆ ಅಂದರೆ ಅದು ಮೂರ್ಖತನ. ಯಾಕೆಂದರೆ ನಡೆದುಹೋದ ಘಟನೆಗಳ ಬಗ್ಗೆ ಹೇಳುವಾಗ ಒಂದು ದೃಷ್ಟಿಕೋನದಿಂದ ಹೇಳ ಬಹುದೇ ಹೊರತು ನಿರ್ಣಾಯಕವಾಗಿ ಯಾರು ಸರಿ ಮತ್ತು ಯಾರು ತಪ್ಪು ಎಂದು ಹೇಳಲಾಗುವುದಿಲ್ಲ. 'ನನ್ನ ಬದುಕಿನಲ್ಲಿ ನಾನು ತೆಗೆದುಕೊಂಡ ಅನೇಕ ನಿರ್ಣಯಗಳು ಹಾಗೆಯೇ ಸರಿ ಮತ್ತು ತಪ್ಪುಗಳ ವ್ಯಾಖ್ಯಾನಕ್ಕೆ ಒಳಗಾಗಿರುವುದರಿಂದ ಈ ಮಾತು ಹೇಳುತ್ತಿದ್ದೇನೆ' ಎನ್ನುತ್ತಾರೆ.

ಕೊಡುವುದೇನು ಕೊಂಬುವುದೇನು
*ಒಲವು ಪ್ರೀತಿ ಸ್ನೇಹ ?*
*ಹೊರಗೆ ಬರಿದು*
*ಒಳಗೆ ಬಲಿದು*
ಇದ್ದವರಿಗೆ ನೇಮ...

'ಪ್ರೀತಿ ಮರೀಚಿಕೆ ಸ್ನೇಹ ಅಜರಾಮರ' ಎನ್ನುವ ಅಂಶವನ್ನು ದಾಖಲಿಸುವ ಮೂಲಕ ಸೋಲನ್ನು ಗೆದ್ದು ತನ್ನತನವನ್ನು ದಾಖಲಿಸಿದ ಜೀವ ಪ್ರತಿಭಾರದೆಂದರೆ ತಪ್ಪಾಗದು. ಅಡ್ಡಾದಿಡ್ಡಿ ಬೆಳೆದ ಹುಲ್ಲುಗಳ ಬಗೆಗಿನ ಕೀಳರಿಮೆ ಮರೆಯಾ ಯಿತಾದರೂ 'ಸುಂದರಿ' ನಾನಲ್ಲವೆಂಬ ನೋವು ಅಲ್ಲಲ್ಲಿ ಕಾಣಿಸಿದ್ದಿದೆ. 'ಪ್ರತಿಭಾ ಈಸ್ ಟ್ಯಾಲೆಂಟ್ ನೋ ಪ್ರೊಡಕ್ಟಿವಿಟಿ' ಎನ್ನುವ ಮಾತಿಗೆ ಬದ್ಧರಾಗಿ ಅನುಭವಗಳ ದಾಖಲೆಯಲ್ಲಿ ನಿರೂಪಣೆ ಮುಖ್ಯವೇ ಹೊರತು ವ್ಯಕ್ತಿಗಳ ಹೆಸರನ್ನು ದಾಖಲಿಸುವುದಲ್ಲ ಎನ್ನುವ ಧೋರಣೆಯನ್ನು ಪ್ರತಿಷ್ಠಾಪಿಸಿ ಕ್ರಮೇಣ ಸಲೀಸಾಗಿ ಬರವಣಿಗೆಯಲ್ಲಿ ತೊಡಗಿಸಿಕೊಂಡವರು ಇವರು. ಆದರೆ ಮುಖ್ಯವೆನಿಸುವ ನಾಮಧೇಯಗಳು ದಾಖಲಾಗಿದ್ದರೆ ಅಂತಹ ಕುತೂಹಲವನ್ನು ಈ ಕೃತಿ ಹೊಂದಿರುತ್ತಿರಲಿಲ್ಲವೇನೋ.

'ಪ್ರೀತಿಗಾಗಿ ಹುಡುಕಾಟ' ಎನ್ನುವ ದಾಖಲೆಯಲ್ಲಿ ಸಂಪೂರ್ಣವಾಗಿ ಪ್ರೀತಿಯನ್ನು ಬಯಸುವ ಹೆಣ್ಣಿನ ಆಕಾಂಕ್ಷೆ ಗಂಡ, ಮಕ್ಕಳಿಗೆ ಓರಗೆಯ ಗೆಳತಿಯರಿಗೂ ಶೂನ್ಯ ಪ್ರಶ್ನೆಯಾಗಿ ಉಳಿದಿದ್ದು ಕೆಲವೊಮ್ಮೆ ವಿಶಿಷ್ಟವೆನಿಸುತ್ತದೆ. ಈ ಪ್ರಕ್ಷುಬ್ಧ ಸ್ಥಿತಿಯನ್ನು ದಾಖಲಿಸಿದ ಬಗೆ ಹೀಗಿದೆ: "ನನ್ನ ಅಂತರಗಂಗೆಯಲ್ಲಿ ಸದಾ ಅಲ್ಲೋಲ ಕಲ್ಲೋಲ, ತೇಲಲೂ ಆಗದ ಮುಳುಗಲೂ ಆಗದ ಈಜಿ ದಾಟಲೂ ಆಗದ ಕಳವಳ. ಪಾತಾಳ ಗರಡಿ ಹಾಕಿದರೂ ಸಿಗದ ಸಾವಿರಾರು ಅವಶೇಷಗಳು. ಹಠಾತ್ತನೆ ಒಂದೊಂದು ಕಡೆ ಮೊಳಕಾಲುದ್ದ ನೀರಿನ ಎತ್ತರ" ಇಂತಹ ಸಂದರ್ಭದಲ್ಲಿ ಆತ್ಮಕತೆಗಳು ಸ್ವಸಾಮರ್ಥ್ಯದ ಹಿಡಿತದಲ್ಲಿ ಸಹಜ ದಾಚೆಗಿನ ಅನುಭವಗಳಾಗಿರದಿದ್ದರೂ ಸಮಸ್ಯೆಯಿಲ್ಲ. ತಾನು ಈ ಆಯಾಮಗಳೆಡೆ ಸಾಧಿಸಿದ ಅಂತರಗಂಗೆಯಾಗುವ ನೆಲೆ ವಿಭಿನ್ನವಾದುದು. ಯಾರೋ ಹೇಳಿದ ದಾಖಲೆಗಳಿಗಿಂತ ತಾನು ಅನುಭವಿಸಿದ ನಿರಂತರ ಹುಡುಕಾಟಗಳ ಅಂತರಂಗವನ್ನು ಬಿಚ್ಚಿಡುವ ದಾಖಲೆಗಳಾಗುವುದು ಗಮನಾರ್ಹ. ಪ್ರತಿಭಾ ಗಟ್ಟಿಗಿತ್ತಿ, 'ಟು ಸರ್ ವಿಥ್ ಲವ್'ನಲ್ಲಿ ನಿರೂಪಿಸಿರುವ ಮೇಷ್ಟ್ರನ್ನು ತನ್ನ ಮಾರ್ಗದರ್ಶಿಯಾಗಿ ಬಯಸಿದ ಪರಿ ಹೃದಯ ತಲುಪುವಂತೆ ದಾಖಲಾಗಿದೆ. ಈ ಎಲ್ಲ ಅಂಶಗಳು ದಾಖಲಾಗುವಾಗ ಗಂಭೀರವೆನಿಸದಿದ್ದರೂ 'ಜಗಳದಲ್ಲೇ ಪ್ರೀತಿ ಇರೋದು ಪ್ರೀತಿ ಇಲ್ಲದಿದ್ದರೆ ಜಗಳ ಆಗಲ್ಲ' ಪ್ರತಿಭಾರವರ ಮಾತಿನ ಧಾಟಿಯನ್ನು ನೋಡುತ್ತಾ ಸಾಗಿದಾಗ ಪ್ರತಿಭಾ ಮತ್ತು ನಂದಕುಮಾರ್ ಜೊತೆಗಿನ ಮಧುರ ಬಾಂಧವ್ಯದ ನಡುವಿನ ಕಚ್ಚಾಟಗಳು ತಾರಕಕ್ಕೇರಿದಾಗ ಮನೆ ಬಿಟ್ಟು ಹೋಗು ಎನ್ನುವ ಮಾತು ಮೂರೂವರೆ ವರ್ಷಗಳ ಅಂತರವನ್ನು ನಿರ್ಮಿಸಿದ್ದವು. ಇಲ್ಲಿ ಜಾತಿಗಳು ಬೇರಾಗಿದ್ದರೂ ಪ್ರೀತಿಗೆ ಅಡ್ಡಿಯಾಗದ ಜಾತಿಪ್ರೇಮ ಆನಂತರದಲ್ಲಿ ಹೊಸಮನೆಯ ಗೃಹಪ್ರವೇಶದ ಮೂಲಕ ಒಂದಾಗುವಂತೆ ಮಾಡಿದುದು ಅಚ್ಚರಿಯೆನಿಸಿತು. ತಾನು 'ವಕ್ರದಂತೆ, ಕುರೂಪಿ, ಪ್ರೀತಿಗೆ ಕುರುಡು ಅಡ್ಡಿಯೇ' ಎನ್ನುವ ಸಾಲುಗಳ ಮೂಲಕ ಪ್ರೀತಿ ಸ್ನೇಹಗಳನ್ನು ಗಟ್ಟಿಗೊಳಿಸಿದ್ದು ತನಗಿಂತ ದುಪ್ಪಟ್ಟು ವಯಸ್ಸಾದ ವ್ಯಕ್ತಿಯ ಸಂಬಂಧದ ಮೂಲಕ. ಈ ಸಂಭ್ರಮದ ಸಂಬಂಧದ ಅನಾವರಣ ಎಲ್ಲಿಯೂ ಹಳತಾಗಲೇ ಇಲ್ಲ. ಪ್ರೀತಿ ಪ್ರೇಮ ಪ್ರಣಯ ಎನ್ನುವ ತೊಳಲಾಟಗಳ ಮಧ್ಯೆ ತನ್ನನ್ನು 'ಬಜಾರಿ' ಎಂದು ಬಿಂಬಿಸುವುದರಲ್ಲಿ ಕೊಳಕುತನವಿಲ್ಲ. ತಾನು ನಂಬಿದ ಜೀವವನ್ನು ಮುಗ್ಧ ಮಗುವಿನಂತೆ ಲಲ್ಲೆಗರೆದು ಪ್ರೀತಿಸುವ ಜಾಣ್ಮೆ ಕ್ಷಣಕಾಲ ಎಂಥವರನ್ನೂ ಯೋಚಿಸುವಂತೆ ಮಾಡುತ್ತದೆ. 'ಕಾವ್ಯ' ಎನ್ನುವ ಅಸ್ತ್ರದ ಮೂಲಕ ಪ್ರೀತಿ ಪಡೆಯುವ, ಕೊಡುವ, ದಾಖಲಿಸುವ ಹುಮ್ಮಸ್ಸು ದಾಖಲಾದುದು ತನ್ನ ಮನದಾಳದ ಗಟ್ಟಿತನ ದಿಂದಲೇ. ಈ ನಡುವೆ ಪ್ರೀತಿಯನ್ನು ಅಂಗಲಾಚುವ ಕೈಗಳು ಕೊನೆಗೊಮ್ಮೆ 'ಪ್ರೀತಿ ಅಪಾತ್ರನಿಗೆ ದಾನವಾಗಬಾರದು ಯಾರು ತನ್ನನ್ನು ಗಾಢವಾಗಿ ಪ್ರೀತಿಸುತ್ತಾರೊ ಅವರನ್ನೇ ತಾನು ಪ್ರೀತಿಸಬೇಕು. ಇಲ್ಲದಿದ್ದರೆ ಕೊನೆಯವರೆಗೂ ಈ ಹಪಾಹಪಿ ಮುಗಿಯುವುದಿಲ್ಲ. ಇನ್ನು ಮುಂದೆ ಯಾರಿಗೂ ಪ್ರೀತಿ ಕೊಡುವುದಿಲ್ಲ ಪಡೆಯುತ್ತೇನೆ' ಎಂದು ಮಾತು ಕೊಡುವ ಪ್ರತಿಭಾ ಎಲ್ಲರಿಗಿಂತ ಕೊಂಚ ಭಿನ್ನವಾಗಿಬಿಡುತ್ತಾರೆ.

*ಪ್ರೀತಿ ಇಲ್ಲದ ಮೇಲೆ*
*ಜೀವ ತೇಯುವವಳೂ*
*ರಂಡೆ ಮುಂಡೆ ಚಿತೆಗೆ ಆಹುತಿ*
*ಬಿಟ್ಟವರ ನಾಡಿನಲ್ಲಿ*
*ಕಟ್ಟಿಕೊಳ್ಳುವುದೆಷ್ಟರ ಕೆಲಸ*
*ಬಿಡದೆ ಬಾಳುವೆನೆಂದಾಗ ಭಯವಾಗುತ್ತಿತ್ತು*

ಇಲ್ಲಿಯ ಅನಾವರಣದ ಮುಂದೆ ಪ್ರತಿಭಾ ಹಾಕುವ ಪ್ರಶ್ನೆಯ ಸವಾಲು ಹೃದಯ ತಲುಪು ವಂಥದ್ದು. ಕಳೆದುಹೋದವಳನ್ನು ಹುಡುಕಿಕೊಂಡು ಹೋಗಿ ಯುದ್ಧ ಮಾಡಿ ವಾಪಸ್ಸು ಬಂದ ರಾಮನ ಪ್ರೀತಿ ಹೆಚ್ಚೋ ? ಅಥವಾ ಅವಳಿಗಾಗಿ ಜೀವ ಮಾತ್ರವಲ್ಲ ಎಲ್ಲವನ್ನೂ ಕಳೆದುಕೊಂಡ ರಾವಣನ ಪ್ರೀತಿ ಹೆಚ್ಚೋ ? ಇಲ್ಲಿ ರಾಮನೂ ಸಭ್ಯ ರಾವಣನೂ ಸಭ್ಯ. ಎಲ್ಲವೂ ಬರಿಯ ಕಾಲ ಮರ್ಮಗಳಷ್ಟೆ ಎನ್ನುವ ನಿಲುವು ಸಮಂಜಸ ವೆನಿಸುವುದು. ತುಂಬ ಗಟ್ಟಿ ಹೃದಯಸ್ಥರಿಗೆ ಸಾಂತ್ವನ ಸಿಗುವುದು ಬಹಳ ವಿರಳವೆನ್ನುವ ಸವಾಲನ್ನು ಹಾಕುತ್ತಾ ತಾನೂ ಗಟ್ಟಿಗಿತ್ತಿಯಾದ ಕಾರಣ ತನ್ನ ನೋವನ್ನು ತಾನೇ ಸಾವರಿಸಿದೆ. ಯಾರ ಹೆಗಲ ಮೇಲೂ ಹಾಕಲಿಲ್ಲವೆನ್ನುವ ಕ್ರಮವಾದ ಉತ್ತರ ಎಲ್ಲರನ್ನೂ ಸೆಳೆಯುವುದು. ತನ್ನ ವಯಸ್ಸಿಗಿಂತ ಅರ್ಧದಷ್ಟು ಹೆಚ್ಚಿನ ಪ್ರೊಫೆಸರ್ ಜೊತೆಗಿನ ಸಲುಗೆಯ ಸಂಬಂಧವು ಕೇವಲ ಮನೋಭಿಲಾಷೆಗೆ ಹಿಡಿದ ಕನ್ನಡಿಯಾಗಿ ದಾಖಲಾಗಿದ್ದು ಗಮನಾರ್ಹ.

*ಆವತ್ತೇ ನಾವು ಕಾಮನಬಿಲ್ಲಿನ ಮೆಳೆಗೆ ಸಿಕ್ಕಿ*
*ಪೂರಾ ತೊಯ್ದು ತೊಪ್ಪೆಯಾದೆವು*
*ಒದ್ದೆ ಕೂದಲು ಜಗ್ಗಿ ಅವರು ಕಿಚಾಯಿಸಿದರು*
*ಹಳೆಯ ಕೊಳಕ್ಕೊಂದು ಮೀನು ಬೇಕೆ ?*
*ಅಜ್ಜಿಯಾಗಿದ್ದರೆ ಹೂಂ ಎನ್ನುತ್ತಿದ್ದಳು*
*ನಾನು ಬೇಡಾ ಅಂದೆ...*

ಈ ಎಲ್ಲಾ ಜಂಜಾಟಗಳ ಮಧ್ಯೆ ಪ್ರತಿಭಾರನ್ನು ಸೆಟೆದು ನಿಲ್ಲಿಸಿದುದು ಅಂತರಂಗದ ನಿರಾಳ ಬದುಕು ಮಾತ್ರ. ಹೆಣ್ಣು ಮಕ್ಕಳು ನಾಲ್ಕುಗೋಡೆಗಳ ನಡುವೆ ಮಾತ್ರ ಬಂಧಿಯಾಗಬಾರದೆನ್ನುವ ನಿಲುವನ್ನು ಪುಷ್ಟೀಕರಿಸುವ ಮೂಲಕ ಮಹಿಳಾ ಲೋಕಕ್ಕೆ ಮಾದರಿ ತೋರಿದ್ದು ವಿಶೇಷ.

ಪದ್ಮಾವತಿ ಎನ್.
ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ

# ಅಮೆರಿಕ : ವ್ಯಕ್ತಿ ಸ್ವಾತಂತ್ರ್ಯದ ಹರಣ ಬಯಲು


ಎಡ್ವರ್ಡ್ ಸ್ನೋಡೆನ್

ಕಳೆದ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಕಮ್ಯುನಿಸ್ಟ್ ಸರಕಾರಗಳ ಮೇಲೆ ಇದ್ದ ಬಹುದೊಡ್ಡ ಆಪಾದನೆ ವ್ಯಕ್ತಿ ಸ್ವಾತಂತ್ರ್ಯದ ಹರಣ. "ದೊಡ್ಡಣ್ಣ ನೋಡುತ್ತಿದ್ದಾನೆ" (ಬಿಗ್ ಬ್ರದರ್ ಈಸ್ ವಾಚಿಂಗ್ ಯು) ಎನ್ನುವ ಪ್ರಯೋಗ ಬಂದದ್ದೂ ಆಗಲೆ. ಇದನ್ನೇ ಮೂಲಾಧಾರವಾಗಿರಿಸಿಕೊಂಡು ಜಾರ್ಜ್ ಆರ್‌ವೆಲ್ ಎಂಬ ಆಂಗ್ಲ ಕಾದಂಬರಿಕಾರ ಬರೆದ '೧೯೮೪' ಕಾದಂಬರಿ ಸಾಕಷ್ಟು ವಿವಾದ ಸೃಷ್ಟಿಸಿತ್ತು. ಸಾರಸ್ವತ ಲೋಕದಲ್ಲಿ ಆತ ಕಾದಂಬರಿಯಲ್ಲಿ ಕಮ್ಯುನಿಸ್ಟ್ ಸರ್ವಾಧಿಕಾರದಲ್ಲಿ ವ್ಯಕ್ತಿ ಸ್ವಾತಂತ್ರ್ಯಹರಣ ಮತ್ತು ಭೀತಿಯ ವಾತಾವರಣವನ್ನು ಅತ್ಯಂತ ರಂಜಕವಾಗಿ ಬಣ್ಣಿಸಿದ್ದ. ಈಗ ಅವನ್ನೆಲ್ಲ ನೆನಪಿಸಿಕೊಳ್ಳಲು ಕಾರಣ ಬಹು ದೊಡ್ಡ ಪ್ರಮಾಣದಲ್ಲಿ ಅಮೆರಿಕದ ದೊಡ್ಡಣ್ಣ ನಡೆಸಿರುವ ಟೆಲಿಫೋನ್ ಕದ್ದಾಲಿಕೆ, ವ್ಯಾಪಕವಾಗಿ ಹರಡಿರುವ ಸೆನ್ಸಾರ್ ವ್ಯವಸ್ಥೆ. ಆಧುನಿಕ ಯುಗದಲ್ಲಿ ಇದು ಇ–ಮೇಲ್, ಫೇಸ್‌ಬುಕ್ ಮುಂತಾದವನ್ನು ಒಳಗೊಂಡಿದೆ. ಅತ್ಯಂತ ರಹಸ್ಯವಾಗಿ ನಡೆಯುತ್ತಿದ್ದ ಈ ಕಾರ್ಯಾಚರಣೆ ಈಗ ಬಯಲಾಗಿದೆ. ಕುತೂಹಲಕರವಾದ ಸಂಗತಿ ಎಂದರೆ ಅಮೆರಿಕದ ಅಧ್ಯಕ್ಷರನ್ನೂ ಒಳಗೊಂಡಂತೆ ಆಡಳಿತ ಅದನ್ನು ಸಮರ್ಥಿಸಿಕೊಳ್ಳುತ್ತಿರುವುದು. ಅನ್ಯದೇಶಗಳ ಮೇಲೆ ಇಂಥ ಆಪಾದನೆಗಳ ಗೂಬೆ ಕೂರಿಸುತ್ತಿದ್ದ ಅಮೆರಿಕ ತಾನೇ ಅಂಥ ದುರಾಚಾರದಲ್ಲಿ ತೊಡಗಿದೆ. ಅಮೆರಿಕದ ಎಫ್‌ಬಿಐ (ಫೆಡರಲ್ ಬ್ಯೂರೋ ಆಫ್ ಇನ್ವೆಸ್ಟಿಗೇಶನ್), ಸಿಐಎ ಗೂಢಚರ್ಯೆ ಸಂಸ್ಥೆಗಳ ವ್ಯಾಪಕವಾದ ಜಾಲದ ವಿಚಾರ ಹೊಸದೇನಲ್ಲ. ಅಮೆರಿಕದ ಪ್ರತಿಯೊಬ್ಬ ನಾಗರಿಕನ ಬಗ್ಗೆ ಮಾಹಿತಿಯನ್ನಿರಿಸಿಕೊಂಡಿರುವ ಎಫ್‌ಬಿಐ ಎಂಥವರನ್ನೂ ಭಯಗೊಳಿಸುವ ತನಿಖಾ ವ್ಯವಸ್ಥೆ. ಇನ್ನು ಸಿಐಎ ಕಾರ್ಯಾಚರಣೆಗಳು ಸರ್ವವಿಧಿತ. ಈ ಬರಹದ ವ್ಯಾಪ್ತಿಗೆ ಬಾರದು.




ಅಮೆರಿಕದ ನಾಗರಿಕ ಸ್ವಾತಂತ್ರ್ಯ ಎತ್ತಿಹಿಡಿಯುವ ಸಂಘಟನೆ ಪ್ರಕಾರ ಅಸಂಖ್ಯಾತ ಅಮಾಯಕ ನಾಗರಿಕರ ಮೇಲೆ ಸರಕಾರಿ ಸಂಸ್ಥೆಗಳು ನಿಗಾ ಇರಿಸಿರುವುದು ನಿಜವಾಗಿಯೂ ಅಪಾಯಕಾರಿ. ಸಂಘಟನೆಯ ನಿರ್ದೇಶಕ ಜಮೀಲ್ ಜಾಫರ್ ಪ್ರಕಾರ ಇದು ಆರ್‌ವೆಲ್ಲನ ಕಲ್ಪನೆಗೂ ಮೀರಿದ ಸಂಗತಿ. ನಾಗರಿಕರ ಮೂಲ ಹಕ್ಕುಗಳನ್ನೇ ಕಸಿದುಕೊಂಡಿದೆ. ಕಳೆದ ಏಪ್ರಿಲ್ ತಿಂಗಳಲ್ಲಿ ನ್ಯಾಯಾಧೀಶರೊಬ್ಬರ ಸಮ್ಮತಿ ಪಡೆದುಕೊಂಡ ಅಮೆರಿಕದ ರಾಷ್ಟ್ರೀಯ ಭದ್ರತಾ ಸಂಸ್ಥೆ, ವೆರಿಜೋನ್ ಎಂಬ ಬೃಹತ್ ಟೆಲಿಕಾಮ್ ಸಂಸ್ಥೆಯಿಂದ ಲಕ್ಷಾಂತರ ನಾಗರಿಕರ ದೂರವಾಣಿ ಕರೆಗಳ ಮಾಹಿತಿಯನ್ನು ಪಡೆದುಕೊಂಡಿದೆ. ಅದೇ ರೀತಿ ಇತರ ಟೆಲಿಕಾಮ್ ಸಂಸ್ಥೆಗಳಿಂದಲೂ ಮಾಹಿತಿ ಪಡೆದುಕೊಂಡಿದೆ. ಜಾರ್ಜ್ ಬುಷ್ ಆಡಳಿತ ಕಾಲದಲ್ಲಿ ಪ್ರಾರಂಭವಾದ ಈ ಅನಿಷ್ಟ ಕ್ರಮವನ್ನು ಒಬಾಮಾ ಆಡಳಿತ ಮುಂದುವರಿಸಿದೆ. ಇವೆಲ್ಲ ನಡೆಯುತ್ತಿರುವುದು ಭದ್ರತೆಯ ಹೆಸರಿನಲ್ಲಿ. ವರ್ಲ್ಡ್ ಟ್ರೇಡ್ ಸೆಂಟರ್ ಮೇಲೆ ಭಯೋತ್ಪಾದಕರು ನಡೆಸಿದ ದಾಳಿಯ ನಂತರ ಭದ್ರತೆಯ ಹೆಸರಿನಲ್ಲಿ ವಿಪರೀತ ಅನಾಚಾರಗಳು ನಡೆಯುತ್ತಿವೆ. ಒಂದು ಬಗೆಯ ಭಯದ ವಾತಾವರಣ ಸೃಷ್ಟಿಸಿರುವ ಆಡಳಿತ ಸಾವಿರಾರು ಮಂದಿ ಶಂಕಿತರನ್ನು ವಿಚಾರಣೆ ಇಲ್ಲದೆ ಕಾರಾಗೃಹದಲ್ಲಿರಿಸಿದೆ. ಕಮ್ಯುನಿಸಮ್ ವಿಸ್ತರಣೆಯ ಭೀತಿಯ ಕಾಲದಲ್ಲಿ, ಅಂದರೆ ಇಪ್ಪತ್ತನೆ ಶತಮಾನದ ನಡುವಿನ ಕಾಲದಲ್ಲಿದ್ದ ಮೆಕಾರ್ಥಿ ಕಾಯಿದೆಯ ದಿನಗಳನ್ನು ಅದು ನೆನಪಿಗೆ ತರುತ್ತಿದೆ.

ಟೆಲಿಫೋನ್ ಕದ್ದಾಲಿಕೆ ಮತ್ತು ಅಂತರ್ಜಾಲದ ಕಾರ್ಯಚಟುವಟಿಕೆಗಳ ಮೇಲೆ ಸರಕಾರಿ ಸಂಸ್ಥೆಗಳು ನಿಗಾ ಇರಿಸುವುದನ್ನು ಅಧ್ಯಕ್ಷ ಬರಾಕ್ ಒಬಾಮಾ ಬಲವಾಗಿ ಸಮರ್ಥಿಸಿದ್ದಾರೆ. ಭದ್ರತೆಯ ದೃಷ್ಟಿಯಿಂದ, ದಾಳಿಯಿಂದ ಅಮೆರಿಕದ ರಕ್ಷಣೆಗಾಗಿ 'ಮಿತವಾದ' ರೀತಿಯಲ್ಲಿ ಖಾಸಗಿ ವ್ಯಕ್ತಿಗಳ ಗೋಪ್ಯತೆಯ ಉಲ್ಲಂಘನೆ ಅಗತ್ಯ ಎಂದಿದ್ದಾರೆ. ಅರ್ಥಾತ್ ನಾಗರಿಕ ಸ್ವಾತಂತ್ರ್ಯದ ಹರಣವನ್ನು ಎತ್ತಿಹಿಡಿದಿದ್ದಾರೆ. 'ಯಾರೂ ನಿಮ್ಮ ದೂರವಾಣಿ ಕರೆಯನ್ನು ಆಲಿಸುತ್ತಿಲ್ಲ' ಎಂದು ಹೇಳುವ ಒಬಾಮಾ ಲಕ್ಷಾಂತರ ಜನರ ಟೆಲಿಫೋನ್ ಕದ್ದಾಲಿಕೆಯನ್ನು ಅನಿವಾರ್ಯ ಎಂದಿರುವುದು ಹುರುಳಿಲ್ಲದ ವಾದ. ಈ ಕಾರ್ಯಕ್ರಮಕ್ಕೆ ನ್ಯಾಯಾಧೀಶರ ಹಾಗೂ ಕಾಂಗ್ರೆಸ್ ಸದನದ ಸಮ್ಮತಿ ಇದೆ ಎಂದೂ ಅವರು ಹೇಳಿದ್ದಾರೆ. "ಕಿಂಚಿತ್ತೂ ತೊಂದರೆ ಇಲ್ಲದೆ ನೀವು ನೂರಕ್ಕೆ ನೂರರಷ್ಟು ಭದ್ರತೆಯನ್ನೂ ಮತ್ತು ಅದೇ ಬಗೆಯಲ್ಲಿ ನೂರಕ್ಕೆ ನೂರರಷ್ಟು ಗೋಪ್ಯತೆ ಹೊಂದಿರಲು ಸಾಧ್ಯವಿಲ್ಲ" ಎಂದು ಅವರು ಕ್ಯಾಲಿಫೋರ್ನಿಯಾದಲ್ಲಿ ಮಾತನಾಡುತ್ತ ಹೇಳಿದ್ದಾರೆ. ನಾಗರಿಕ ಸಮಾಜದಲ್ಲಿ ನಾವು ಕೆಲವು ಹೊಂದಾಣಿಕೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ ಎಂಬುದನ್ನೂ ಒತ್ತಿ ಹೇಳಿದ್ದಾರೆ.

ರಾಷ್ಟ್ರೀಯ ಭದ್ರತಾ ಸಂಸ್ಥೆ ಮತ್ತು ಎಫ್‌ಬಿಐ ಅಮೆರಿಕದ ನಾಗರಿಕರ ದೂರವಾಣಿ ಕರೆಗಳನ್ನು ಮತ್ತು ಅಂತರ್ಜಾಲ ಸಂಪರ್ಕಗಳನ್ನು ರಹಸ್ಯವಾಗಿ ಗಮನಿಸುತ್ತಿದೆ ಎಂಬ ವಿಚಾರವನ್ನು ಬಯಲಿಗೆಳೆದದ್ದು ಬ್ರಿಟನ್ನಿನ 'ಗಾರ್ಡಿಯನ್' ಮತ್ತು ಅಮೆರಿಕದ ವಾಷಿಂಗ್ಟನ್ ಪೋಸ್ಟ್ ಪತ್ರಿಕೆಗಳು. ಈ ವರದಿಗಳು ವ್ಯಾಪಕವಾದ ಚರ್ಚೆಗೆ ಎಡೆಮಾಡಿದುವು. ರಹಸ್ಯ ಕಾರ್ಯಾಚರಣೆಗಳ ಈ ಕಾರ್ಯಕ್ರಮದ ಸುದ್ದಿ ಬಹಿರಂಗಗೊಂಡದ್ದು ಅಮೆರಿಕದ ಆಡಳಿತಕ್ಕೆ ದೊಡ್ಡ ತಲೆನೋವಾಗಿದೆ. ಇಂಥ ಕಾರ್ಯಾಚರಣೆಗಳೆಲ್ಲ ಅತ್ಯಂತ ಗೋಪ್ಯವಾಗಿದ್ದು ವರ್ಗೀಕೃತ ಕಡತಗಳಾಗಿರುತ್ತವೆ. ಅಮೆರಿಕ ನಡೆಸಿರುವ ರಹಸ್ಯ ಕಾರ್ಯಾಚರಣೆಗಳ ದಾಖಲೆಗಳನ್ನು ಮೊದಲು ಹೊರಗೆಡಹಿದ್ದು 'ವಿಕಿಲೀಕ್ಸ್' ಸಂಸ್ಥೆ. ಅದರ ಮುಖ್ಯಸ್ಥ ಅಸಾಂಜ್ ಈಗ ಈಕ್ವೆಡಾರ್‌ನ ಲಂಡನ್ನಿನ ರಾಯಭಾರಿ ಕಛೇರಿಯಲ್ಲಿ ಆಶ್ರಯ ಪಡೆದಿದ್ದಾನೆ. ಆತನ ಮೇಲೆ ಸುಳ್ಳು ಮೊಕದ್ದಮೆಯೊಂದನ್ನು ಹೂಡಲಾಗಿದೆ.

ಅಮೆರಿಕದ ಗೂಢಚರ್ಯೆಯ ಇತಿಹಾಸದಲ್ಲಿ ಅತ್ಯಂತ ರಹಸ್ಯ ಮಾಹಿತಿಗಳನ್ನು ಹೊರಗೆಡಹಿದ್ದು ಎಡ್ವರ್ಡ್ ಸ್ನೋಡೆನ್ ಎಂಬಾತ. ೨೯ ವಯಸ್ಸಿನ ಈತ ಮೊದಲು ಸಿಐಎಯ ತಂತ್ರಜ್ಞನಾಗಿದ್ದ. ಗಾರ್ಡಿಯನ್ ಮತ್ತು ವಾಷಿಂಗ್ಟನ್ ಪೋಸ್ಟ್ ಪತ್ರಿಕೆಗಳಿಗೆ ವಿವರಗಳನ್ನು ನೀಡಿದ ಈತ ಈಗ ಹಾಂಗ್‌ಕಾಂಗ್‌ನಲ್ಲಿದ್ದಾರೆ. ಆತನನ್ನು ಬಂಧಿಸಿ ವಿಚಾರಣೆಗೆ ಗುರಿಪಡಿಸಲು ಅಮೆರಿಕದ ಆಡಳಿತ ಸಿದ್ಧವಾಗಿದೆ. ಆಡಳಿತದ ರಹಸ್ಯ ಕಾರ್ಯಾಚರಣೆಗಳನ್ನು ಬಯಲಿಗೆಳೆದ ಈತನನ್ನು ನಾಯಕನೆನ್ನಬೇಕೋ, ಖಳನಾಯಕನೆನ್ನಬೇಕೋ ಎಂಬ

**ಸೀಯಾರ್ಕೆ**

ಬಗ್ಗೆ ಅಮೆರಿಕದಲ್ಲಿ ಭಾರಿ ಚರ್ಚೆ ನಡೆಯುತ್ತಿದೆ. ದೇಶದ್ರೋಹಿ ಎಂದು ಕರೆದು ಶಿಕ್ಷೆಗೆ ಗುರಿಪಡಿಸಬೇಕೆಂಬುದು ಅಮೆರಿಕದ ಆಡಳಿತೆಯ ಅಭಿಮತ. ಎಡ್ವರ್ಡ್ ಸ್ನೋಡೆನ್‌ಅನ್ನು ವಿಚಾರಣೆಗೆ ಗುರಿಪಡಿಸಿ, ಶಿಕ್ಷೆ ನೀಡದೆ ಕ್ಷಮೆ ನೀಡಬೇಕು ಎಂಬ ಕೋರಿಕೆಯ ಮನವಿಗೆ ಈಗಾಗಲೇ ೪೮,೦೦೦ ಸಹಿ ಸಂಗ್ರಹವಾಗಿದೆ. ಈ ಮನವಿಯನ್ನು ಅಮೆರಿಕದ ಕಾಂಗ್ರೆಸ್ ಸದನಕ್ಕೆ ಸಲ್ಲಿಸಲು ಯೋಜಿಸಲಾಗಿದೆ. ಒಂದು ಲಕ್ಷ ಸಹಿ ಸಂಗ್ರಹಿಸುವುದು ಸಂಘಟಕರ ಗುರಿ. ತನ್ನ ಜೀವವನ್ನೇ ವಿಪತ್ತಿಗೀಡುಮಾಡಿಕೊಂಡು ಮಾಹಿತಿಗಳನ್ನೂ ಹೊರಗೆಡಹಿದ ಸ್ನೋಡೆನ್ ಇತರರಿಗೆ ಮಾದರಿಯಾಗಬಲ್ಲ ಎನ್ನುವುದು ಅಮೆರಿಕದ ಸಿವಿಲ್ ಲಿಬರ್ಟೀಸ್ ಕಾರ್ಯಕರ್ತರ ಅಭಿಮತ. ವಿಯೆಟ್ನಾಮ್ ಯುದ್ಧ ಕುರಿತ ಪೆಂಟಾಗನ್ ರಹಸ್ಯ ದಾಖಲೆಗಳನ್ನು ಬಹಿರಂಗಗೊಳಿಸಿದ ಡೇನಿಯಲ್ ಎಲ್ಸ್‌ಬರ್ಗ್ ರಾಷ್ಟ್ರೀಯ ಭದ್ರತಾ ಸಂಸ್ಥೆಯ ನಾಗರಿಕರ ಮೇಲೆ ಗೂಢಚರ್ಯೆ ನಡೆಸುವ ಕಾರ್ಯಕ್ರಮ ಅಪಾಯಕಾರಿ ಹಾಗೂ ಸಂವಿಧಾನ ವಿರೋಧಿ ಚರ್ಯೆ ಎಂದು ಖಂಡಿಸಿದ್ದಾರೆ. ರಷ್ಯಾ ಸ್ನೋಡೆನ್‌ಗೆ ಆಶ್ರಯ ನೀಡಲು ಮುಂದೆ ಬಂದಿದೆ. ಅಮೆರಿಕದ ಆಡಳಿತಗಾರರು ಸ್ನೋಡೆನ್‌ಅನ್ನು ಬಂಧಿಸಲು ಪ್ರಯತ್ನ ನಡೆಸಿದ್ದಾರೆ. ಅಮೆರಿಕದ ರಿಪಬ್ಲಿಕನ್ ಸೆನೆಟರ್ ವಿಂಡ್ಸೆಗಹಾಮ್ ಸ್ನೋಡೆನ್ ಚರ್ಯೆ ದೇಶಪ್ರೇಮದ ಸಂಕೇತವಲ್ಲ ಬದಲಾಗಿ ದೇಶದ್ರೋಹದ ಚರ್ಯೆ. ಆತನಿಗೆ ಶಿಕ್ಷೆಯಾಗಬೇಕು ಎಂದಿದ್ದಾರೆ. ಇದೇ ಬಗೆಯ ಅಭಿಪ್ರಾಯವನ್ನು ಡೆಮಾಕ್ರಟಿಕ್ ಸೆನೆಟರ್ ಬಿಲ್ ಎಂಬುವರೂ ವ್ಯಕ್ತಪಡಿಸಿದ್ದಾರೆ. ಸ್ನೋಡೆನ್ ಅನ್ನು ನೇಮಕ ಮಾಡಿಕೊಂಡಿದ್ದ ಸರಕಾರಿ ಕಂಟ್ರಾಕ್ಟರ್ ಬೂಜ್ ಅಲೆನ್ ಹ್ಯಾಮಿಲ್ಟನ್ ಈಗಾಗಲೇ ಆತನನ್ನು ಕೆಲಸದಿಂದ ತೆಗೆದು ಹಾಕಿದ್ದಾರೆ. ಆತ ಕಂಪೆನಿಯ ನಿಯಮಗಳನ್ನು ಉಲ್ಲಂಘಿಸಿ ದ್ರೋಹ ಬಗೆದಿದ್ದಾನೆ ಎಂದಿದ್ದಾರೆ. ಮುಂದಿನ ದಿನಗಳಲ್ಲಿ ಈ ಪ್ರಕರಣ ಯಾವ ತಿರುವು ಪಡೆದುಕೊಳ್ಳುವುದೋ ನೋಡೋಣ. ಒಟ್ಟಿನಲ್ಲಿ ಮಾನವ ಹಕ್ಕುಗಳು, ನಾಗರಿಕ ಹಕ್ಕುಗಳ ಮಂತ್ರವನ್ನು ಸದಾ ಜಪಿಸುತ್ತಿರುವ ಅಮೆರಿಕದ ಆಡಳಿತದ ಪೊಳ್ಳುತನ ಬಯಲಾಗಿದೆ.


ಸೀಯಾರ್ಕೆ

'ಚೌಬೀನ', ನಂ. ೮೪೯, ೬ನೇ ಕ್ರಾಸ್

ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ ಬೆಂಗಳೂರು – ೫೬೦ ೦೮೫


# ಸೋರುತಿಹುದು...



ಮನೆಯ ಮಾಳಿಗೆಯಲ್ಲಿ ನೀರೋ ನೀರು;
ಸೋರುತಿಹುದು ಭರಪೂರ!
ತೂತಾದ ಒಗದಿ ಒಡಕಲು ಹಂಚು
ಹುಳುಕು ಪಕಾಸಿ ಮುರಿದ ರೀಪು
ಕುಸಿದ ಮಣ್ಣಗೋಡೆ ಉದ್ದಗಲ ಅರುಲು
ನೆಲದ ಹಾಸೋ ಕೀವು ಹುಣ್ಣು
ಬಯಲಾಕಾರ ಬೇಗುದಿ; ಅಂಧಕಾರ ಎದೆಗುದಿ...
ಬಿಗಿದೇ ನಿಂತುಕೊಂಡಿದೆ ಮತ್ತೆ ಕೂರಿಗೆ,
ಜುಪ್ಪೆನ್ನದೆ ಲೆಕ್ಕ ಹಾಕದೆ;
ಭ್ರಮೆಯೊಳಗಿದೆ : 'ಗೆಲುವು ನನ್ನದೆ!'
ಮಣ್ಣಾದದ ಗುಂಗು,
ಅನಾದಿಯಿಂದಲೂ ಗರ ಬಡಕೊಂಡಿದೆ!
ಸೋಲಕತ್ತಿ ಸದಾ ಹೆಗಲ ಮೇಲೆ,
'ಗೊತ್ತು' ಹೊದ್ದೇ ಬಿತ್ತಿದೆ...
ಹುಳು ಹುಪ್ಪಟಿಗಳು
ಕಸ ಕಳೆ ಮಳೆ ಸುಡು ಬಿಸಿಲುಗಳು
ಅಸ್ಥಿರ ಬೆಲೆ–ತೆರ–ಕರಗಳು
ಒತ್ತುವರಿ ನೀತಿ ರೀತಿ ರಿವಾಜುಗಳು
ಕತ್ತಿ ಖಡ್ಗ ಚಾಕು ಚೂರಿ ಮಸೆಗಲ್ಲುಗಳು
ಆ ಈ ಈ ಆ ಎಲ್ಲಗಳು
ಒಳಗೊಳಗೆ ಕೆರಳಿವೆ; ಗುದ್ದ ತೋಡಿ ನಿಂತಿವೆ...!
ಹೊತ್ತಾರೆ ಎದ್ದದ್ದು ಉತ್ತಿದ್ದು ಬಿತ್ತಿದ್ದು
ಹರಿಸಿದ್ದು ಸವೆದದ್ದು ನೆತ್ತಾರ ಬಸಿದದ್ದು
ಸಾಕ್ಷಿಯಿಲ್ಲದ ಕಮತ; ಪುರಾವೆ ಇಲ್ಲದ ಜೀತ!
'ಕಮ್ ತಾ!' ಎಂದಂತೆ; ಕನಸೊಂದು ಬಿದ್ದಂತೆ!
ಚಾಚಿಕೊಂಡಿತು ಕತ್ತು, ಅಗೋಚರ ನಿರಾಕಾರ!
ಎದ್ದು ಬಿದ್ದು ಬಡಕೊಂಡೆ; ಅಂಗಲಾಚಿ ಬೇಡಿಕೊಂಡೆ :
'ಅಯ್ಯಾ, ಕಣ್ಣ ಕೊಡು...' ಅಂದೆ;
ದೃಷ್ಟಿ ಇಸಕೊಂಡೆ!
'ಕಾಲು ಕೊಡು...' ಅಂದೆ;
ರಸವ ಹೀರಿಕೊಂಡೆ!
'ಹಣ್ಣ ಕೊಡು...' ಅಂದೆ;
ನನೆಯ ಕಸಕೊಂಡೆ!
'ಹುಲ್ಲಾದರೂ ನೀಡು ತಂದೆ...' ಅಲವತ್ತುಕೊಂಡೆ;
ಹೊಲ ಗದ್ದೆಯನ್ನೇ ಬಾಚಿಕೊಂಡೆ!
ಹೀಗೇ ಹೀಗೇ ತಡಬಡಾಯಿಸಿ
'ತಥಾಸ್ತು...' ಎಂದು ಕೈ ತೊಳೆದುಕೊಂಡು
ಮಾಯವಾಗಿಬಿಟ್ಟೆ!
ತುಸು ತುಸು ಎಚ್ಚರ; ಮಂಪರು, ಭಾರೀ ಜ್ವರ...!
ಕನವರಿಸಿದೆ :
'ಹುಡಿಹುಲ್ಲು ಕರಿಗಾಳು ಜೊಳ್ಳು ಬೀಳು...
ಇಷ್ಟಾದರೂ ಉಳಿಯಗೊಡು ತಂದೆ...!'


ವಿಜಯಕಾಂತ ಪಾಟೀಲ
ಕ್ಯಾಸನೂರು, ಚಿಕ್ಕಾಂಶಿ, ಹೊಸೂರು – ೫೮೧ ೧೦೪, ಹಾನಗಲ್ಲ, ಹಾವೇರಿ ಜಿಲ್ಲೆ

ಇಸ್ಲಾಮೀ ಜಗತ್ತಿನಾದ್ಯಂತ ನಡೆದಿರುವ ಇಸ್ಲಾಮೀ ಪುನರುತ್ಥಾನ ಪರ್ದಾ ಧರಿಸಲು ಮಹಿಳೆಯರಿಗೆ ಒತ್ತಾಯಿಸುತ್ತಿದೆ. ಅನೇಕ ಸಂದರ್ಭಗಳಲ್ಲಿ ಮುಸ್ಲಿಂ ಮಹಿಳೆಯರು ಇದನ್ನು ಸ್ವಯಮಿಚ್ಛೆಯಿಂದ ಮಾಡುತ್ತಾರೆ. ಇರಾನ್‌ನಲ್ಲೂ ಶಾಹ್‌ನ ಆಡಳಿತಾವಧಿಯಲ್ಲಿ ಮಿನಿ ಸ್ಕರ್ಟ್ ತೊಡುತ್ತಿದ್ದ ಮಹಿಳೆಯರು ಅವುಗಳನ್ನು ತ್ಯಜಿಸಿಬಿಟ್ಟರು ಹಾಗೂ ಸೊವಿಯೆಟ್ ಯೂನಿಯನ್‌ನ ಕುಮ್ಮಕ್ಕಿನ ಮೇರೆಗೆ ಶಾಹ್‌ನನ್ನು ವಿರೋಧಿಸುತ್ತಿರುವ ಆರೋಪಕ್ಕೆ ಗುರಿಯಾಗಬಾರದೆಂದು ಅವರು ಸ್ವಯಂಸ್ಫೂರ್ತಿಯಿಂದ ಚಾದರ್ ಧರಿಸುವುದಕ್ಕೆ ಮುಂದಾದರು. ಅದರಂತೆಯೇ ಈಜಿಪ್ಟ್‌ನಂತಹ ದೇಶಗಳಲ್ಲಿ ಮಹಿಳೆಯರು, ಅದರಲ್ಲೂ ವಿಶೇಷವಾಗಿ ವಿಶ್ವವಿದ್ಯಾಲಯದ ವಿದ್ಯಾರ್ಥಿನಿಯರು ತಮ್ಮ ಇಸ್ಲಾಮೀ ಅಸ್ಮಿತೆಯನ್ನು ಎತ್ತಿ ಹಿಡಿಯಲು ಪರ್ದಾ ಧರಿಸತೊಡಗಿದರು.



# ಮುಸ್ಲಿಂ ಮಹಿಳೆಯರು, ಸಾಂಪ್ರದಾಯಿಕತೆ ಹಾಗೂ ಬದಲಾವಣೆ

**ಡಾ|| ಅಸ್ಗರ್ ಅಲಿ ಎಂಜಿನಿಯರ್**
ಕನ್ನಡಕ್ಕೆ : **ಹಸನ್ ನಯೀಂ ಸುರಕೋಡ**

ಮಹಿಳೆಯರ ವಿಷಯ ಜಗತ್ತಿನಾದ್ಯಂತ ಹಿಂದೆಂದಿಗಿಂತಲೂ ಇಂದು ಹೆಚ್ಚು ಮಹತ್ವ ಪಡೆಯುತ್ತಿದೆ. ಮಹಿಳೆಯರು – ಅವರು ಯಾವುದೇ ಸಮುದಾಯ ಅಥವಾ ದೇಶಕ್ಕೆ ಸೇರಿದವರಾಗಿರಲಿ – ತಾರತಮ್ಯವನ್ನು ಅನುಭವಿಸುತ್ತಿದ್ದಾರೆ. ಪಾಶ್ಚಾತ್ಯ ದೇಶದಲ್ಲಿನ ಮಹಿಳೆಯರು ಸಹ ಪುರುಷ ಪ್ರಧಾನ ಸಮಾಜದಲ್ಲಿ ತಾರತಮ್ಯ – ಪ್ರಮಾಣದಲ್ಲಿ ವ್ಯತ್ಯಾಸವಿದ್ದರೂ – ಅನುಭವಿಸುತ್ತಿದ್ದಾರೆ. ಇತರ ದೇಶಗಳಿಗೆ ಹೋಲಿಸಿದರೆ ಇಸ್ಲಾಮೀ ದೇಶಗಳಲ್ಲಿನ ಮಹಿಳೆಯರು ಹೆಚ್ಚಿನ ಸಂಕಷ್ಟಕ್ಕೆ ಈಡಾಗಿದ್ದಾರೆ ಎಂದು ಭಾವಿಸಲಾಗುತ್ತದೆ. ತಾಲಿಬಾನ್‌ರ ಹಿಡಿತಕ್ಕೆ ಸಿಕ್ಕ ಆಫ್ಘಾನಿಸ್ತಾನದಲ್ಲಿನ ವಿದ್ಯಮಾನಗಳು ಈ ಗ್ರಹಿಕೆಯನ್ನು ಇನ್ನಷ್ಟು ಪುಷ್ಟೀಕರಿಸುತ್ತವೆ. ತಾಲಿಬಾನರು ಮಹಿಳೆಯರನ್ನು ಅತ್ಯಂತ ಬರ್ಬರವಾಗಿ ನಡೆಸಿಕೊಳ್ಳುತ್ತಿದ್ದಾರೆ. ಅದು ಇಸ್ಲಾಮೀ ಅಲ್ಲವೇ ಅಲ್ಲ. ಆದಾಗ್ಯೂ ಅದನ್ನು ಇಸ್ಲಾಮಿನ ಹೆಸರಿನಲ್ಲೇ ಮಾಡಲಾಗುತ್ತಿದೆ.

ಸಾಂಪ್ರದಾಯಿಕ ಉಲಮಾಗಳು ಇಸ್ಲಾಮಿನಲ್ಲಿ ಮಹಿಳೆಯರ ವಿಷಯವನ್ನು ಅತಿಯಾದ ಭಾವೋದ್ವೇಗದಿಂದ ಪರಿಶೀಲಿಸುತ್ತಾರೆ. ಅವರು ಸಾಮಾನ್ಯವಾಗಿ ಯಾವುದೇ ಬಗೆಯ ಬದಲಾವಣೆಗೆ ಹಾಗೂ ವಿಶೇಷವಾಗಿ ಮಹಿಳೆಯರ ವಿಷಯವಾಗಿ ಯಾವುದೇ ಬದಲಾವಣೆಗೆ ವಿರೋಧಿಯಾಗಿರುತ್ತಾರೆ. ಅವರು ಹದಿಮೂರು ನೂರು ವರ್ಷಕ್ಕೂ ಹಿಂದೆ ಉಲಮಾಗಳು ಈ ಕುರಿತು ರೂಪಿಸಿದ ಕಟ್ಟಳೆಗಳನ್ನು ಅತ್ಯಂತ ಯಾಂತ್ರಿಕವಾಗಿ ಅನುಕರಿಸುತ್ತಾರೆ. ಈ ವಿಷಯವಾಗಿ ಮರುಚಿಂತನೆ ಮಾಡುವುದೇ ಪಾಪ ಕೃತ್ಯವಾಗುತ್ತದೆ. ಅಷ್ಟೇ ಅಲ್ಲ, ಇಸ್ಲಾಮೀ ದೇಶಗಳಿಗೆ ಸಂಬಂಧಿಸಿದಂತೆ ಹಾಗೂ ಭಾರತದಂತಹ ದೇಶಗಳ ಬಹುಸಂಖ್ಯಾತ ಸಮುದಾಯಗಳಿಗೆ ವಿರುದ್ಧವಾಗಿ ಮುಸ್ಲಿಂ ಅಲ್ಪಸಂಖ್ಯಾತರಿಗೆ ಸಂಬಂಧಿಸಿದಂತೆ ಮಹಿಳೆಯರ ಪ್ರಶ್ನೆ ಪಶ್ಚಿಮದ ವಿರುದ್ಧ ಇಸ್ಲಾಮೀ ಅಸ್ಮಿತೆಯ ಮುಖ್ಯ ಪ್ರಶ್ನೆಯಾಗಿಬಿಡುತ್ತದೆ. ಹೀಗೆ ಮುಸ್ಲಿಂ ವೈಯಕ್ತಿಕ ಕಾನೂನಿನಲ್ಲಿ ಯಾವುದೇ ಬದಲಾವಣೆಯನ್ನು ಮುಸ್ಲಿಂ ಅಸ್ಮಿತೆಗೆ ಅಪಾಯ ಹಾಗೂ ಇಸ್ಲಾಮಿನಲ್ಲಿ ಅನಗತ್ಯ ಹಸ್ತಕ್ಷೇಪವೆಂದು ಉಗ್ರವಾಗಿ ವಿರೋಧಿಸಲಾಗುತ್ತದೆ. ಇರಾನ್‌ನಲ್ಲಿನ ಇಸ್ಲಾಮೀ ಕ್ರಾಂತಿಯ ಒಂದು ಪ್ರಮುಖ ಅಜೆಂಡಾ ಪಶ್ಚಿಮಕ್ಕೆ ವಿರುದ್ಧವಾಗಿ ಮುಸ್ಲಿಂ ಅಸ್ಮಿತೆಯನ್ನು ಎತ್ತಿ ಹಿಡಿಯುವುದಾಗಿತ್ತು. ಅದು ಮಹಿಳೆಯರಿಗೆ ಚಾದರ್ (ತಲೆಯ ವಸ್ತ್ರ) ಜಾರಿ ಮಾಡುವ ಮೂಲಕ ಅಭಿವ್ಯಕ್ತಿ ಪಡೆದುಕೊಂಡಿತು.



ಇಸ್ಲಾಮೀ ಜಗತ್ತಿನಾದ್ಯಂತ ನಡೆದಿರುವ ಇಸ್ಲಾಮೀ ಪುನರುತ್ಥಾನ ಪರ್ದಾ ಧರಿಸಲು ಮಹಿಳೆಯರಿಗೆ ಒತ್ತಾಯಿಸುತ್ತಿದೆ. ಅನೇಕ ಸಂದರ್ಭಗಳಲ್ಲಿ ಮುಸ್ಲಿಂ ಮಹಿಳೆಯರು ಇದನ್ನು ಸ್ವಯಮಿಚ್ಛೆಯಿಂದ ಮಾಡುತ್ತಾರೆ. ಇರಾನ್‌ನಲ್ಲೂ ಶಾಹ್‌ನ ಆಡಳಿತಾವಧಿಯಲ್ಲಿ ಮಿನಿ ಸ್ಕರ್ಟ್ ತೊಡುತ್ತಿದ್ದ ಮಹಿಳೆಯರು ಅವುಗಳನ್ನು ತ್ಯಜಿಸಿಬಿಟ್ಟರು ಹಾಗೂ ಸೊವಿಯೆಟ್ ಯೂನಿಯನ್‌ನ ಕುಮ್ಮಕ್ಕಿನ ಮೇರೆಗೆ ಶಾಹ್‌ನನ್ನು ವಿರೋಧಿಸುತ್ತಿರುವ ಆರೋಪಕ್ಕೆ ಗುರಿಯಾಗ ಬಾರದೆಂದು ಅವರು ಸ್ವಯಂಸ್ಫೂರ್ತಿಯಿಂದ ಚಾದರ್ ಧರಿಸುವುದಕ್ಕೆ ಮುಂದಾದರು. ಅದರಂತೆಯೇ ಈಜಿಪ್ಟ್‌ನಂತಹ ದೇಶಗಳಲ್ಲಿ ಮಹಿಳೆಯರು, ಅದರಲ್ಲೂ ವಿಶೇಷವಾಗಿ ವಿಶ್ವವಿದ್ಯಾಲಯದ ವಿದ್ಯಾರ್ಥಿನಿಯರು ತಮ್ಮ ಇಸ್ಲಾಮೀ ಅಸ್ಮಿತೆಯನ್ನು ಎತ್ತಿ ಹಿಡಿಯಲು ಪರ್ದಾ ಧರಿಸತೊಡಗಿದರು. ವಾಸ್ತವದಲ್ಲಿ ಎಂ.ಟಿ.ವಿ.ಯ ಕಾಲದಲ್ಲಿ ಪಾಶ್ಚಾತ್ಯ ಪಾಪ್ ಸಂಸ್ಕೃತಿ ನೆಲೆ ನಿಲ್ಲುವಂತೆ ಮಾಡಲು ಇನ್ನಿಲ್ಲದ ಪ್ರಯತ್ನಗಳು ನಡೆದಾಗ ಇಂತಹದೊಂದು ಪ್ರತಿಕ್ರಿಯೆ ತುಂಬ ಸಹಜವೆನಿಸುತ್ತದೆ. ಪಶ್ಚಿಮದಲ್ಲಿ ಮಹಿಳೆ ತನಗೆ ಸಾಧ್ಯವಾದಷ್ಟೂ ಬೆತ್ತಲಾಗುತ್ತಾಳೆ. ಆದರೆ ಪೂರ್ವದಲ್ಲಿ ಅವಳು ಸಾಧ್ಯವಾದಷ್ಟೂ ಮುಚ್ಚಿಕೊಳ್ಳುತ್ತಾಳೆ. ಅದು ಬಲಪ್ರಯೋಗಕ್ಕಿಂತ ಹೆಚ್ಚಾಗಿ ಪ್ರತಿಕ್ರಿಯೆ ಆಗಿರುತ್ತದೆ. ಇಸ್ಲಾಮೀ ದೇಶದಲ್ಲಿನ ಮಹಿಳೆಯರು ಪಾಶ್ಚಿಮಾತ್ಯ 'ಅಶ್ಲೀಲತೆ'ಯನ್ನು ವಿರೋಧಿಸಲು 'ಸಭ್ಯತೆ'ಯನ್ನು ಮೆರೆಯುತ್ತಾರೆ. ಇವು ಎರಡು ಧ್ರುವಗಳಂತೆ ವಿಭಿನ್ನವಾದ ಸಂಸ್ಕೃತಿಗಳಾಗಿವೆ. ಹೀಗೆ ಪರ್ದಾ ಆಚರಣೆಯನ್ನು ಕೇವಲ ಮಹಿಳೆಯರ ದಮನವೆಂದು ನೋಡಲಾಗದು. ಇರಾನಿ ಮಹಿಳೆಯರು ಚಾದರ್ ಧರಿಸಿದರೂ ತಮ್ಮ ಹಕ್ಕುಗಳ ಬಗ್ಗೆ ತುಂಬ ಜಾಗೃತರಾಗಿದ್ದಾರೆ. ಅವರು ಸರ್ಕಾರದ ಎಲ್ಲ ಹುದ್ದೆಗಳಿಗೆ ನೇಮಕ ಗೊಂಡಿದ್ದಾರೆ, ಪಾರ್ಲಿಮೆಂಟ್ ಸದಸ್ಯರಾಗಿದ್ದಾರೆ, ಮಸುಮೆಹ್, ಅಂದರೆ ಇರಾನಿನ ಉಪಾಧ್ಯಕ್ಷನಂತಹ ರಾಜಕೀಯ ಸ್ಥಾನಗಳನ್ನು ಗ್ರಹಿಸಿದ್ದಾರೆ. ಅಷ್ಟೇ ಅಲ್ಲ, ಇರಾನಿ ಮಹಿಳೆಯರು ಇಂದು ಸಮಾನ ಸ್ಥಾನಮಾನಕ್ಕಾಗಿ ಹೋರಾಡುತ್ತಿದ್ದಾರೆ. ಇರಾನ್‌ನಲ್ಲಿನ ಮಹಿಳಾ ಆಂದೋಲನ ತುಂಬ ಉಗ್ರವಾಗಿದೆ, ಅದು ಇತರ ಯಾವುದೇ ಮುಸ್ಲಿಮೇತರ ದೇಶದಲ್ಲಿನ ಮಹಿಳಾ ಆಂದೋಲನದಷ್ಟೇ ಉಗ್ರವಾಗಿದೆ. ಇದು ಪರ್ದಾ ದಮನಕಾರಿ ಕ್ರಮಕ್ಕೆ ಬದಲಾಗಿ ಸಭ್ಯತೆಯ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿದೆ.

ಆಧುನಿಕ ಯುಗದಲ್ಲಿ ಶಿಕ್ಷಣ ಮುಸ್ಲಿಂ ದೇಶಗಳೂ ಸೇರಿದಂತೆ ಎಲ್ಲ ದೇಶಗಳಲ್ಲೂ ಶೀಘ್ರವಾಗಿ ಪ್ರಸರಿಸುತ್ತಿದೆ. ಬಹುತೇಕ ಎಲ್ಲ ದೇಶಗಳಲ್ಲಿ ಮುಸ್ಲಿಂ ಮಹಿಳೆಯರು ಹಿಂದೆಂದಿಗಿಂತಲೂ ಹೆಚ್ಚಾಗಿ ವಿಶ್ವವಿದ್ಯಾಲಯಗಳಲ್ಲಿ ಪ್ರವೇಶ ಪಡೆಯುತ್ತಿದ್ದಾರೆ. ತಮ್ಮ ಹಕ್ಕುಗಳ ಬಗ್ಗೆ ಈ ಶಿಕ್ಷಿತ ಮಹಿಳೆಯರು ಅಶಿಕ್ಷಿತ ಮಹಿಳೆಯರಿಗಿಂತ ಹೆಚ್ಚು ಜಾಗೃತರಾಗಿದ್ದಾರೆ. ಹೀಗೆ ಗಣನೀಯ ಸಂಖ್ಯೆಯಲ್ಲಿ ಮುಸ್ಲಿಮರಿರುವ ದೇಶಗಳ ಪೈಕಿ ತಮ್ಮ ಅಸ್ತಿತ್ವಕ್ಕಾಗಿ ದನಿಯೆತ್ತದಿರುವ ಮಹಿಳೆಯರನ್ನು ಹೊಂದಿರದ ದೇಶವೇ ಇಲ್ಲ. ಕುವೇತ್‌ನಂತಹ ಸಂಪ್ರದಾಯವಾದಿ ಶೇಖ್ ಪ್ರಾಂತದಲ್ಲೂ ಮಹಿಳೆಯರು ಮತದಾನದ ಹಕ್ಕು ಮತ್ತು ರಾಜಕೀಯ ಅಧಿಕಾರ ಗ್ರಹಣದ ಹಕ್ಕುಗಳಿಗಾಗಿ ಆಗ್ರಹಿಸುತ್ತಿದ್ದಾರೆ. ಕುವೇತ್‌ನ ವಿಶ್ವವಿದ್ಯಾಲಯಗಳಲ್ಲಿ ಮಹಿಳೆಯರು ದೊಡ್ಡ ಸಂಖ್ಯೆಯಲ್ಲಿದ್ದಾರೆ. ಕುವೇತ್‌ನಲ್ಲಿ ಮಹಿಳಾ ಹಕ್ಕುಗಳ ಆಂದೋಲನದ ನೇತೃತ್ವ ವಹಿಸಿಕೊಂಡ ಮಹಿಳೆ ಕುವೇತ್ ವಿಶ್ವವಿದ್ಯಾಲಯದ ಕಲಾ ವಿಭಾಗದ ಡೀನ್ ಆಗಿದ್ದಾರೆ. ಪಾಕಿಸ್ತಾನ ಮತ್ತು ಬಾಂಗ್ಲಾದೇಶದಲ್ಲಿ ಮಹಿಳೆಯರು ಪ್ರಧಾನಿಯಂತಹ ಅತ್ಯುನ್ನತ ಹುದ್ದೆಗಳನ್ನು ಅಲಂಕರಿಸಿದ್ದಾರೆ, ವಿಭಿನ್ನ ಸರ್ಕಾರಿ ಮತ್ತು ಸರ್ಕಾರೇತರ ಸಂಘಟನೆಗಳ ಪದಾಧಿಕಾರಿಗಳಾಗಿದ್ದಾರೆ.

ಆದಾಗ್ಯೂ ಅದರರ್ಥ ಗಂಭೀರ ಸಮಸ್ಯೆಗಳೇ ಇಲ್ಲವೆಂದೇನಲ್ಲ. ಮಹಿಳೆಯರಿಗೆ ಉದ್ದಕ್ಕೂ ಹೋರಾಟ ಅನಿವಾರ್ಯವಾಗಿದೆ. ಉದಾಹರಣೆ : ಸಾಂಪ್ರದಾಯಿಕತೆ ವಿರುದ್ಧ ಹೋರಾಟ, ಕೆಲವು ವಿಶಿಷ್ಟ ಕ್ಷೇತ್ರಗಳನ್ನು ಪ್ರವೇಶಿಸಲು ಅವಕಾಶ ನೀಡದ ನಿರ್ದಿಷ್ಟ ದಮನಕಾರಿ ಕಟ್ಟಳೆಗಳ ವಿರುದ್ಧ ಹೋರಾಟ, ವರದಕ್ಷಿಣೆ ಮತ್ತು ವಧುದಹನದ ವಿರುದ್ಧ ಹೋರಾಟ ಮತ್ತು ಮರ್ಯಾದಾ ಹತ್ಯೆ ವಿರುದ್ಧ ಹೋರಾಟ. ಮಹಿಳೆಯರು ತಮ್ಮ ಹಕ್ಕುಗಳಿಗಾಗಿ ಆಗ್ರಹಿಸಿದರೆ, ಸಮಾಜದಲ್ಲಿ ಗೌರವಯುತ ಸ್ಥಾನಮಾನಕ್ಕಾಗಿ ಹೋರಾಡಲು ಮುಂದಾದರೆ ಪುರುಷರ ಪ್ರಭುತ್ವ ಹೊಂದಿರುವ ಸಮಾಜವು ಹೆಚ್ಚು ಉಗ್ರವಾಗಿ ಪ್ರತಿಕ್ರಿಯಿಸುತ್ತದೆ ಮತ್ತು ಅವರ ಮೇಲೆ ಇನ್ನೂ ಹೆಚ್ಚಿನ ನಿಬಂಧನೆಗಳನ್ನು ಹೇರಲೆತ್ನಿಸುತ್ತದೆ. ಈ ಹೋರಾಟ ಇನ್ನೂ ದೀರ್ಘಕಾಲ ಮುಂದುವರಿಯಲಿದೆ. ಆಘಾತಕಾರಿ ಸಂಗತಿಯೆಂದರೆ ಮಹಿಳೆಯರಿಗೆ ಸ್ಪಷ್ಟವಾಗಿ ವ್ಯಾಖ್ಯಾನಿಸಲ್ಪಟ್ಟ ಇಸ್ಲಾಮೀ ಹಕ್ಕುಗಳನ್ನೂ ನಿರಾಕರಿಸಲಾಗಿದೆ.

ದುರದೃಷ್ಟವಶಾತ್ ಭಾರತದಲ್ಲಿ ಮೂರು ಸಲ ತಲಾಕ್ ಹೇಳುವುದು ಸುನ್ನಿ, ಹನಫಿ ಮತ್ತು ಶಾಫಯಿ ಮುಸ್ಲಿಮರಲ್ಲಿ ಅತ್ಯಂತ ಪ್ರಚಲಿತವಾಗಿರುವ ವಿಚ್ಛೇದನೆಯ ಪ್ರಕಾರವಾಗಿದೆ. ವಾಸ್ತವದಲ್ಲಿ ಮೂರು ಸಲ ತಲಾಕ್ ಹೇಳುವುದು ಕುರ್‌ಆನ್ ವಿರೋಧಿಯಾಗಿದೆ. ಅದು ಮುಸ್ಲಿಮರಲ್ಲಿನ ಹಂಬಲಿ ಹಾಗೂ ಅಹ್ಲೆಹದಿಸ್‌ನವರಿಂದಲೂ ಮತ್ತು ಎಲ್ಲ ಶಿಯಾರಿಂದಲೂ ತಿರಸ್ಕರಿಸಲ್ಪಟ್ಟಿದೆ. ಮಹಿಳೆಯರಿಗೆ ಅನ್ಯಾಯ ಮಾಡಬಲ್ಲ, ಮೂರು ಸಲ ತಲಾಕ್ ಹೇಳುವ ಪದ್ಧತಿಯ ಮೂಲಕ ನೀಡುವ ವಿಚ್ಛೇದನೆ ಪ್ರವಾದಿಯ ಕಾಲದಲ್ಲಿ ಅಷ್ಟೇ ಅಲ್ಲ, ಮೊದಲ ಖಲೀಫ್ ಹಜ್ರತ್ ಅಬೂಬಕರ್‌ರ ಕಾಲದಲ್ಲಿ ಮತ್ತು ಎರಡನೆಯ ಖಲೀಫ್ ಹಜ್ರತ್ ಉಮರ್ ಫಾರೂಕ್‌ರ ಎರಡೂವರೆ ವರ್ಷದ ಆಡಳಿತಾವಧಿಯಲ್ಲಿ ಸಹ ಪ್ರಚಲಿತವಾಗಿರಲಿಲ್ಲ. ಆದರೆ ಅವರ ಆಡಳಿತದ ಎರಡನೆಯ ಹಂತದಲ್ಲಿ ಕೆಲವು ಅರಬರಿಂದ ಅದರ ದುರ್ಬಳಕೆ ಯಾಗಿದ್ದರಿಂದ ಏಕ ಕಾಲಕ್ಕೆ ಮೂರು ಸಲ ತಲಾಕ್ ಹೇಳುವುದನ್ನು ಜಾರಿ ಮಾಡಲಾಯಿತು. ಮೂರು ಸಲ ತಲಾಕ್ ಹೇಳುವುದು ಎಂದೂ ಇಸ್ಲಾಮೀ ಬೋಧನೆಯ ಭಾಗವಾಗಿರಲಿಲ್ಲ. ವಾಸ್ತವದಲ್ಲಿ ಅದು ಪಾರಂಪರಿಕ ಅರಬ್ ಕಾನೂನಿನ ಭಾಗವಾಗಿತ್ತು. ೧೮ನೆಯ ಶತಮಾನದ ಭಾರತದ ಸಾಮಾಜಿಕ ದೃಷ್ಟಿಕೋನವುಳ್ಳ ಪ್ರಸಿದ್ಧ ಇಸ್ಲಾಮೀ ಚಿಂತಕ ಶಾಹ್ ವಲಿಯುಲ್ಲಾಹ್‌ನ ಅಭಿಪ್ರಾಯದ ಮೇರೆಗೆ ಸಹ, ಪಾರಂಪರಿಕ ಅರಬ್ ಕಾನೂನನ್ನು ಅರಬೇತರ ಮುಸ್ಲಿಮರಿಗೆ ಅನ್ವಯಿಸುವುದು ನ್ಯಾಯಸಮ್ಮತ ವಾಗಲಾರದು. ಅನೇಕ ಶರಿಯಾ ಪಠ್ಯಗಳು ಇಸ್ಲಾಂ ಪೂರ್ವದ ಕಾಲದಲ್ಲಿ ಪ್ರಚಲಿತವಿದ್ದ ಪಾರಂಪರಿಕ ಅರಬ್ ಕಾನೂನಿನ ಕೆಲವು ಅಂಶಗಳನ್ನು ಒಳಗೊಂಡಿದೆ. ಮೂರು ಸಲ ತಲಾಕ್ ಹೇಳುವ ಪದ್ಧತಿಯ ನಿರ್ಮೂಲನೆ ವಿಷಯವಾಗಿ ಮುಸ್ಲಿಮರಲ್ಲಿ ಒಮ್ಮತವಿಲ್ಲವಾದರೂ ಅದು ಮುಸ್ಲಿಂ ಮಹಿಳೆಯರಿಗೆ ದೊಡ್ಡ ಪರಿಹಾರವಾಗಬಲ್ಲದು. ಕೆಲವು ಪುರುಷರು ತಮ್ಮ ಮಡದಿಯರನ್ನು ಪೀಡಿಸುವುದಕ್ಕಾಗಿ ಅಥವಾ ಮನ ಬಂದಂತೆ ಅವರಿಗೆ ವಿಚ್ಛೇದನೆ ನೀಡಿ ಅವರನ್ನು ಬೀದಿಪಾಲು ಮಾಡುವುದಕ್ಕಾಗಿ ಅದರ ದುರ್ಬಳಕೆ ಮಾಡುತ್ತಿದ್ದಾರೆ. ಅದರ ಪರಿಣಾಮವಾಗಿ ಇಂದು ನೂರಾರು ಮಹಿಳೆಯರು

ಸಂಕಷ್ಟಕ್ಕೀಡಾಗುತ್ತಿದ್ದಾರೆ. ಸುದೈವವೆಂದರೆ ಅದನ್ನು ಪಾಕಿಸ್ತಾನ ಹಾಗೂ ಬಾಂಗ್ಲಾದೇಶದಲ್ಲಿ ರದ್ದು ಮಾಡಲಾಗಿದೆ.

ಇಸ್ಲಾಂ, ಮುಸ್ಲಿಂ ಮಹಿಳೆಯರಿಗೆ ವಿಚ್ಛೇದನೆಯ ಹಕ್ಕನ್ನು ಸಹ ನೀಡಿದೆ. ಅದನ್ನು 'ಖುಲಾ' ಎನ್ನಲಾಗುತ್ತದೆ. ಈ ಪದವನ್ನು ಕುರ್‌ಆನ್‌ನಲ್ಲಿ ಬಳಸಲಾಗಿಲ್ಲ ವಾದರೂ ಅದರ ಪ್ರಕಾರ ಮಹಿಳೆ ತನ್ನ ಪತಿಗೆ ಫಿದ್ವಾ (ಪರಿಹಾರ) ನೀಡಿ ತನ್ನ ಸ್ವಾತಂತ್ರ್ಯವನ್ನು ಮರಳಿ ಗಳಿಸಿಕೊಳ್ಳಬಹುದು. ಈ ಹಕ್ಕು ಸುಸ್ಪಷ್ಟವಿದೆ. ಈ ಸಂಬಂಧ ಕುರ್‌ಆನ್ ಹೇಳುವುದು ಹೀಗೆ: "ಅವರಿಗೆ ಅಲ್ಲಾಹ್‌ನ ನಿಬಂಧನೆಗಳನ್ನು ಪಾಲಿಸುವುದು ಸಾಧ್ಯವಿಲ್ಲವೆಂದು ನಿಮಗೆ ಅನ್ನಿಸಿದರೆ ಅವಳು ತನ್ನ ಸ್ವಾತಂತ್ರ್ಯ ಮರಳಿ ಪಡೆದುಕೊಳ್ಳಲು ಏನೇ ಕೊಡಲಿ ಅವರಿಗೆ ದೂಷಿಸುವ ಅಗತ್ಯವಿಲ್ಲ." (೨:೨೨೯) ಈ ಶ್ಲೋಕದ ಕುರಿತು ಭಾಷ್ಯ ಬರೆದ ಮೌಲಾನಾ ಮೌಹಮ್ಮದ್ ಅಲಿ ಹೀಗೆ ಹೇಳುತ್ತಾರೆ: "ಈ ಪದಗಳು ಮಡದಿಗೆ ವಿಚ್ಛೇದನೆ ಪಡೆಯುವ ಹಕ್ಕನ್ನು ನೀಡುತ್ತವೆ. ಮಡದಿ ತನ್ನ ವಧು ದಕ್ಷಿಣೆಯನ್ನು ಸಂಪೂರ್ಣವಾಗಿ ಅಥವಾ ಭಾಗಶಃ ಕಳೆದುಕೊಳ್ಳಲು ಸಿದ್ಧವಾದರೆ ಇಸ್ಲಾಂ ಅವಳಿಗೆ ವಿಚ್ಛೇದನ ಪಡೆಯುವ ಹಕ್ಕನ್ನು ನೀಡುತ್ತದೆ. ಇದು ಇಸ್ಲಾಮಿನ ಅತ್ಯಂತ ವಿಶಿಷ್ಟ ಲಕ್ಷಣಗಳಲ್ಲೊಂದಾಗಿದೆ." (ಹೋಲಿ ಕುರಾನ್, ಲಾಹೋರ ೧೯೭೩ ಪು: ೯೮) ಪೂಜ್ಯ ಪ್ರವಾದಿ ಜಮೀಲಾಳ ಪ್ರಸಂಗದಲ್ಲಿ ಈ ಹಕ್ಕನ್ನು ಜಾರಿ ಮಾಡಿದರು. ತನ್ನ ಪತಿಯನ್ನು ಅವಳು ಇಷ್ಟಪಟ್ಟಿರಲಿಲ್ಲ ಎನ್ನುವುದನ್ನು ಬಿಟ್ಟರೆ ಅವನ ವರ್ತನೆಯಲ್ಲಿ ಅವಳಿಗೆ ಯಾವ ತಪ್ಪೂ ಕಂಡಿರಲಿಲ್ಲ. ಆದಾಗ್ಯೂ ಅವಳು ತನ್ನ ಪತಿಯಿಂದ ಬಿಡುಗಡೆ ಬಯಸಿದ್ದಳು. 'ಸಹೀಹ್ ಬುಖಾರಿ' ಪ್ರಕಾರ, ಪ್ರವಾದಿ ಅವಳಿಗೆ ತಾನು ಮೆಹರ್ ರೂಪದಲ್ಲಿ ಪಡೆದಿದ್ದ ತೋಟಗಳನ್ನು ಮರಳಿಸುವುದರ ಮೂಲಕ ಖುಲಾ ಪಡೆಯಲು ಅನುಮತಿ ನೀಡಿದ್ದರು. ಆದರೆ 'ಪತಿಯ ಒಪ್ಪಿಗೆ'ಗೆ ಒತ್ತು ಕೊಟ್ಟ ಸಂಪ್ರದಾಯವಾದಿ ಉಲಮಾಗಳು ಮಹಿಳೆಯನ್ನು ಈ ಹಕ್ಕಿನಿಂದಲೂ ವಂಚಿಸಿದರು. ಈ ವಿಧಾನ ಪ್ರವಾದಿಯ ಸುನ್ನಾಕ್ಕೆ ಅನುಗುಣವಾಗಿಲ್ಲ. ಅವರಿಗೆ ಅಲ್ಲಾಹ್‌ನ ನಿಬಂಧನೆಗಳು ಪಾಲಿಸುವುದು ಸಾಧ್ಯವಾಗದು ಎಂದು ಅನ್ನಿಸಿದರೆ, ಅಂದರೆ ಅವರಿಗೆ ವೈವಾಹಿಕ ಬದುಕಿನ ಕರ್ತವ್ಯಗಳನ್ನು ನಿರ್ವಹಿಸುವುದು ಸಾಧ್ಯವಾಗದಿದ್ದರೆ ಅವಳಿಗೆ ಖುಲಾ ಪಡೆಯುವ ಹಕ್ಕು ಅನಿರ್ಬಂಧಿತವಾಗುತ್ತದೆ.



ಮುಬರತ್ ಎಂದು ಕರೆಯಲಾಗುವ ಇನ್ನೊಂದು ಬಗೆಯ ವಿಚ್ಛೇದನವೂ ಇದೆ. ಈ ಬಗೆಯ ವಿಚ್ಛೇದನದಲ್ಲಿ ಪತಿ-ಪತ್ನಿಯರಿಬ್ಬರ ಪರಸ್ಪರ ಅನುಮತಿ ಅವಶ್ಯವಾಗುತ್ತದೆ. ಆದರೆ ಉಲಮಾಗಳು ಖುಲಾಅನ್ನು ಮುಬರತ್‌ದೊಂದಿಗೆ ಸಮೀಕರಿಸಿದ್ದಾರೆ. ಇದು ಸರಿ ಅಲ್ಲ. ಭಾರತದಲ್ಲಿ ಊರ್ಜಿತವಾಗಿರುವ ಮುಸ್ಲಿಂ ವೈಯಕ್ತಿಕ ಕಾನೂನು ಪ್ರಕಾರ ಸಹ ತನ್ನ ಗಂಡನ ಒಪ್ಪಿಗೆ ಇಲ್ಲದೆ ಮಹಿಳೆಗೆ ಖುಲಾ ಪಡೆಯುವ ಹಕ್ಕಿಗೆ ಅವಕಾಶವಿಲ್ಲ. ಆದ್ದರಿಂದ ಪುರುಷರು ಸಹಜವಾಗಿ ಇದನ್ನು ಹೆಚ್ಚಾಗಿ ತಮ್ಮ ಮಡದಿಯರನ್ನು ಗೋಳಾಡಿಸಲು ದುರುಪಯೋಗಪಡಿಸಿಕೊಳ್ಳುತ್ತಾರೆ, ನ್ಯಾಯಸಮ್ಮತವಾದುದಕ್ಕಿಂತ ಹೆಚ್ಚಿನ ಪರಿಹಾರವನ್ನು ವಸೂಲು ಮಾಡುತ್ತಾರೆ.

ಕುರ್‌ಆನ್‌ನಲ್ಲಿ ಇನ್ನೂ ಒಂದು ಅವಕಾಶವಿದೆ. ಅದು ಬಹುಪತ್ನಿತ್ವಕ್ಕೆ ಇರುವ ಅವಕಾಶ. ಪುರುಷರಿಂದ ಅತ್ಯಂತ ಕುರ್‌ಆನ್ ವಿರೋಧಿ ರೀತಿಯಲ್ಲಿ ಅದರ ದುರುಪಯೋಗವಾಗುತ್ತಿದೆ. ಪುರುಷನಿಗೆ ನಾಲ್ಕು ಮದುವೆಯಾಗಲು ಅನುಮತಿ ನೀಡಲಾಗಿದೆ. ಇದು ಪುರುಷನಿಗೆ ಸಾಮಾನ್ಯವಾಗಿರುವ ಅವಕಾಶ ಎನ್ನಲುಬಾರದು. ಕೇವಲ ಅಪರೂಪದ ಸಂದರ್ಭಗಳಲ್ಲಿ ಕಟ್ಟುನಿಟ್ಟಾದ ಶರತ್ತುಗಳೊಂದಿಗೆ ಅದಕ್ಕೆ ಅನುಮತಿ ನೀಡಲಾಗುತ್ತದೆ. ಅನೇಕ ಉಲಮಾಗಳು ಭಾವಿಸಿರುವಂತೆ ಈ ಶ್ಲೋಕವು ಉಹುದ್ ಯುದ್ಧದ ನಂತರ ಅವತೀರ್ಣಗೊಂಡಿತು. ಆ ಯುದ್ಧದಲ್ಲಿ ಮುಸ್ಲಿಂ ಪುರುಷ ಜನಸಂಖ್ಯೆಯ ಸುಮಾರು ೧೦ ಪ್ರತಿಶತದಷ್ಟು ನಿರ್ನಾಮವಾಗಿ ಹೋಗಿತ್ತು. ಅದರಿಂದಾಗಿ ಅಪಾರ ಸಂಖ್ಯೆಯ ಅನಾಥರು ಮತ್ತು ವಿಧವೆಯರ ಬದುಕು ಅತಂತ್ರವಾಯಿತು. ಅವರ ಬದುಕಿಗೆ ಆಸರೆಯಾಗಲಿ ಎನ್ನುವುದಕ್ಕಾಗಿ ಮಾತ್ರ ನಾಲ್ಕು ಮದುವೆಗೆ ಅವಕಾಶ ನೀಡಲಾಯಿತು. ಅದಕ್ಕೆ ಸಂಬಂಧಿಸಿದ ಶ್ಲೋಕ ಹೀಗಿದೆ: "ಅನಾಥರಿಗೆ ನ್ಯಾಯ ಒದಗಿಸುವುದು ಸಾಧ್ಯವೆಂದು ನಿಮಗೆ ಅನ್ನಿಸಿದರೆ ನಿಮಗೆ ಇಷ್ಟವಾಗುವ ಇಬ್ಬರು ಅಥವಾ ಮೂವರು ಅಥವಾ ನಾಲ್ಕು ಜನ ಮಹಿಳೆಯರನ್ನು ಮದುವೆಯಾಗಿರಿ. ಅವರಿಗೆ ನ್ಯಾಯ ಒದಗಿಸಲಾಗದು ಎಂದು ಅನ್ನಿಸಿದರೆ ಕೇವಲ ಒಬ್ಬಳನ್ನು ಮದುವೆಯಾಗಿರಿ. ಅದಕ್ಕೆ ವಿರುದ್ಧವಾಗಿ ನಿಮಗೆ ಸಾಮರ್ಥ್ಯವಿದ್ದರೆ ಬೇಕಾದಷ್ಟು ಮಹಿಳೆಯರನ್ನು ಮದುವೆಯಾಗ ಬಹುದು. ನಿಮಗೆ ನ್ಯಾಯ ಒದಗಿಸಲಾಗದು ಎನ್ನುವುದೇ ಸೂಕ್ತ." (೪:೩)

ಹೀಗೆ ಇಲ್ಲಿ ನ್ಯಾಯಕ್ಕೆ ಇಷ್ಟೊಂದು ಒತ್ತು ನೀಡಿರುವುದನ್ನು ಗಮನಿಸ ಬೇಕು. ಕುರ್‌ಆನ್ ಈ ವಿಷಯವಾಗಿ ಸಾಕಷ್ಟು ಎಚ್ಚರ ವಹಿಸಿದೆ. ಮುಂದೆ ೪:೧೨೯ನೆಯ ಶ್ಲೋಕದಲ್ಲಿ ಎಲ್ಲ ಮಡದಿಯರಿಗೆ ನ್ಯಾಯ ಒದಗಿಸುವುದರಲ್ಲಿ ಎದುರಾಗುವ ತೊಂದರೆಗಳ ಬಗ್ಗೆ ಪುರುಷರಿಗೆ ಎಚ್ಚರಿಸಲಾಗಿದೆ. ಅದು ಹೇಳುವುದು ಹೀಗೆ: "ನಿಮಗೆ ಮನಸ್ಸಿದ್ದರೂ ಎಲ್ಲ ಮಡದಿಯರಿಗೆ ನೀವು ನ್ಯಾಯ ಒದಗಿಸಲಾರಿರಿ. ಯಾವೊಬ್ಬಳನ್ನೂ ನೀವು ಸಂಪೂರ್ಣವಾಗಿ ಉಪೇಕ್ಷಿಸಿ ಅವಳ ಬದುಕನ್ನು ಅತಂತ್ರಗೊಳಿಸದಿರಿ. ನಿಮ್ಮ ತಪ್ಪಿನ ಅರಿವಾದ ಮೇಲೆ ನೀವು ನಿಮ್ಮ ಕರ್ತವ್ಯ ನಿರ್ವಹಿಸಿದರೆ ದಯಾಳುವಾದ ಅಲ್ಲಾಹ್ ನಿಮ್ಮನ್ನು ನಿಶ್ಚಿತವಾಗಿಯೂ ಕ್ಷಮಿಸುತ್ತಾನೆ" - ಹೀಗೆ ಕುರ್‌ಆನ್ ಸಮಾನವಾದ ನ್ಯಾಯ ಸಾಧ್ಯವಿಲ್ಲವೆನ್ನುವುದನ್ನು ಸ್ಪಷ್ಟಪಡಿಸುತ್ತದೆ. ಇನ್ನೊಬ್ಬಳನ್ನು ಮದುವೆಯಾಗಿ ಮೊದಲ ಮಡದಿಯ ಬದುಕನ್ನು ಅತಂತ್ರಗೊಳಿಸಕೂಡದು. ಮೊದಲಿನ ಉಲಮಾಗಳು ನ್ಯಾಯ ಎಂದರೆ ಏನು ಎನ್ನುವುದರ ಕುರಿತು ಸಹ ಚಿಂತನೆ ಮಾಡಿದರು. ನಾಲ್ಕೂ ಮಡದಿಯರನ್ನು ಸಮಾನವಾಗಿ ಪೋಷಿಸುವುದಕ್ಕೆ ಒತ್ತು ಕೊಟ್ಟರು. ಕೆಲವರು ಭಾವಿಸಿದಂತೆ ಅದು ಸಮಾನ ಪ್ರೀತಿಯನ್ನೂ ಒಳಗೊಳ್ಳುತ್ತದೆ. ಆದರೆ ೪:೧೨೯ನೆಯ ಶ್ಲೋಕದಲ್ಲಿ ಸೂಕ್ತವಾಗಿ ಸ್ಪಷ್ಟೀಕರಿಸಿರುವಂತೆ ಅದು ಸಾಧ್ಯವಾಗಲಾರದು. ಹಾಗಾಗಿ ಕುರ್‌ಆನ್‌ನ ಉದ್ದೇಶ ಏಕಪತ್ನಿತ್ವವನ್ನು ಪೋಷಿಸುವುದಾಗಿದೆ. ಅಷ್ಟೇ ಅಲ್ಲ, ಈ ಸಮಸ್ಯೆಗೆ ಕುರ್‌ಆನ್‌ನ ಮಾರ್ಗೋಪಾಯದ ಆಶಯವನ್ನು ಅರ್ಥ ಮಾಡಿಕೊಳ್ಳಲು ಬಹುಪತ್ನಿತ್ವಕ್ಕೆ ಸಂಬಂಧಿಸಿದ ಶ್ಲೋಕಗಳನ್ನು ಪತಿ-ಪತ್ನಿಯರ ಸಂಬಂಧಗಳ ಕುರಿತ ಕುರ್‌ಆನ್‌ನ ಇತರ ಶ್ಲೋಕಗಳೊಂದಿಗೆ ಓದಿಕೊಳ್ಳಬೇಕು.

ಮಹಿಳೆಯರ ಸಮಸ್ಯೆಯನ್ನು ಹೊಸ ಸಂವೇದನೆ ಮತ್ತು ಪರಿಹಾರದ ತಾಜಾತನದೊಂದಿಗೆ ಪರಿಹರಿಸಬೇಕಾಗುತ್ತದೆ. ಈ ಸಮಸ್ಯೆ ಕುರಿತು ಮಧ್ಯಯುಗದ ದೈವಶಾಸ್ತ್ರ ಪರಿಣತರು ಹೇಳಿದ್ದು ಅಪರಿವರ್ತನೀಯ ಹಾಗೂ ದೈವಿಯಾಗಿದೆ ಎನ್ನುವುದು ಸರಿಯಲ್ಲ. ಅಷ್ಟಕ್ಕೂ ಉಲಮಾಗಳು ಎಷ್ಟೇ ವಿದ್ವಾಂಸರಾಗಿದ್ದರೂ ಅವರು ಸಹ ಮನುಷ್ಯರೇ. ಒತ್ತಿ ಹೇಳಬೇಕಾದದ್ದೇನೆಂದರೆ ಅವರು ತಮ್ಮದೇ ಕಾಲದ ಉತ್ಪತ್ತಿಯಾಗಿದ್ದಾರೆ ಎನ್ನುವುದು. ಮಹಿಳೆಯರ ಸಮಸ್ಯೆ ಕುರಿತ ಅವರ ಚಿಂತನೆ ಅವರ ಕಾಲದ ಸಾಮಾಜಿಕ ಜಾಯಮಾನವನ್ನು ಬಿಂಬಿಸುತ್ತದೆ. ಕುರ್‌ಆನ್‌ನ ನೈಜ ಕಾಣ್ಕೆಯು ಕಾಲದ ಜೊತೆಗೆ ತಾನಾಗಿಯೇ ಅನಾವರಣಗೊಳ್ಳುತ್ತದೆ. ಕುರ್‌ಆನ್ ಲಿಂಗ ಸಮಾನತೆಯನ್ನು ಮುಂಗಂಡಿತ್ತು. ಈ ತೀರ್ಮಾನಕ್ಕೆ ಬರಲು ಕುರ್‌ಆನ್‌ನ ಶ್ಲೋಕಗಳಲ್ಲಿ ಸಾಕಷ್ಟು ಆಧಾರ ಸಿಗುತ್ತದೆ. ಈ ನಿಟ್ಟಿನಲ್ಲಿ ೨:೨೨೮ ಮತ್ತು ೩೩:೩೫ನೆಯ ಶ್ಲೋಕಗಳು ಸಂದೇಹಕ್ಕೆ ಆಸ್ಪದವಿಲ್ಲದಂತೆ ಲಿಂಗ ಸಮಾನತೆಯನ್ನು ಘೋಷಿಸುತ್ತವೆ. ಆದಾಗ್ಯೂ ಮಧ್ಯಯುಗದಲ್ಲಿ ಈ ಶ್ಲೋಕಗಳನ್ನು ಸಾಮಾನ್ಯವಾಗಿ ಉಪೇಕ್ಷಿಸಲಾಯಿತು ಅಥವಾ ಅವುಗಳನ್ನು ಬೇರೆ ರೀತಿಯಲ್ಲೇ ಅರ್ಥೈಸಿಕೊಳ್ಳಲಾಯಿತು. ಈ ವಿಷಯವಾಗಿ ಕುರ್‌ಆನ್‌ನ ನೈಜ ಸಂದೇಶವನ್ನು ಬಿಚ್ಚಿಡುವ ಕಾಲ ಈಗ

ಒದಗಿಬಂದಿದೆ. ಮಹಿಳೆಯನ್ನು ಇಸ್ಲಾಂ ಅಪಾರ ಗೌರವದಿಂದ ಕಂಡಿದೆ. ಆದ್ದರಿಂದ ನಿಜವಾದ ಮುಸ್ಲಿಮರು ಇಸ್ಲಾಂ ಮಹಿಳೆಗೆ ಅನ್ಯಾಯ ಮಾಡುತ್ತಿದೆ ಎನ್ನುವ ಅಭಿಪ್ರಾಯ ರೂಪುಗೊಳ್ಳಲು ಅವಕಾಶ ಕೊಡಬಾರದು.

ಕುರ್‌ಆನ್‌ನ ಅಭಿಪ್ರಾಯದಲ್ಲಿ ಮಹಿಳೆಯ ಸಮಸ್ಯೆಯನ್ನು ಯಾವ ದೃಷ್ಟಿಕೋನದಿಂದ ನೋಡಿದರೂ ಅವಳಿಗೆ ನಷ್ಟವಿಲ್ಲ, ಅಸಮಾನಳಲ್ಲ. ನಾವು ನಮ್ಮ ಚಿಂತನೆ ಹಾಗೂ ವಿವರಣೆಯನ್ನು ಕುರ್‌ಆನ್ ಮೇಲೆ ಹೇರಕೂಡದು. ನಮ್ಮ ಅನಿಸಿಕೆಯೇ ಕುರ್‌ಆನ್‌ನ ನೈಜ ಉದ್ದೇಶವೆಂದು ಯೋಚಿಸುವುದು ಅತಿರೇಕವಾದೀತು. ಉದಾಹರಣೆಗೆ ಮಹಿಳೆ ಮಗುವಿಗೆ ಜನ್ಮ ನೀಡುತ್ತಾಳೆ, ಪುರುಷ ಹಲವಾರು ತಿಂಗಳು ಕಾಲ ಅವಳ ಬಳಿಗೆ ಹೋಗಲಾರನು ಅಥವಾ ಅವಳಿಗೆ ಮುಟ್ಟು ಆಗುತ್ತದೆ. ಹಾಗಾಗಿ ಅವನಿಗೆ ಒಬ್ಬಳಿಗಿಂತಲೂ ಹೆಚ್ಚು ಮಡದಿಯರ ಅವಶ್ಯಕತೆ ಇರುತ್ತದೆ. ಹೀಗೆ ಹೇಳುವ ಮೂಲಕ ಎಷ್ಟೋ ಜನ ಬಹುತ್ವವನ್ನು ನ್ಯಾಯಸಮ್ಮತಗೊಳಿಸಲೆತ್ನಿಸುತ್ತಾರೆ. ಇದು ಸಂಪೂರ್ಣವಾಗಿ ಕುರ್‌ಆನ್ ವಿರೋಧಿ ಚಿಂತನೆ. ಇದು ಕುರ್‌ಆನ್‌ನ ಉದ್ದೇಶಿತ ವಿವರಣೆಯೂ ಅಲ್ಲ. ಇಂತಹ ವಿವರಣೆಗಳು ಕಾಮದ ಗೀಳಿನ ವಿವರಣೆಗಳಾಗಿರುತ್ತವೆ. ವಾಸ್ತವದಲ್ಲಿ ೨೪ : ೩ನೆಯ ಶ್ಲೋಕ ಹೀಗೆ ಹೇಳುತ್ತದೆ : "ಮದುವೆಗಾಗಿ ಆದಾಯದ ಮೂಲವಿಲ್ಲದವರು ಅಲ್ಲಾಹ್ ಕೃಪೆ ತೋರಿ ಸಂಪನ್ಮೂಲಗಳನ್ನು ಒದಗಿಸುವವರೆಗೆ ಸಂಯಮದಿಂದಿರಬೇಕು..."

ಹೀಗೆ ಒಬ್ಬಳನ್ನೇ ಮದುವೆಯಾಗಬೇಕೆಂದರೂ ಆದಾಯದ ಮೂಲಗಳನ್ನು ಹೊಂದುವವರೆಗೆ ಅವನು ಸಂಯಮದಿಂದಿರಬೇಕೆಂದು ಅಲ್ಲಾಹ್ ವಿಧಿಸುತ್ತಾನೆ. ಕಾಮದ ಗೀಳನ್ನು ಸ್ಪಷ್ಟವಾಗಿ ತಡೆಯಲಾಗಿದೆ. ಇಂತಹ ವಿವರಣೆಗಳು ಮಹಿಳೆಯನ್ನು ಲೈಂಗಿಕ ತೃಪ್ತಿಗಾಗಿ ಬಳಸಬಹುದಾದ ವಸ್ತುವನ್ನಾಗಿ ರೂಪಿಸುತ್ತವೆ. ಆದರೆ ಕುರ್‌ಆನ್ ಬಯಸುವಂತೆ ಅವಳು ಪ್ರೀತಿ ಹಾಗೂ ಗೌರವಕ್ಕೆ ಅರ್ಹಳಾದ ಸಂಗಾತಿಯಾಗಲಾರಳು. ಅಲ್ಲಾಹ್ ಇಬ್ಬರಲ್ಲೂ ಮವದ್ದಹ್ ಮತ್ತು ರಹಮ್ (ಪ್ರೀತಿ ಮತ್ತು ಅನುಕಂಪೆ) ಸೃಷ್ಟಿಸಿದ್ದಾನೆ, ಬರೀ ಕಾಮ ಪ್ರವೃತ್ತಿಯನ್ನು ಸೃಷ್ಟಿಸಿಲ್ಲ. ಕಾಮ ಪ್ರವೃತ್ತಿ ಕೇವಲ ಆನಂದಕ್ಕಿಂತ ಹೆಚ್ಚಾಗಿ ಸಂತಾನಾಭಿವೃದ್ಧಿಗಾಗಿ ಇರುವಂತಹುದು. ಅತ್ಯಂತ ಸಂಪ್ರದಾಯವಾದಿ ಉಲಮಾಗಳು ಸಹ ಈ ಅಭಿಪ್ರಾಯವನ್ನು ಸಮ್ಮತಿಸುತ್ತಾರೆ. ಆದಾಗ್ಯೂ ಬಹುತೇಕ ಮುಸ್ಲಿಮರು ಒಂದಕ್ಕಿಂತ ಹೆಚ್ಚು ಮದುವೆಯಾಗುವುದು ಲೈಂಗಿಕ ಕಾರಣಕ್ಕೇ ವಿನಾ ಬೇರೆ ಕಾರಣಕ್ಕಲ್ಲ. ಇದು ಮಹಿಳೆಯನ್ನು ಪ್ರೀತಿ ಮತ್ತು ಗೌರವಾರ್ಹ ಸಂಗಾತಿ ಎಂದು ಪರಿಗಣಿಸಬೇಕೆನ್ನುವ ಉದ್ದೇಶವನ್ನೇ ಹಾಳುಗೆಡುವುತ್ತದೆ. ಬಹುಪತ್ನಿತ್ವ ಕುರಿತ ದೃಷ್ಟಿಕೋನವನ್ನೇ ಸಮಗ್ರವಾಗಿ ಪರಿಷ್ಕರಿಸಬೇಕಾಗಿದೆ. ಮಹಿಳೆಯರು ಇಂದು ಹೆಚ್ಚು ಹೆಚ್ಚು ಸುಶಿಕ್ಷಿತರಾಗುತ್ತಿದ್ದಾರೆ, ಹೆಚ್ಚು ಹೆಚ್ಚು ಜಾಗೃತರಾಗುತ್ತಿದ್ದಾರೆ. ಹಾಗಾಗಿ ಮಹಿಳೆ ತನ್ನ ಸವತಿಯೊಂದಿಗೆ ಬದುಕುವುದು ಮತ್ತು ತನ್ನ ಪತಿಯ ಪ್ರೀತಿ ಮತ್ತು ಕಾಳಜಿಯನ್ನು ಅವಳೊಂದಿಗೆ ಹಂಚಿಕೊಳ್ಳುವುದನ್ನು ಅವಮಾನವೆಂದು ಪರಿಗಣಿಸುತ್ತಾಳೆ.




ಮೇಲೆ ಸ್ಪಷ್ಟೀಕರಿಸಿರುವಂತೆ ಪಶ್ಚಿಮಕ್ಕೆ ವಿರುದ್ಧವಾಗಿ ಇಸ್ಲಾಮೀ ಅಸ್ಮಿತೆಯ ಪ್ರಶ್ನೆಯನ್ನು ಇಸ್ಲಾಮೀ ಜಗತ್ತಿನಲ್ಲಿ ಮಹಿಳೆಯರ ಹಕ್ಕುಗಳ ವಿಚಾರವೆಂದು ಪರಿಗಣಿಸಲಾಗುತ್ತದೆ. ಅವಳ ಉಡುಗೆ, ಅವಳ ಹಿಜಾಬ್ ಮತ್ತು ಸಮಾಜದಲ್ಲಿ ಅವಳ ಸ್ಥಾನಮಾನವನ್ನು ಇಸ್ಲಾಮೀ ಅಸ್ಮಿತೆಯ ಒಂದು ಅಂಗವಾಗಿ ನೋಡಲಾಗುತ್ತದೆ. ಆದರೆ ಪುರುಷ ಇಂತಹ ಯಾವ ನಿಬಂಧನೆಯನ್ನೂ ಎದುರಿಸಲಾರನು. ಅವನು ಯಾವುದೇ ರೀತಿಯಲ್ಲಿ 'ಇಸ್ಲಾಮೀ ಕಟ್ಟಳೆಗಳನ್ನು ಉಲ್ಲಂಘಿಸದೆ' ಪಾಶ್ಚಾತ್ಯ ಉಡುಪು ತೊಡುವುದನ್ನು ಮತ್ತು ಆಧುನಿಕ ಸಮಾಜದ ಹೊಸ ಹೊಸ ಜೀವನಶೈಲಿಯನ್ನು ಅಂಗೀಕರಿಸುವುದನ್ನು ಮುಂದುವರಿಸಿದ್ದಾನೆ. ಪುರುಷರಿಗೆ ಸಂಬಂಧಿಸಿದಂತೆ ಹೇಳಬಹುದಾದರೆ ಪಾಶ್ಚಾತ್ಯ ಉಡುಪು ಧರಿಸುವುದು ಹೆಚ್ಚು ಗೌರವಾರ್ಹವೆಂದು ಪರಿಗಣಿಸಲಾಗುತ್ತದೆ. ಆದರೆ ಮಹಿಳೆ ಬೇರೆ ಉಡುಪು ಧರಿಸಿದರೆ ಅದನ್ನು ಇಸ್ಲಾಮೀ ಕಟ್ಟಳೆಯ ಉಲ್ಲಂಘನೆ ಎಂದು ಭಾವಿಸಲಾಗುತ್ತದೆ. ಅವಳ ಪಾತ್ರವನ್ನು ನಿರ್ಬಂಧಿಸಲು ಅನುಕೂಲಕರವಾಗುವಂತಹ ಭಾಷ್ಯಗಳೊಂದಿಗೆ ಕುರ್‌ಆನ್‌ನ ಶ್ಲೋಕಗಳನ್ನು ಹುಡುಕಿ ತೆಗೆಯಲಾಗುತ್ತದೆ. ಮಹಿಳೆ ಸಭ್ಯವಾದ ಉಡುಪನ್ನು ಧರಿಸಬೇಕು ಎನ್ನುವುದು ಕುರ್‌ಆನ್‌ನ ವಾದದ ಆಶಯವಾಗಿದೆ ಎನ್ನುವುದನ್ನು ಎಲ್ಲರೂ ಒಪ್ಪುತ್ತಾರೆ. ಅವಳು ತನ್ನ ದೇಹಸಿರಿಯನ್ನು ಪ್ರದರ್ಶಿಸಕೂಡದು. ಅದು ಸಹ ಅರೇಬಿಯಾದ ಒಂದು ವಿಶಿಷ್ಟ ಸಂದರ್ಭದಲ್ಲಿ ಚಾಲ್ತಿಯಲ್ಲಿತ್ತು. ಅರಬ್ ಮಹಿಳೆಯರು ಸಾರ್ವಜನಿಕ ಸ್ಥಳಗಳಲ್ಲಿ ನಿಂತಿರುತ್ತಿದ್ದರು, ಪುರುಷರ ಗಮನ ಸೆಳೆಯಲು ತಮ್ಮ ದೇಹಸಿರಿಯನ್ನು ಪ್ರದರ್ಶಿಸುತ್ತಿದ್ದರು, ಪುರುಷರ ಗಮನ ಸೆಳೆಯಲೆಂದೇ ತಮ್ಮ ಅಂದುಗೆಗಳು ಸದ್ದು ಮಾಡುವಂತೆ ಕಾಲುಗಳನ್ನು ನೆಲಕ್ಕೆ ಬಡಿಯುತ್ತಿದ್ದರು. ಅಷ್ಟೇ ಅಲ್ಲ ಅವಳು ಸಾಧ್ಯವಾದಷ್ಟೂ ತನ್ನ ದೇಹ ತೆರೆದಿಡುತ್ತಿದ್ದಳು. ಕುರ್‌ಆನ್ ತಡೆಯಲೆತ್ನಿಸಿದ್ದು ಈ ಅಸಭ್ಯ ವರ್ತನೆಯನ್ನು. ಕುರ್‌ಆನ್ ಅವಳ ಜೀನತ್ (ಅಲಂಕಾರ)ನ ಹಕ್ಕನ್ನು ಎಂದೂ ಕಸಿದುಕೊಳ್ಳಲಿಲ್ಲವೆನ್ನುವುದು ಗಮನಾರ್ಹವಾಗುತ್ತದೆ. ತನ್ನ ಪತಿ ಎದುರು ಮತ್ತು ಮದುವೆಗೆ ಅರ್ಹರಲ್ಲದವರ (ಮಹರಮ್) ಎದುರು ಅವಳು ತನ್ನ ಸೌಂದರ್ಯವನ್ನು ಪ್ರದರ್ಶಿಸಲು ಅವಕಾಶವಿದೆ.

ಕೆಲವು ನಿರ್ದೇಶಿತ ಕ್ಷೇತ್ರಗಳನ್ನು ಹೊರತುಪಡಿಸಿ ಬೇರೆಲ್ಲೂ ಮಹಿಳೆ ಕಾರ್ಯತತ್ಪರಳಾಗಕೂಡದು ಎನ್ನುವುದೂ ಒಂದು ಸಾಂಸ್ಕೃತಿಕವಾಗಿ ನಿರ್ಬಂಧಿತ ಕಲ್ಪನೆಯೇ. ಅದು ಕುರ್‌ಆನ್‌ನಿಂದಾಗಲೀ ಸುನ್ನಾ (ಪ್ರವಾದಿಯ ನಡೆ ನುಡಿ)ದಿಂದಾಗಲೀ ಪ್ರಮಾಣೀಕರಿಸಲ್ಪಟ್ಟಿಲ್ಲ. ಮಹಿಳೆಯರು ಪ್ರವಾದಿಯ ಕಾಲದಲ್ಲಿ ಯುದ್ಧಭೂಮಿ ಮೊದಲು ಮಾಡಿ–ಕೇವಲ ಗಾಯಾಳುಗಳಿಗೆ ಶುಶ್ರೂಷೆ ನೀಡಲು ಅಷ್ಟೇ ಅಲ್ಲ–ಎಲ್ಲ ಕ್ಷೇತ್ರಗಳಲ್ಲಿ ಕ್ರಿಯಾಶೀಲರಾಗಿರುತ್ತಿದ್ದರು. ಯುದ್ಧಭೂಮಿಯಲ್ಲಿ ಅವರ ಪಾತ್ರ ದಾಯಿಗಳಿಗಿಂತಲೂ ಹೆಚ್ಚಿನದಾಗಿತ್ತು. ಅವರ ಪೈಕಿ ಉಮ್ಮೆ ಉಮರಾಳ ಪ್ರಸಂಗ ಸುಪ್ರಸಿದ್ಧವಾಗಿದೆ. ಉಹುದ್ ಯುದ್ಧದಲ್ಲಿ ಮಕ್ಕಾದ ಕುಫ್ಫಾರ್ (ಧರ್ಮನಿಂದಕರು)ರಿಂದ ಕೊಲೆಯಾಗಲಿದ್ದ ಪ್ರವಾದಿಯನ್ನು ರಕ್ಷಿಸಿದವಳು ಉಮ್ಮೆ ಉಮರಾಳೇ. ಕೈಯಲ್ಲಿ ಖಡ್ಗ ಹಿಡಿದು ಅವಳು ಪ್ರವಾದಿಯ ಮೇಲೆ ದಾಳಿ ಮಾಡಲು ಸಮೀಪ ಬಂದವರ ಮೇಲೆ ಎರಗಿ ಖಡ್ಗದಿಂದ ಅವರ ಹೊಟ್ಟೆ ಬಗೆಯುತ್ತಿದ್ದಳು. ಅವಳು ಸಾಮಾನ್ಯವಾಗಿ 'ಉಹುದ್‌ನ ಮಹಿಳೆ' ಎಂದೇ ಸುಪರಿಚಿತಳಾಗಿದ್ದಳು. ಪ್ರವಾದಿ ಸಹ ಅವಳ ಬಗ್ಗೆ ಅಪಾರ ಗೌರವದ ಭಾವನೆ ಹೊಂದಿದ್ದರು. ಮೇಲಿಂದ ಮೇಲೆ ಅವಳ ಕ್ಷೇಮ ವಿಚಾರಿಸುತ್ತಿದ್ದರು. ಗಜಾಲಾ ಎಂಬ ಖಾರಿಜಾ ಮಹಿಳೆಯ ನಿದರ್ಶನವೂ ಇದೆ. ಅವಳು ತನ್ನ ಶೌರ್ಯಕ್ಕೆ ಹೆಸರಾಗಿದ್ದಳು. ಅವಳು ಯೂಸುಫ್ ಬಿನ್ ಹಿಜ್ಜಾಜ್ ಎಂಬ ಉಮ್ಮೆಯಾ ರಾಜ್ಯಪಾಲನನ್ನು ರಣರಂಗದಲ್ಲಿ ಮುಖಾಮುಖಿಯಾದಳು. ಅವನ ಹೆಸರು ಕೇಳಿದರೆ ಸಾಕು ಅರಬರ ಜಂಘಾಬಲವೇ ಉಡುಗುತ್ತಿತ್ತು. ಅವನೊಬ್ಬ ಕ್ರೂರ ಆಡಳಿತಗಾರನಾಗಿದ್ದ.

ಹೀಗೆ ಮಹಿಳೆಯರು ರಣರಂಗದಲ್ಲೂ ಸಕ್ರಿಯವಾಗಿ ಪಾಲ್ಗೊಂಡು ತಮ್ಮ ಶೌರ್ಯ ಮೆರೆದರೆನ್ನುವುದನ್ನು ಗಮನಿಸಬಹುದು. ಅಂದ ಮೇಲೆ ಅವರು ಬಯಸಿದರೆ ಪೊಲೀಸ್ ಅಥವಾ ಸೇನೆಯಲ್ಲಿ ಸೇವೆ ಸಲ್ಲಿಸಕೂಡದು ಎಂದು ಅವರನ್ನು ತಡೆಯುವುದೇಕೆ ? ಹಜ್ರತ್ ಉಮರ್

ತಮ್ಮ ಕಾಲದಲ್ಲಿ ಮಹಿಳೆಯೊಬ್ಬಳನ್ನು ಮಾರ್ಕೆಟ್‌ನ ಮುಖ್ಯ ಇನ್‌ಸ್ಪೆಕ್ಟರ್ ಆಗಿ ನೇಮಕ ಮಾಡಿದ್ದರು. ಅಗನಿಯಲ್ಲಿ ಅತ್ಯಂತ ಪ್ರತಿಭಾವಂತ ಕವಯತ್ರಿಯರು, ಸಂಗೀತಗಾರರು ಹಾಗೂ ಕಲಾರಾಧಕರ ವೃತ್ತಾಂತಗಳನ್ನು ನೋಡಬಹುದು. ಅವರು ಅಪಾರ ಗೌರವಕ್ಕೆ ಪಾತ್ರರಾಗಿದ್ದರು. ಅವರಲ್ಲಿ ಕೆಲವರು ಬದುಕಿನ ವಿಭಿನ್ನ ಕ್ಷೇತ್ರಗಳಲ್ಲಿ ಮಹಾನ್ ಸಾಧನೆ ಮಾಡಿದವರಾಗಿದ್ದರು. ಅಬ್ಬಾಸಿ ಖಲೀಫ್ ಹಾರೂನ್ ಅಲ್-ರಶೀದನ ಮಡದಿ ಜುಬೇದಾ ಅತ್ಯಂತ ಚಾಣಾಕ್ಷ ಆಡಳಿತಗಾರಳಾಗಿದ್ದಳು. ಮುಖ್ಯ ನೀತಿ ನಿರ್ಧಾರಗಳನ್ನು ತೆಗೆದುಕೊಳ್ಳುವ ಮೊದಲು ಅವಳ ಸಲಹೆ ಪಡೆಯಲಾಗುತ್ತಿತ್ತು. ನೀರಾವರಿ ವ್ಯವಸ್ಥೆಯನ್ನು ರೂಪಿಸಿದವಳು ಅವಳೇ. ಜನತೆ ಅದರಿಂದ ಅಪಾರ ಪ್ರಯೋಜನ ಪಡೆಯಿತು. ಈ ರೀತಿ ಇಂದಿನಂತೆ ಆಗ ಮಹಿಳೆಯರ ಮೇಲೆ ನಿರ್ಬಂಧಗಳನ್ನು ಹೇರಲಾಗುತ್ತಿರಲಿಲ್ಲ ಎನ್ನುವುದನ್ನು ಗಮನಿಸಬೇಕು. ಇವು ಸಾಂಸ್ಕೃತಿಕವಾಗಿ ರೂಪಿಸಲ್ಪಟ್ಟ ನಿರ್ಬಂಧಗಳಾಗಿವೆಯೆ ವಿನಾ ಕುರ್‌ಆನ್ ಇಲ್ಲವೆ ಹದಿಸ್‌ನ ಆದೇಶಗಳಲ್ಲ.

ಪಾಳೆಯಗಾರಿ ಸಂಸ್ಕೃತಿ ಮಹಿಳೆಯರ ಮೇಲೆ ಬಲವಾದ ನಿರ್ಬಂಧಗಳನ್ನು ವಿಧಿಸಿತು. ಅವಳ ಪಾತ್ರವನ್ನು ಮನೆಗೆಲಸಕ್ಕೆ ಮಾತ್ರ ಸೀಮಿತಗೊಳಿಸಿತು. ಅವಳು ಕಟ್ಟುನಿಟ್ಟಾಗಿ ಪರ್ದಾ ಆಚರಿಸುವುದನ್ನು ಕಡ್ಡಾಯಗೊಳಿಸಿತು. ಎಲ್ಲವೂ ಬದಲಾಗುತ್ತಿದೆ. ಆದಾಗ್ಯೂ ಬದಲಾವಣೆಗೆ ಬಲವಾದ ವಿರೋಧ ವ್ಯಕ್ತವಾಗುತ್ತಿದೆ. ಸಾಂಸ್ಕೃತಿಕ ಪೂರ್ವಗ್ರಹಗಳ ವಿರುದ್ಧ ಹೋರಾಡುವುದು ಸುಲಭವಲ್ಲ. ಹೀಗೆ ಅವಳ ಪಾತ್ರವನ್ನು ಸೀಮಿತ ಗೊಳಿಸುತ್ತಿರುವುದು ಪಾಳೆಯಗಾರಿ ಸಾಂಸ್ಕೃತಿಕ ಸಂವೇದನೆಗಳೇ. ಮುಸ್ಲಿಂ ಮಹಿಳೆಯರು ಈ ನಿರ್ಬಂಧಗಳ ವಿರುದ್ಧ ಹೋರಾಡಬೇಕು, ತಮ್ಮ ಆಯ್ಕೆಯ ಯಾವುದೇ ಕ್ಷೇತ್ರದಲ್ಲಿ ಸಾಧನೆ ಮಾಡಿ ತೋರಿಸಲು ಪ್ರಯತ್ನಿಸಬೇಕು. ಮಹಿಳೆಯರು ಮನೆಗೇ ಸೀಮಿತವಾಗಿ ಉಳಿದರೆ ಮುಸ್ಲಿಂ ಸಮುದಾಯಗಳು ಪ್ರಗತಿ ಸಾಧಿಸಲಾರವು. ಬಾಲ್ಯ ವಿವಾಹ ಕೂಡ ಧಾರ್ಮಿಕ ನಿಬಂಧನೆಯಾಗಿರದೆ ಸಾಂಸ್ಕೃತಿಕ ತೀರ್ಮಾನವಾಗಿರುತ್ತದೆ. ಬಾಲ್ಯ ವಿವಾಹ ಅಥವಾ ಅಪ್ರಾಪ್ತ ವಯಸ್ಸಿನವರ ಮದುವೆಯನ್ನು ಸಹ ತಡೆಯಬೇಕು. ಸಾಂಸ್ಕೃತಿಕ ಕಾರಣಗಳಿಗಾಗಿ ಬಾಲ್ಯ ವಿವಾಹಕ್ಕೆ ಅವಕಾಶ ಮಾಡಿಕೊಟ್ಟ ಇಸ್ಲಾಂ ಬಾಲಕಿಯರಿಗೆ ಖೈರುಲ್ ಬುಲೂಗ್ (ಪ್ರೌಢಾವಸ್ಥೆಯ ಆಯ್ಕೆ) ಎನ್ನುವುದನ್ನು ಕೊಡಮಾಡಿತು. ಅಂದರೆ ಅವಳು ಪ್ರೌಢಾವಸ್ಥೆಗೆ ಬಂದ ಮೇಲೆ ತನ್ನ ವಿವಾಹ ಒಪ್ಪಿಗೆಯಾಗದಿದ್ದರೆ ಅವಳು ಅದನ್ನು ಅಸಿಂಧುಗೊಳಿಸಬಹುದು. ಹೀಗೆ ಇಸ್ಲಾಂ ಬಾಲ್ಯ ವಿವಾಹವನ್ನು ನಿಯಂತ್ರಿಸಿತು.

ಪಾಳೆಯಗಾರಿ ಸಮಾಜ ಹೇರಿದ ನಿರ್ಬಂಧಗಳನ್ನು ಮೆಟ್ಟಿ ನಿಲ್ಲದ ಹೊರತು ಮುಸ್ಲಿಂ ಮಹಿಳೆಯ ಸಬಲೀಕರಣ ಸಾಧ್ಯವಾಗಲಾರದು. ಅವಳು ಆಧುನಿಕ ಕೌಶಲ್ಯ ಕರಗತ ಮಾಡಿಕೊಳ್ಳಬೇಕು, ಎಲ್ಲ ಕ್ಷೇತ್ರಗಳಲ್ಲೂ ಸಾಧನೆ ಮಾಡಬೇಕು. ಹಕ್ಕುಗಳ ರೂಪದಲ್ಲಿ ಅವಳಿಗೆ ಕೊಡಮಾಡಿದ್ದನ್ನು ಇಂದು ಆಧುನಿಕ ಸಮಾಜ ಒದಗಿಸುತ್ತಲಿದೆ. ಅವಳು ತನ್ನ ಸೀಮಿತ ಪಾತ್ರವನ್ನು ಧಿಕ್ಕರಿಸಬೇಕು, ತನ್ನ ಇಸ್ಲಾಮೀ ಹಕ್ಕುಗಳಿಗಾಗಿ ಹೋರಾಡಬೇಕು. ಇಸ್ಲಾಮೀ ಹಕ್ಕುಗಳಿಗಾಗಿ ನಡೆಸುವ ಈ ಹೋರಾಟ ಅವಳನ್ನು ಸಬಲೀಕರಿಸಬಲ್ಲದು.

ಮೂಲ : **ಡಾ|| ಅಸ್ಗರ್ ಅಲಿ ಎಂಜಿನಿಯರ್**
ಕನ್ನಡಕ್ಕೆ : **ಹಸನ್ ನಯೀಂ ಸುರಕೋಡ**
ನಂ. ೧೪೪, ಮಡ್ಡಿಗಲ್ಲಿ, ರಾಮದುರ್ಗ - ೫೯೧ ೧೨೩, ಬೆಳಗಾವಿ ಜಿಲ್ಲೆ

# ನಾನು ಬೀದಿಯ ಮನುಷ್ಯ

ಇಲ್ಲಿಯೇ ನಾನು ಹುಟ್ಟಿದ್ದು
ಇಲ್ಲಿನ ಬೀದಿಗಳ
ಅಂಗಾಲ ಮೇಲೆ
ನನ್ನ ಹುಟ್ಟಿನ ದಿನಾಂಕವಿದೆ

ಆಗ ಬೀದಿಗಳಿದ್ದವು
ರಸ್ತೆಗಳಿರಲಿಲ್ಲ
ನನ್ನ ಹಾದಿ ಹೆಣವಾಗದಂತೆ
ತಡೆದದ್ದೇ ಅವು
ಅವು ನನ್ನ ಮೇಲೆ
ಹಕ್ಕು ಚಲಾಯಿಸಿಲ್ಲ
ನನ್ನ ಪಾದಗಳ ಚುಂಬಿಸಿದವು.

ಬೀದಿಯಲಿ ಬೆಳೆದವನು ನಾನು
ನನ್ನ ಹೆಸರಿಡದೆ ಕರೆದರು
ಈ ಮಣ್ಣಿಗೆ, ಗಾಳಿಗೆ, ನೀರಿಗೆ
ನನ್ನ ಪರಿಚಯವಿದೆ
ನಾನು ಇದೇ ಊರಿನವನೆಂದು
ನಿಮಗೆ ಯಾವ ಪುರಾವೆ ಕೊಡಲಿ ?

ಈ ಮಣ್ಣಿನ ಮೇಲೆ
ನನ್ನ ಹಸ್ತದ ಗುರುತುಗಳಿವೆ
ಈ ಗಾಳಿ ನನ್ನನ್ನು ಮುಟ್ಟಿದೆ
ಇದೇ ನೀರು ನನ್ನ
ಗಂಟಲಿನ ಅಂಗಳದ ಪಸೆಯನ್ನು
ಜೀವಂತವಾಗಿಟ್ಟಿದೆ.

ಗುರುತು ಕೊಡಿ ಎಂದರೆ
ಏನು ಕೊಡಲಿ ?
ನನ್ನ ಅಂಗೈಗೆ ಮೆತ್ತಿದ
ರಕ್ತದ ಕಲೆ ತೋರಿಸಲೆ ?
ದೇಹದ ತುಂಬ ಗೀಚಿ ಹೋದ
ಗಾಯದ ಗುರುತು ಹೇಳಲೆ ?
ಕರಗಿ ಹೋದ ನನ್ನ ಅಸಂಖ್ಯಾತ
ಕಣ್ಣೀರಿನ ಲೆಕ್ಕ ಕೊಡಲಿ ?

ನನ್ನ ಬಳಿ ಯಾವ ಗುರುತೂ ಇಲ್ಲ
ನಾನು ಬೀದಿಯ ಮನುಷ್ಯ
ನನ್ನ ಬೀದಿಯಲ್ಲೇ ಬಿಟ್ಟು ಬಿಡಿ

**ಬಸವರಾಜ ಹೂಗಾರ**
ಸಹಾಯಕ ನಿರ್ದೇಶಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಜಿಲ್ಲಾ ರಂಗಮಂದಿರ, ಕಾಜುಬಾಗ, ಕಾರವಾರ (ಉತ್ತರ ಕನ್ನಡ ಜಿಲ್ಲೆ)

# ವಿದ್ಯುನ್ಮಾನ ಮಾಧ್ಯಮಗಳು ಮತ್ತು ಸಾಂಸ್ಕೃತಿಕ ಪ್ರಕ್ಷುಬ್ಧತೆ

ಇವತ್ತಿನದು ಬಂಡವಾಳಶಾಹಿ ರಾಜಕಾರಣವಾಗಿದೆ. ಬಂಡವಾಳ ಹೂಡುವ ಯಾವುದೇ ರಾಜಕಾರಣಿ ಅದನ್ನು ಅಸಲು ಮತ್ತು ಲಾಭದ ರೂಪದಲ್ಲಿ ಹಿಂದಿರುಗಿ ಪಡೆಯಲು ಯತ್ನಿಸುತ್ತಾನೆ. ಅದು ಮುಖ್ಯವಾಗಿ ಚುನಾವಣಾ ರಂಗದಲ್ಲಿ ಇಳಿಯುವ ಮೂಲಕ. ಇಂತಹ ಬಂಡವಾಳ ತಮ್ಮ ಪೂರ್ವಿಕರು ಇಟ್ಟ ಆಸ್ತಿಯಿಂದ ಬಂದಿರಬಹುದು ಅಥವಾ ಭ್ರಷ್ಟಾಚಾರದಿಂದ ಗಳಿಸಿದ ಸಂಪತ್ತು ಆಗಿರಬಹುದು. ಅಥವಾ ಅಪರೂಪಕ್ಕೆ ಪಕ್ಷವು ದೇಣಿಗೆಯ ರೂಪದಲ್ಲಿ ಸಂಗ್ರಹಿಸಿಟ್ಟಿರುವ ಅನೈತಿಕ ಹಣವೂ ಆಗಿರಬಹುದು. ಒಟ್ಟಾರೆ ಇಂತಹ ಹಣದಿಂದ ಮಾತ್ರ ರಾಜಕಾರಣಿಯಾದವನು ಕೋಟ್ಯಂತರ ರೂಪಾಯಿಗಳನ್ನು ಚುನಾವಣೆಗೆ ಚೆಲ್ಲಲು ಸಾಧ್ಯ. ಬೆವರು ಹರಿಸಿ ದುಡಿದು ಗಳಿಸಿದವರ ಗಳಿಕೆ ಸೀಮಿತವಾದುದು. ಇಂಥವರು ಮತ ಚಲಾವಣೆಗೆ ಮಾತ್ರ ತಮ್ಮ ಪಾತ್ರವನ್ನು ನಿಭಾಯಿಸಿ, ತೃಪ್ತಿಪಟ್ಟುಕೊಳ್ಳಬಹುದು.

ಈ ಹಿನ್ನೆಲೆಯಲ್ಲಿ ಇವತ್ತಿನ ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಯಾರು ಬೇಕಾದರೂ ಚುನಾವಣೆಯಲ್ಲಿ ಸ್ಪರ್ಧಿಸಬಹುದು ಎಂಬ ಹಕ್ಕನ್ನು ಸಂವಿಧಾನದತ್ತವಾಗಿ ಪಡೆದಿದ್ದರೂ ವಾಸ್ತವದಲ್ಲಿ ಅದರಲ್ಲಿ ಈಜಿ ಬರುವುದಕ್ಕೆ ಹೀಗೆ ಬಂಡವಾಳ ಹೂಡುವ ರಾಜಕೀಯ ಬಂಡವಾಳಶಾಹಿಗಳಿಗೆ ಮಾತ್ರ ಸಾಧ್ಯ. ಆದ್ದರಿಂದಲೇ ಇದು ಬಂಡವಾಳಶಾಹಿ ರಾಜಕೀಯ ವ್ಯವಸ್ಥೆ ಎಂದದ್ದು.

ಈ ಕುರಿತು ಸಾಮಾನ್ಯ ಜನತೆ ತೀವ್ರವಾಗಿ ಯೋಚಿಸದಂತಹ ರೀತಿಯಲ್ಲಿ ಈ ರಾಜಕಾರಣಿಗಳ ಚುನಾವಣಾ ಪ್ರಣಾಳಿಕೆ, ಅಲ್ಲಿಯ ಜನಪ್ರಿಯ ಕಾರ್ಯಕ್ರಮಗಳು ಇರುತ್ತವೆ. ಅವುಗಳೆಂದರೆ ತಾವು ಗೆದ್ದರೆ ಸೀರೆ ಕೊಡುವುದು, ಟಿ.ವಿ. ಕೊಡುವುದು, ಇತ್ತೀಚೆಗೆ ಲ್ಯಾಪ್‌ಟಾಪ್ ಕೊಡುವುದು ಇತ್ಯಾದಿ. ದೇಶದ ಒಟ್ಟು ಸಂಪತ್ತಿನ ಸಮಾನ ಹಂಚಿಕೆ ಹೀಗೆ ಮಾತ್ರ ಸಾಧ್ಯವೇ? ಎಂದು ಜನತೆ ಯೋಚಿಸುವುದೇ ಇಲ್ಲ. ಹಾಗೆ ಯೋಚಿಸದಂತೆ ಮಾಡಲು ಬಂಡವಾಳಶಾಹಿ ವಿದ್ಯುನ್ಮಾನ ಮಾಧ್ಯಮಗಳು ಸಹ ತಮ್ಮ ಕೈಂಕರ್ಯವನ್ನು ಮಾಡುತ್ತವೆ. ಇವುಗಳು ದಿನದ ಇಡೀ ಇಪ್ಪತ್ನಾಲ್ಕು ಗಂಟೆಗಳೂ ಅಗ್ಗದ ಜನಪ್ರಿಯ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಿರುತ್ತವೆ. ಈ ಪ್ರಸಾರದ ಪೈಪೋಟಿಯಲ್ಲಿ ನೂರಾರು ಖಾಸಗಿ ಚಾನೆಲ್‌ಗಳಿವೆ. ಇವುಗಳ ನಡುವೆ ಅನಾರೋಗ್ಯಕರ ಪೈಪೋಟಿ ಏರ್ಪಟ್ಟು ಹೆಚ್ಚು ಹೆಚ್ಚು ಅಗ್ಗದ, ರೋಚಕ ಕಾರ್ಯಕ್ರಮಗಳನ್ನು ಇವು ಪ್ರಸಾರ ಮಾಡುತ್ತವೆ. ಅದಕ್ಕಾಗಿ ಹಾಡು, ಕುಣಿತ, ಹೊಡೆದಾಟ, ಧಾರಾವಾಹಿ, ಸಿನಿಮಾ ಇತ್ಯಾದಿಗಳನ್ನು ಪ್ರಸಾರ ಮಾಡುತ್ತವೆ. ಜನರಿಗೋ ಈ ಎಲ್ಲವನ್ನೂ ನೋಡಬೇಕೆಂಬ ತವಕ ಇದ್ದಾಗಲೂ ಇರುವ ಸೀಮಿತ ಇಪ್ಪತ್ತನಾಲ್ಕು ಗಂಟೆಗಳಲ್ಲಿ ಅವುಗಳಲ್ಲಿ ಕೆಲವನ್ನು ಮಾತ್ರ ಕಣ್ಣುಗಳೆಂಬ ಗಂಟಲಿನಲ್ಲಿ ತುರುಕಿಸಿಕೊಳ್ಳಲು ಸಾಧ್ಯ. ಇಂತಹ ನೂರಾರು ಕಾರ್ಯಕ್ರಮಗಳಲ್ಲಿ ಪಾತ್ರ ನಿರ್ವಹಿಸುವ ಕಲಾವಿದರಿಗೆ ಬರವೇ! ಇವರು ಸಹ ತಮ್ಮ ಕಲೆಯನ್ನು ಈ ಪ್ರಧಾನವಾಹಿನಿಯಲ್ಲಿ ಮುಂದಕ್ಕೊಯ್ದು ಮಾರಿಕೊಂಡುಬಿಡುತ್ತಾರೆ. ಇಲ್ಲವಾದಲ್ಲಿ ಇವರು ಮೂಲೆ ಸೇರಿದ ಕಲಾವಿದರಾಗಬೇಕಾಗುತ್ತದೆ. ಹಾಗಾಗಿ ವ್ಯವಸ್ಥೆ ನಿರ್ಮಿಸಿದ ಪೈಪೋಟಿಗನುಗುಣವಾಗಿ ಇವರು ಟ್ರ್ಯಾಕ್‌ಗೆ ಇಳಿಯುತ್ತಾರೆ. ಹುಚ್ಚು ಕುದುರೆಯಾಗಿ ಓಡುತ್ತಾರೆ. ತಾವು ಯಾವ ದಿಕ್ಕಿಗೆ ಓಡುತ್ತಿದ್ದೇವೆ ಅಥವಾ ತಾವು ಓಡುತ್ತಿದ್ದೇವೆಯೋ ಅಥವಾ ವ್ಯವಸ್ಥೆಯೇ ಹೀಗೆ ಓಡಿಸುತ್ತಿರುವಂತೆ ಮಾಡಿಸುತ್ತಿದೆಯೋ ಎಂಬುದನ್ನು ಯೋಚಿಸುವ ವ್ಯವಧಾನ ಇರುವುದು ಹುಚ್ಚು ಕುದುರೆಗಳಿಗೆ ಹೇಗೆ ಸಾಧ್ಯ?

ಇಂತಹ ಕಾರ್ಯಕ್ರಮಗಳ ಮೇಲೆ ಪ್ರಾಯೋಜನೆ ಮಾಡುವವರು

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ

ಟಿ.ವಿ. ಮತ್ತು ರೇಡಿಯೋ ಎಫ್.ಎಂ. ಎಂಬ ಖಾಸಗಿ ಚಾನೆಲ್‌ಗಳು ಹುಚ್ಚು ಕುದುರೆಯಾಗಿ ಓಡುತ್ತಿವೆ. ಕ್ಯಾಲೆಂಡರ್ ಹಿಂದೆ, ಗಡಿಯಾರದ ಹಿಂದೆ ಓಡಿ ಮುಗ್ಗರಿಸುತ್ತಿರುವ ಇವತ್ತಿನ ನಾಗರಿಕರಿಗೆ ಈ ಒಂದು ಆಧುನಿಕ ವಿಕೃತಿ ಸಹ ಕಾಡುತ್ತಿದೆ. ಈ ಮಾದರಿಯಲ್ಲಿ ಇದಕ್ಕೆ ಇಂದು ದಿಕ್ಕು ತೋರದಾಗಿದೆ. ಇಂತಹ ಸಮಾಜದ ಪರಿಭ್ರಮಣದಲ್ಲಿ ಹೊಸ ದಿಕ್ಕು, ಬದಲಾವಣೆಯೆಂಬುದು ಕಷ್ಟ ಸಾಧ್ಯ. ಆದ್ದರಿಂದ ಈ ಖಾಸಗಿ ಚಾನೆಲ್‌ಗಳ ಕಾರ್ಯಕ್ರಮಗಳಿಗೊಂದು ಅಗತ್ಯವಾದ ಜನಪರ ಸಾಂಸ್ಕೃತಿಕ ನೀತಿಯನ್ನು ಅನುಷ್ಠಾನಗೊಳಿಸಬೇಕಾಗಿದೆ. ಈ ಕಾರ್ಯವನ್ನು ಪುನಃ ಬಂಡವಾಳಶಾಹಿ ರಾಜಕಾರಣಿಗಳೇ ಮಾಡಬೇಕಾದ ಪರಿಸ್ಥಿತಿ ಇದೆ. ಇವರಿಗೆ ಜನರ ಶ್ರೇಯೋಭಿವೃದ್ಧಿ, ಆಶಯಗಳಿಗಿಂತ ಈ ವಿದ್ಯುನ್ಮಾನ ಮಾಧ್ಯಮಗಳ ಅಧಿಪತಿಗಳಾದ ಬಂಡವಾಳಶಾಹಿಗಳ ಶ್ರೇಯೋಭಿವೃದ್ಧಿ, ಆಶಯಗಳೇ ಮುಖ್ಯ. ಇವರೀರ್ವರು ಪರಸ್ಪರ ಶ್ರೇಯೋಭಿಲಾಷಿಗಳಾಗಿದ್ದಾರೆ.

# ದಾರಿಮಾತು

ನಾವು ನಡೆದಾಗೆಲ್ಲ
ನಮ್ಮೊಂದಿಗೇ ಮಾತನಾಡಿಸುವ
ಅಲ್ಲಾವುದ್ದೀನ ಗಲ್ಲಿ
ಮಲಗಿದೆ
ಕಾಲಸಪ್ಪಳದ ಕೆಳಗೆ ಕಿವಿಕೊಟ್ಟು ಆಲಿಸಿದ
ನಡೆದವರ ಕಥೆ ಹೇಳುವ ಹಾದಿ
ನಿದ್ದೆ ಹೋಗಿದೆ

ಆತ್ಮ ರತಿ, ಸ್ವರತಿ ದಿಕ್ಕು ಬದಲಾದವರ ಸಾರಥ್ಯ
ಬೆಟ್ಟದಷ್ಟು ಬೆಳಕ ತೋರುವ ಸಾಹಸದಲ್ಲಿ
ನಂದಿಯಾಗಿ, ನಂದಿಹೋದ
ಬರೇ ಮಂದಿಯಾಗಿ ಸಂದರೂ ಅಲ್ಲಲ್ಲಿ ಮಧ್ಯೆ
ಕವಡೆಯಲ್ಲಿ ಸರಿಬಿದ್ದು ಮುಗಿಲು ಮುಟ್ಟಿದ
ದೀಪ ಹಚ್ಚಿದವರು ಮತ್ತೆ ದ್ವೀಪವಾದವರು

ದಾರಿಹಳತಾದ ಹಾಗೆ ಕಥೆ ಹೊಸತಾಗಬೇಕು
ಚಂದ್ರ ಹೊಸತು ಸೂರ್ಯ ಹೊಸತು
ಪುಣ್ಯಕೋಟಿಗೆ ಕಾದು ನಿಂತ ಹುಲಿಗಳೂ
ಹೊಸತು, ದೀಪದ ಬತ್ತಿ ಹೊಸತು
ದೀಪ ಹೊಸತು, ಹಳು ಚಿಟ್ಟೆಯಾಗಿ
ಪಾತರಗಿತ್ತಿ ಹೊಸತು

ಅಪ್ಪನ ಹೆಗಲ ಮೇಲಿನ
ಬಿಕ್ಕುವ ಮಗುವಿಗೆ ದಾರಿ ಹೊಸತು
ಬೇತಾಳನ ಕಥೆ ಹೊಸತು,
ಇಂದ್ರನ ಕಥೆ ತುಂಬ ಕೊಂಬೆ ಬಿಡಬೇಕು
ರಂಬೆ, ತಿಲೋತ್ತಮೆ, ಊರ್ವಶಿ,
ರಾಶಿ ರೆಂಬೆಯಲಿ
ಕಟ್ಟಿದೆಷ್ಟೋ, ಕೊಡವಿದೆಷ್ಟೋ, ಮಹಾರಾಜ
ಕಂಬದಲಿ
ಹೆದ್ದಾರಿಯಾದ ಸಪೂರಗಲ್ಲಿ

ಸಿಮೆಂಟು ಕಾಂಕ್ರೀಟು ಚಾದರಹಾಸಿ
ಹೊಡೆದ ಕವಲುಗಳ ಸಪೂರಗಲ್ಲಿ
ಕಣ್ಣಬಿಟ್ಟು ಮಗು ತದೇಕ ಚಿತ್ತದಲ್ಲಿ
ಕಾಲಕ್ಕೆ ಜೋತುಬಿದ್ದ ನಿಶ್ಶಬ್ದ ಬಾವಲಿ ?

೨

ಬಾವುಟ ಹಿಡಿದು, ಶೀರ್ಷಿಕೆ ಬೇಡುವ ಕಥೆಗಳಿಗೆ
ಮಣ್ಣ ಮರೆತರೂ ಕಣ್ಣ ಕೊನೆಯಲ್ಲಿ
ಬಿಸಿಲಲ್ಲೂ ನಗಬೇಕು ನೆರಳು ಹಿಡಿದು.
ಹುಮ್ಮಸ್ಸಿನ ಹೊಸ ಚಿಗುರು
ಬೆದೆ ಬಿಟ್ಟರೂ ಬೇರು ಮರೆಯದ ಕೆಸರು
ಇದು ಧ್ರುವಸಂದ, ಶಕುಂತಳೆಯ ಪ್ರಶ್ನಿಸಿದ
ಶರ್ಮಿಷ್ಠೆಗೆ ಕಚತೋರಿದ ಪ್ರಹ್ಲಾದ ಬೆಂದ
ದಾರಿ
ದೇವರತೇರು, ರಾಜಕಾರಣಿಯ ಜಯಭೇರಿ

ಮರೆತ ಸ್ವಾತಂತ್ರ್ಯಯೋಧನ ವೇದನೆಯ ಪರಿ
ಸ್ಕೂಲು ಹುಡುಗರು ಪಾಠ ಒಪ್ಪಿಸುವ
ಪ್ರಭಾತ ಫೇರಿ

ಬೆನ್ನ ಮೇಲಿನ ಮಗು ದಾರಿಗಿಳಿದ
ಹೊಂಬಿಸಿಲು, ಉತ್ತರ ಸಿಕ್ಕಿದ ಉತ್ಸಾಹ
ದಾರಿ ಎಷ್ಟೋ ಕವಲು
ಅರಿವು ಬೇರೆ, ಅನುಭವ ಬೇರೆ
ಮತ್ತೆ ಅದೇ ಬಯಲು
ದಾರಿ

**ವಿ. ಎಸ್. ಶ್ಯಾನ್‌ಭಾಗ್**
ನಂ. ೨೦೨, 'ಎ' ವಿಂಗ್, ಬಿಲ್ಡಿಂಗ್ ನಂ. ೨
ಏನಿ ಗಾರ್ಡನ್, ಮೇರಿ ಇಮ್ಯಾಕ್ಯುಲೇಟ್ ಹೈಸ್ಕೂಲ್ ಹತ್ತಿರ
ಬೊರಿವಿಲಿ, ಮುಂಬಯಿ – ೪೦೦ ೦೯೮

ಬಂಡವಾಳಶಾಹಿಗಳೇ ಆಗಿದ್ದಾರೆ. ಇವರ ಧ್ಯೇಯವಿಷ್ಟೇ : ಹೂಡಿಕೆ ಮತ್ತು ಲಾಭ ಗಳಿಕೆ. ಇದರಿಂದಾಚೆಗೆ ಇವರ ನೋಟವಿಲ್ಲ. ಇದರಲ್ಲಿ ಗೆಲ್ಲಲು ಜನರ ನಾಡಿ ಮಿಡಿತದ ಅರಿವು ಬೇಕು. ಅದನ್ನು ಅರಿತು ಕಾರ್ಯಕ್ರಮಗಳನ್ನು ರೂಪಿಸಿದಾಗ ಆ ಚಾನೆಲ್‌ಗಳಿಗೆ ಟಿ.ಆರ್.ಪಿ. ಹೆಚ್ಚು ಸಿಗುವುದು ಸಾಧ್ಯ. ಇವರ ಬಂಡವಾಳ ಸಹ ಲಾಭದೊಂದಿಗೆ ಹಿಂದಿರುಗಲು ಸಾಧ್ಯ. ಅದಕ್ಕೆ ಬೇಕಾದ ಕಾರ್ಯಕ್ರಮಗಳೆಂದರೆ ಜ್ಯೋತಿಷ್ಯ, ಧಾರ್ಮಿಕ ಪ್ರವಚನ, ಹೊಡೆದಾಟ, ಬಡಿದಾಟ, ಬಿಚ್ಚಿಕೊಂಡು ಕುಣಿವ ಕುಣಿತ ಮತ್ತು ನಡಿಗೆ, ಅಪ್ಪಟ ಮಧ್ಯಮ ವರ್ಗದ ಕೌಟುಂಬಿಕ ಕಥನಗಳ ಧಾರಾವಾಹಿ ಇತ್ಯಾದಿ. ಇವುಗಳ ಅಮಲನ್ನು ಏರಿಸಿಕೊಂಡ ಜನ ಜ್ಯೋತಿಷಿಗಳೆಡೆಗೆ, ದೇವರು–ಧರ್ಮ–ದೇವಾಲಯಗಳೆಡೆಗೆ, ಟಿ.ವಿ. – ಸಿನಿಮಾ ಮಂದಿರಗಳೆಡೆಗೆ ತುಡಿಯುವ ಉತ್ಸಾಹವನ್ನು ಬೆಳೆಸಿಕೊಳ್ಳುತ್ತಾರೆ. ಇವರಿಗೆ ವಾಸ್ತವದ ಅರಿವು; ಅದರಾಳದ ಸಾಮಾಜಿಕ ಮತ್ತು ರಾಜಕೀಯ ಸನ್ನಿವೇಶದ ಅರಿವು, ಅದರಲ್ಲಿ ಆಗಬೇಕಾದ ಮೂಲಭೂತ ಬದಲಾವಣೆಯ ಅರಿವು ಮೂಡುವುದು ಸಾಧ್ಯವೇ ಆಗುವುದಿಲ್ಲ. ಇವರ ಜುಟ್ಟಿನಲ್ಲಿರುವ ಮಲ್ಲಿಗೆಯ ವಾಸನೆ ಹೊಟ್ಟೆಯೊಳಗಿನ ಹಸಿವಿನತ್ತ ಇವರ ಗಮನವನ್ನು ಹರಿಯಗೊಡುವಂತೆ ಮಾಡುವುದಿಲ್ಲ. ಇದರಿಂದ ಈ ಕಾರ್ಯಕ್ರಮಗಳ ಪ್ರಾಯೋಜನೆ ಮತ್ತು ಈ ಒಟ್ಟು ವಿದ್ಯುನ್ಮಾನ ಮಾಧ್ಯಮ ವ್ಯವಸ್ಥೆಯನ್ನು ನಿರ್ವಹಿಸುತ್ತಿರುವ ಒಂದು ವರ್ಗ ನಿರಾತಂಕವಾಗಿ ಬದುಕುತ್ತದೆ. ಇದರ ಪರಿಣಾಮವಾಗಿ ರಾಜಕೀಯ ಬಂಡವಾಳಶಾಹಿಗಳು ಸಹ ವಿಧಾನಸಭೆ ಮತ್ತು ಪಾರ್ಲಿಮೆಂಟುಗಳಲ್ಲಿ ಇದ್ದುಕೊಂಡು ಒಟ್ಟು ದೇಶದ ಸನ್ನಿವೇಶದಲ್ಲಿ ತಿಪ್ಪೆ ಸಾರಿಸುವ ಕೆಲಸಗಳನ್ನಷ್ಟೇ ಮಾಡಿಕೊಂಡು, ಜನರಿಗೆ ಅವುಗಳನ್ನು ಬಣ್ಣಬಣ್ಣದಲ್ಲಿ ಮುಂದಿಟ್ಟು ತಮ್ಮ ಮೂಲಭೂತ ಕರ್ತವ್ಯದಿಂದ ದೂರ ಉಳಿಯುತ್ತಾರೆ. ಹೀಗೆ ಒಟ್ಟು ವ್ಯವಸ್ಥೆ, ಮುಂದುವರಿಯುತ್ತಲೇ ಹೋಗುತ್ತದೆ. ಇಂಥಲ್ಲಿ ವಿಶಾಲ ಭಾರತ, ವಿಶಾಲ ಕರ್ನಾಟಕ ಎಂಬ ಪದಗಳು ಕೇಳಿದರೂ ಅಲ್ಲಿ ಸ್ಲಮ್ಮುಗಳು ಯಾಕೆ ? ಜನರಿಗೊಂದು ಚಿಕ್ಕ ನಿವೇಶನ ದುರ್ಲಭವಾದ ವಿಶಾಲ ಭಾರತ ನಿಜಕ್ಕೂ ವಿಶಾಲ ಭಾರತವೇ ? ಹಾಗೊಮ್ಮೆ ಅದು ವಿಶಾಲ

ಭಾರತವೇ ಆಗಿದ್ದಲ್ಲಿ ಈ ಸ್ಲಮ್ಮುಗಳಾಚೆಗೆ ಇರುವ ವಿಶಾಲ ಪ್ರದೇಶ ಯಾರ ಹಿಡಿತದಲ್ಲಿದೆ? ಇವರ ಈ ಆಸ್ತಿಯ ಕೇಂದ್ರೀಕರಣವೇ ಅಲ್ಲವೇ ಬಹುಸಂಖ್ಯಾತರನ್ನು ನಿವೇಶನ ಹೀನರನ್ನಾಗಿ ಗುಡಿಸಲುಗಳಲ್ಲಿ, ಸ್ಲಮ್ಮುಗಳಲ್ಲಿ ಇರುವಂತೆ ಮಾಡಿರುವುದು ಇತ್ಯಾದಿ ಆಲೋಚನೆಗಳು ಜನರಿಗೆ ಅಲ್ಲಿ ಮೂಡಬೇಕು. ಆದರೆ ಹಾಗೆ ಮೂಡಲು ವ್ಯವಧಾನವಾದರೂ ಎಲ್ಲಿದೆ? ಇವರು ತಮ್ಮ ದುಡಿಮೆಯ ಅವಧಿಯಲ್ಲಿ ಯಾವುದೇ ವ್ಯಕ್ತಿಗತ ಚಿಂತನೆಯನ್ನು ಮಾಡುವುದು ಸಾಧ್ಯವಿಲ್ಲ. ಅಂತೆಯೇ ಕೆಲಸಕ್ಕೆ ಹೊರತಾದ ದೇಶ ಸಮಾಜದ ಬಗೆಗೂ ಯೋಚಿಸುವಂತಿಲ್ಲ. ಇಲ್ಲೆಲ್ಲಾ ತಾವು ಗಾಣದ ಎತ್ತಾಗಿ ದುಡಿಯಬೇಕು, ಅಷ್ಟೆ. ಉಳಿದಂತೆ ತಾವು ಮನೆ ಸೇರಿದ ನಂತರವಾದರೂ ಈ ಕುರಿತು ಯೋಚಿಸಬೇಕಷ್ಟೇ! ಆದರೆ ಅಲ್ಲಿ ಬಾಕಿ ಕೆಲಸಗಳು ಕಾದುಕೊಂಡಿರುತ್ತವೆ. ಇವುಗಳ ನಡುವೆ ಮನರಂಜನೆಗಾಗಿ ನಮ್ಮ ಕೈ ಟಿ.ವಿ.ಯ ಸ್ವಿಚ್ಚನ್ನು ಒತ್ತುತ್ತದೆ. ಅಲ್ಲಿಗೆ ಮುಗಿಯಿತು ತಮ್ಮ ಮೇಲಿನ ನಿಯಂತ್ರಣ. ಇಲ್ಲಿಂದಾಚೆಗೆ ತಮ್ಮ ಮಿದುಳನ್ನು ಆ ವಿವಿಧ ಚಾನೆಲ್‌ಗಳು, ಕಾರ್ಯಕ್ರಮಗಳೇ ನಿಯಂತ್ರಿಸುತ್ತವೆ ಮತ್ತು ರೂಪಿಸುತ್ತವೆ. ಜೊತೆಗೆ ಎಂತಹ ಸಂವೇದನೆಯನ್ನು ರೂಪಿಸಿಕೊಳ್ಳಬೇಕು ಎಂದು ಸಹ ಅವು ಒತ್ತಾಯಿಸುತ್ತವೆ. ಈ ನೆಲೆಯಲ್ಲಿ ಒಟ್ಟು ಜನಮಾನಸ ಅಪ್ಪಟ ಮಧ್ಯಮ ವರ್ಗದ್ದಾಗಿ ರೂಪುಗೊಳ್ಳುತ್ತದೆ. ಈ ಮಧ್ಯಮ ವರ್ಗಕ್ಕೆ ಯಾವತ್ತೂ ಮಧ್ಯಮ ಮಾರ್ಗವೇ! ಇದು ಕೆಳವರ್ಗ ಮೇಲ್ವರ್ಗದ ವಿರುದ್ಧ ತಮ್ಮ ಹಕ್ಕಿಗಾಗಿ ಬಂಡೇಳುವ ಮನಸ್ಥಿತಿಯನ್ನು ರೂಪಿಸಿಕೊಳ್ಳುವುದಿಲ್ಲ. ಅಂತೆಯೇ ಮೇಲ್ವರ್ಗವು ಕೆಳವರ್ಗಕ್ಕೆ ತನ್ನ ಬಗ್ಗೆ ಇರದ ಕಾಳಜಿಯ ಬಗ್ಗೆ ತಾನು ತಲೆಕೆಡಿಸಿಕೊಳ್ಳುವುದಿಲ್ಲ. ಹೀಗೆಯೇ ಹುಚ್ಚರ ಸಂತೆ ಸಾಗುತ್ತದೆ.

ಹಿಂದೊಮ್ಮೆ ಸರ್ಕಾರದ ಚಾನೆಲ್‌ಗಳು ಮಾತ್ರ ಚಲಾವಣೆಯಲ್ಲಿ ಇದ್ದಾಗ ಸಮಾಜಕ್ಕೆ ಮೂಲಭೂತವಾಗಿ ಬೇಕಾಗಿದ್ದ ಕ್ರಾಂತಿಕಾರಿ ಕಾರ್ಯಕ್ರಮಗಳು ಇಲ್ಲವಾದರೂ ಸಮಾಜಕ್ಕೆ ಸುಧಾರಣಾವಾದಿ ನೆಲೆಯಲ್ಲಿ ಬೇಕಾಗಿದ್ದ ಕಾರ್ಯಕ್ರಮಗಳನ್ನು ಬೇರೆ ಬೇರೆ ಸಮಯಗಳಲ್ಲಿ ಪ್ರಸಾರ ಮಾಡುತ್ತಿದ್ದವು. ಇಲ್ಲಿ ಕೃಷಿ ಕ್ಷೇತ್ರ, ಶಿಕ್ಷಣ ಕ್ಷೇತ್ರ, ಕೈಗಾರಿಕಾ ಕ್ಷೇತ್ರ, ವಾರ್ತೆಗಳು, ಕವಿತಾಗಾಯನ, ಸತ್ವಭರಿತ ನೃತ್ಯಗಳು, ಅವುಗಳ ನಡುವೆ ಅಪರೂಪಕ್ಕೆ ಅಗ್ಗದ ಚಲನಚಿತ್ರಗಳು ಪ್ರಸಾರವಾಗುತ್ತಿದ್ದವು. ಒಂದು ಬಗೆಯ ಸಾಂಸ್ಕೃತಿಕ ಸಮತೋಲನ ಇಲ್ಲಿತ್ತು. ಇವುಗಳ ನಡುವೆ ಎಲ್ಲಿಯೂ ಇಂದು ದಿನಂಪ್ರತಿ ಪ್ರಸಾರವಾಗುವ ಜ್ಯೋತಿಷ್ಯ ಇತ್ಯಾದಿ ಸಂವಿಧಾನ ವಿರೋಧಿ ಕಾರ್ಯಕ್ರಮಗಳಿಗೆ ಅಲ್ಲಿ ನೆಲೆ ಇರುತ್ತಿರಲಿಲ್ಲ. ಆದರೆ ಇಂದು ವೈಜ್ಞಾನಿಕ ಮನೋಧರ್ಮ, ಜಾತ್ಯತೀತತೆಯನ್ನು ಪ್ರತಿಪಾದಿಸುವ ಸಂವಿಧಾನಕ್ಕೆ ವಿರುದ್ಧವಾಗಿ ನೇರಾನೇರ ಅಂತಹ ಕಾರ್ಯಕ್ರಮಗಳನ್ನು ಎಲ್ಲ ಖಾಸಗಿ ಚಾನೆಲ್‌ಗಳು ಸ್ಪರ್ಧೆಯೋಪಾದಿಯಾಗಿ ಪ್ರಸಾರ ಮಾಡುತ್ತಿವೆ. ಜನರು ಸಹ ಇವುಗಳಿಗೆ ಮುಗಿಬೀಳುತ್ತಿದ್ದಾರೆ. ಇದರಿಂದ ಈ ಚಾನೆಲ್‌ಗಳ ಟಿ.ಆರ್.ಪಿ. ಸಹ ಹೆಚ್ಚಾಗಿ ಸಮಾಜದ ವಾಸ್ತುವೇ ಸರಿ ಇಲ್ಲ ಎಂಬ ಭಾವನೆ ಗಟ್ಟಿಗೊಂಡು, ಒಟ್ಟು ಸಮಾಜದ ವಾತಾವರಣ ಹದಗೆಡುತ್ತಿದೆ. ಇದಕ್ಕೆ ರೇಡಿಯೋ ಎಫ್.ಎಂ. ಚಾನೆಲ್‌ಗಳು ಸಹ ತಮ್ಮ ಕೊಡುಗೆಯನ್ನು ನೀಡಿವೆ. ಇಲ್ಲಿಯ ಕಾರ್ಯಕ್ರಮಗಳು ಸಹ ಸಂಪೂರ್ಣವಾಗಿ ವಾಣಿಜ್ಯೀಕರಣಕ್ಕೆ ಒಳಗಾಗಿವೆ. ಇಲ್ಲಿ ನೆಲ, ಅದರ ಸಂವೇದನೆ ದೂರ. ಅದರ ಜೊತೆಯ ನಿರೂಪಣಾಕಾರರ ಭಾಷೆ ಅತ್ಯಂತ ಪ್ರಕ್ಷುಬ್ಧತೆಯಿಂದ ಕೂಡಿರುತ್ತದೆ. ಇವತ್ತಿನ ವಾತಾವರಣದಲ್ಲಿ ಮೊದಲೇ ಪ್ರಶಾಂತತೆ ಇಲ್ಲ. ಅದರೊಂದಿಗೆ ಇವರ ಭಾಷೆ ಸಹ ಸ್ಪರ್ಧೆಯೋಪಾದಿಯಲ್ಲಿ ಇದೆ. ಬಿ.ಪಿ. ಇರುವವರಿಗೆ ಇವರಿಂದ ಹಾನಿಯೇ ಹೆಚ್ಚು. ಹೀಗೆ ಹುಚ್ಚು ಹುಚ್ಚಾಗಿ ಖಾಸಗಿ ಟಿ.ವಿ. ಮತ್ತು ರೇಡಿಯೋ ಎಫ್.ಎಂ. ಚಾನೆಲ್‌ಗಳು ಹುಚ್ಚು ಕುದುರೆಯಾಗಿ ಓಡುತ್ತಿವೆ. ಕ್ಯಾಲೆಂಡರ್ ಹಿಂದೆ, ಗಡಿಯಾರದ ಹಿಂದೆ ಓಡಿ ಮುಗ್ಗರಿಸುತ್ತಿರುವ ಇವತ್ತಿನ ನಾಗರಿಕರಿಗೆ ಈ ಒಂದು ಆಧುನಿಕ ವಿಕೃತಿ ಸಹ ಕಾಡುತ್ತಿದೆ. ಈ ಮಾದರಿಯಲ್ಲಿ ಇದಕ್ಕೆ ಇಂದು ದಿಕ್ಕು ತೋರದಾಗಿದೆ. ಇಂತಹ ಸಮಾಜದ ಪರಿಭ್ರಮಣದಲ್ಲಿ ಹೊಸ ದಿಕ್ಕು, ಬದಲಾವಣೆಯೆಂಬುದು ಕಷ್ಟ ಸಾಧ್ಯ. ಆದ್ದರಿಂದ ಈ ಖಾಸಗಿ ಚಾನೆಲ್‌ಗಳ ಕಾರ್ಯಕ್ರಮಗಳಿಗೊಂದು ಅಗತ್ಯವಾದ ಜನಪರ ಸಾಂಸ್ಕೃತಿಕ ನೀತಿಯನ್ನು ಅನುಷ್ಠಾನಗೊಳಿಸಬೇಕಾಗಿದೆ. ಈ ಕಾರ್ಯವನ್ನು ಪುನಃ ಬಂಡವಾಳಶಾಹಿ ರಾಜಕಾರಣಿಗಳೇ ಮಾಡಬೇಕಾದ ಪರಿಸ್ಥಿತಿ ಇದೆ. ಇವರಿಗೆ ಜನರ ಶ್ರೇಯೋಭಿವೃದ್ಧಿ, ಆಶಯಗಳಿಗಿಂತ ಈ ವಿದ್ಯುನ್ಮಾನ ಮಾಧ್ಯಮಗಳ ಅಧಿಪತಿಗಳಾದ ಬಂಡವಾಳಶಾಹಿಗಳ ಶ್ರೇಯೋಭಿವೃದ್ಧಿ, ಆಶಯಗಳೇ ಮುಖ್ಯ. ಇವರೀರ್ವರು ಪರಸ್ಪರ ಶ್ರೇಯೋಭಿಲಾಷಿಗಳಾಗಿದ್ದಾರೆ. ಆದ್ದರಿಂದ ಜನರಿಗೂ ಕೇಳದ ಇಂತಹ ಸಾಂಸ್ಕೃತಿಕ ನೀತಿಯ ಮಾತು ಇವರಿಗೆ ದೂರವೇ ಆಗುತ್ತದೆ.

ಯಾವಾಗಲೂ ಒಂದು ಸಾಂಸ್ಕೃತಿಕ ನೀತಿ ಎಂಬುದಿರುತ್ತದೆ. ಆದರೆ ಅದು ಅಸ್ಪಷ್ಟವೂ ಗೊಂದಲಮಯವೂ ಅಡ್ಡಗೋಡೆ ಮೇಲೆ ದೀಪ ಇಟ್ಟು ಬೆಳಕು, ಎರಡೂ ದಿಕ್ಕಿನತ್ತ ವಾಲುವ ದ್ವಂದ್ವಾತ್ಮಕ ಬಗೆಯದ್ದು ಆಗಿರುತ್ತದೆ. ಅಂತಹ ನೀತಿ ಅಸ್ತಿತ್ವದಲ್ಲಿರುವುದು ಪ್ರಸ್ತುತ ಖಾಸಗಿ ಚಾನೆಲ್‌ಗಳ ಅಗ್ಗದ ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ಸ್ಪಷ್ಟವಾಗುತ್ತದೆ. ಇದಕ್ಕೆ ವಿರುದ್ಧವಾಗಿ ಸ್ಪಷ್ಟ ಮತ್ತು ಜನಪರ ಸಾಂಸ್ಕೃತಿಕ ನೀತಿ ಅನುಷ್ಠಾನಕ್ಕೆ ಬಂದಾಗ ಎಲ್ಲಾ ಖಾಸಗಿ ಚಾನೆಲ್‌ಗಳು ಸಂವಿಧಾನದ ಆಶಯಗಳಿಗೆ ಪೂರಕವಾದ ಕಾರ್ಯಕ್ರಮಗಳನ್ನು ಮಾತ್ರ ಪ್ರಸಾರ ಮಾಡಬೇಕಾಗುತ್ತದೆ. ಆಗ ವೈಜ್ಞಾನಿಕ ಮನೋಧರ್ಮಕ್ಕೆ ವಿರುದ್ಧವಾದ ಜ್ಯೋತಿಷ್ಯ ಇತ್ಯಾದಿ ಕಾರ್ಯಕ್ರಮಗಳನ್ನು ನಿಲ್ಲಿಸಬೇಕಾಗುತ್ತದೆ. ಅಂತೆಯೇ ಜಾತ್ಯತೀತತೆಗೆ ಒತ್ತು ಕೊಡುವ ಕೊಂಚ ಸಾಂಸ್ಥಿಕ ಧರ್ಮ ದೂರವಾದ ಕಾರ್ಯಕ್ರಮಗಳನ್ನು ಪ್ರಸಾರ ಮಾಡಬೇಕಾಗುತ್ತದೆ. ಜೊತೆಗೆ ದಿನದ ಇಪ್ಪತ್ತನಾಲ್ಕು ಗಂಟೆಗಳು ಸಹ ಮನರಂಜನೆಗೇ ಮೀಸಲು ಮಾಡದೆ ಅದಕ್ಕೆ ಗೊತ್ತುಪಡಿಸಲ್ಪಟ್ಟ ಸೀಮಿತ ಕಾಲಾವಧಿಯನ್ನು ಗುರುತು ಮಾಡಬೇಕಾಗುತ್ತದೆ. ಆಗ ಕೃಷಿ, ಶಿಕ್ಷಣ, ಜಾನಪದ, ಕೈಗಾರಿಕೆ, ಮಹಿಳೆ, ಶೋಷಿತ ಇತ್ಯಾದಿ ಎಲ್ಲ ಕ್ಷೇತ್ರಗಳಿಗೆ ಅಲ್ಲಿ ನೆಲೆ ಸಿಗುತ್ತದೆ. ಈ ನೀತಿಗೆ ಒಳಪಟ್ಟು ಖಾಸಗಿ ಚಾನೆಲ್‌ಗಳ ಕಾರ್ಯಕ್ರಮಗಳು, ಎಲ್ಲಾ ಚಾನೆಲ್‌ಗಳಿಗೂ ಸಮಾನವಾಗಿ ಅನ್ವಯ ವಾಗುವಂತಹ ನಿರ್ದಿಷ್ಟ ಕಾರ್ಯಕ್ರಮಗಳ ಸಮಾನ ವೇಳಾಪಟ್ಟಿಯನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಆಗ ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಎಲ್ಲ ಚಾನೆಲ್‌ಗಳು ಸಹ ಒಂದು ನಿರ್ದಿಷ್ಟ ಕ್ಷೇತ್ರವನ್ನು ಕುರಿತ ಕಾರ್ಯಕ್ರಮಗಳನ್ನೇ ಪ್ರಸಾರಮಾಡುತ್ತವೆ. ಇದು ಸಾಧ್ಯವಾಗಬೇಕು. ಹಾಗೆ ಸಾಧ್ಯವಾಗಬೇಕಾದ ಸಾಂಸ್ಕೃತಿಕ ನೀತಿಯನ್ನು ಸರ್ಕಾರ ಅನುಷ್ಠಾನಗೊಳಿಸ ಬೇಕು. ಅದಕ್ಕೆ ಪೂರ್ವಭಾವಿಯಾಗಿ ಬೇಕಾದ ಜನಾಗ್ರಹ ಮಾಡಬೇಕು.

ಹಾಗೊಮ್ಮೆ ಭಾರತ ಸರ್ಕಾರವು ದೇಶದ ಎಲ್ಲ ಚಾನೆಲ್‌ಗಳನ್ನು ತನ್ನ ನಿರ್ದಿಷ್ಟ ಸಾಂಸ್ಕೃತಿಕ ನೀತಿ–ಯೋಜನೆಗೆ ಅಳವಡಿಸಿದರೆ ವಿದೇಶೀ ಚಾನೆಲ್‌ಗಳು ಇಲ್ಲಿ ನುಸುಳುವುದು ಸಾಧ್ಯವಿಲ್ಲವೇ? ಎಂಬ ಪ್ರಶ್ನೆ ಏಳುತ್ತದೆ. ಸದ್ಯ ಅಂತಹ ಯಾವುದೇ ಚಾನೆಲ್‌ಗಳಿಗೆ ನಿರ್ಬಂಧವಿಲ್ಲ. ಆದರೆ ಇವುಗಳ ಮೇಲೆ ಕೇಂದ್ರ ಸರ್ಕಾರ ನಿಯಂತ್ರಣ ಹೇರುವುದು ಸಾಧ್ಯವಿದೆ. ಜಾಗತೀಕರಣದ ಈ ಸನ್ನಿವೇಶದಲ್ಲಿ ಇದು ಕೊಂಚ ಕಷ್ಟವೆನ್ನಿಸಿದರೂ ಇದು ಸಾಧ್ಯ.

ಹೀಗೆ ದೇಶದ ಎಲ್ಲ ಖಾಸಗಿ ಚಾನೆಲ್‌ಗಳ ಹುಚ್ಚು ಕಾರ್ಯಕ್ರಮಗಳ ಮೇಲೆ ಸರ್ಕಾರವು ನಿಯಂತ್ರಣವನ್ನು ಸಾಧಿಸಬೇಕಿದೆ. ಅದಕ್ಕಾಗಿ ಸ್ಪಷ್ಟ ಜನಪರ ನೀತಿಯನ್ನು ರೂಪಿಸಿ, ಅದನ್ನು ಅನುಷ್ಠಾನಗೊಳಿಸಬೇಕಿದೆ. ಆಗ ಅದರ ಮಾರ್ಗಸೂಚಿಗೆ ಅಳವಡುವ ಯಾವುದೇ ಖಾಸಗಿ ಚಾನೆಲ್ ಇಂದಿನ ಹುಚ್ಚು ಕುದುರೆಯಂತೆ ಓಡುವುದು ತಪ್ಪುತ್ತದೆ. ಇದರಿಂದ ಜನರ ಮನಃಸ್ವಾಸ್ಥ್ಯ ಸಹ ಉಳಿಯುತ್ತದೆ. ಈ ಮೂಲಕ ಇಂದು ಟಿ.ವಿ. ಮತ್ತು ಎಫ್.ಎಂ. ಮೂಲಕ ಮನೆಯನ್ನು ಸಹ ಆವರಿಸಿರುವ ಸಾಂಸ್ಕೃತಿಕ ಪ್ರಕ್ಷುಬ್ಧತೆ ತಪ್ಪುತ್ತದೆ.

ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ
ಸಹ ಪ್ರಾಧ್ಯಾಪಕ, ಕನ್ನಡ ವಿಭಾಗ, ಸ್ನಾತಕೋತ್ತರ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ – ೫೬೩ ೧೦೨





# ವೈದ್ಯ ಕಲಾವಿದ ಅಂಕದ ಅರಳಿಸಿದ ಚುಕ್ಕೆ ಚಿತ್ರ...

ಕೆಲವರು ಕಲೆಯನ್ನು ಕಲಿತು ಕರಗತ ಮಾಡಿಕೊಂಡರೆ ಕೆಲವರಿಗೆ ಕಲೆಯು ತಾನಾಗಿಯೇ ಸಿದ್ಧಿಸಿರುತ್ತದೆ. ಅಂಥವರಲ್ಲಿ ವಿಜಾಪುರದ ಚಿತ್ರಕಲಾರಾಧಕ, ಬಹುಮುಖ ಪ್ರತಿಭೆಯ ಆಯುರ್ವೇದ ತಜ್ಞವೈದ್ಯ ಡಾ॥ ಗುರುಲಿಂಗಪ್ಪ ಅಂಕದ (ತಿಮ್ಮಾಪೂರ) ಕೂಡ ಒಬ್ಬರು. ಸದ್ಯ ಗುಲ್ಬರ್ಗಾದಲ್ಲಿ ಆಯುರ್ವೇದ ತಜ್ಞವೈದ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಮನೆಯಲ್ಲಿ ಯಾರೊಬ್ಬರೂ ಕಲಾವಿದರಿಲ್ಲ ಆದರೂ ಇವರು ವೈದ್ಯವೃತ್ತಿಯೊಂದಿಗೆ ಚಿತ್ರಕಲಾ ಕ್ಷೇತ್ರದಲ್ಲಿ ಸಾಧಿಸಿದ್ದು ಬಹಳಷ್ಟಿದೆ. ಸತತ ಪ್ರಯತ್ನ, ಏಕಾಗ್ರತೆಯಿಂದ ತರಬೇತಿ ಪಡೆದ ಕಲಾವಿದರನ್ನೂ ಮೀರಿಸುವಂತೆ ಸುಂದರವಾಗಿ, ಪ್ರಮಾಣಬದ್ಧವಾಗಿ, ಸೂಕ್ತ ವರ್ಣಸಂಯೋಜನೆಯಿಂದ ಚಿತ್ರ ಬಿಡಿಸುತ್ತಾರೆ.

ನಿಸರ್ಗಚಿತ್ರ, ಜಲವರ್ಣ, ಪೆನ್ಸಿಲ್ ಸ್ಕೆಚ್ ಮತ್ತು ವಿಶೇಷವಾಗಿ ಚುಕ್ಕೆಚಿತ್ರದಲ್ಲಿ ಇವರು ಹೆಸರುವಾಸಿಗಳು. ವಿಜಾಪುರದ ಪ್ರಸಿದ್ಧ ಚುಕ್ಕೆಚಿತ್ರ ಕಲಾವಿದ ''ವಿಶ್ವನಾಥ ಬುರಾಣಪುರ''ರವರ ಚುಕ್ಕೆಚಿತ್ರಗಳನ್ನು ನೋಡಿ ಪ್ರಭಾವಿತರಾಗಿ ಇವರೂ ಅದರಲ್ಲಿ ಆಸಕ್ತಿ ಬೆಳೆಸಿಕೊಂಡರು. ಬುರಾಣಪುರ ಅವರ ಚಿತ್ರಗಳನ್ನೇ ಬಿಡಿಸುತ್ತ ನಾನು ಈ ಮಟ್ಟಕ್ಕೆ ಬಂದಿದ್ದೇನೆಂದು ಅವರನ್ನು ನೆನೆಯುತ್ತಾರೆ. ಎಲ್ಲ ಮಾಧ್ಯಮಗಳಿಗಿಂತಲೂ ಇವರಿಗೆ 'ಚುಕ್ಕೆಚಿತ್ರ'ದಲ್ಲಿ ತುಂಬಾ ಆಸಕ್ತಿಗೆ ಕಾರಣ, ಇದು ತಾಳ್ಮೆ, ಏಕಾಗ್ರತೆ ಕಲಿಸಿಕೊಡುತ್ತದೆ ಮತ್ತು ಇದರಿಂದ ಮನಸ್ಸು ಪ್ರಶಾಂತವಾಗುತ್ತದೆ ಎಂಬುದು. ಇಲ್ಲಿ ಕೇವಲ ಚುಕ್ಕೆಗಳಿಂದಲೇ ಒಂದು ಚಿತ್ರ ರಚನೆಯಾಗಬೇಕು. ವಾರಗಳು, ತಿಂಗಳುಗಳೇ ಬೇಕು ಮತ್ತು ಏಕಾಗ್ರತೆಯಿಂದ, ಸಂಯಮದಿಂದ ಮಾಡುವ ಕಲೆ ಇದು.

ಇವರು ಈ ಚುಕ್ಕೆಚಿತ್ರಗಳಿಗೆ ಯಾವುದೇ ವಿಶೇಷವಾದ ಪೆನ್ನನ್ನೇನೂ ಬಳಸಿಲ್ಲ ಎಂಬುದೇ ಇಲ್ಲಿ ವಿಶೇಷ. ಚುಕ್ಕೆಚಿತ್ರ ರಚನೆಗಾಗಿಯೇ ಸಿಗುವ ಸುಮಾರು ೫೦೦ ರೂ. ಬೆಲೆಬಾಳುವ 'ರೋಟ್ರಿಂಗ್' ಪೆನ್ನನ್ನು ಇವರು ಈವರೆಗೆ ಬಳಸಿಯೇ ಇಲ್ಲ. ಕೇವಲ ಸಾಧಾರಣವಾಗಿ ಸಿಗುವ ಬಣ್ಣ ಬಣ್ಣದ ಸ್ಕೆಚ್ ಪೆನ್‌ಗಳಿಂದಲೇ ಈ ಚಿತ್ರಗಳು ಇವರ ಕೈಯಲ್ಲಿ ಮೂಡಿಬಂದಿವೆ.

**ಸಂಗಮನಾಥ ರೇವತಗಾಂವ**
'ಕೃತಿಲೇಖ', ಪ್ಲಾಟ್ ನಂ. ೫೭, ಬಿದ್ದಾಪೂರ ಕಾಲೋನಿ, ಗುಲ್ಬರ್ಗಾ-೫೮೫೧೦೩










Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

